# ಚಿಮಣಾಜಿ ಅಪ್ಪಾ.

[ ಐತಿಹಾಸಿಕ ಕಾದಂಬರಿ. ]



ರಾಮಚಂದ್ರ ತ್ರ್ಯಂಬಕ ಕರ್ಪೂರ.

೧೯೨೪



ಬೆಲೆ ರೂ. ೧-೨-೦

# ಚಿಮಣಾಜಿ ಅಪ್ಪಾ.

ಅಥವಾ

# ಕಲಿಯುಗದ ಪರಶುರಾಮ.

(ಐತಿಹಾಸಿಕ ಕಾದಂಬರಿ.)

ಲೇಖಕ—

ರಾ. ತ್ರ್ಯ. ಕರ್ಪೂರ,

ಮ್ಯಾನೇಜರ ಸ. ಚ.,

ಆನಂದವನ.

ಪ್ರಕಾಶಕ—

ಎಲ್ಲೋ ಗುಡ್ಡೋ ಕುಲಕರ್ಣಿ,

ಎಡಿಟರ, ಸ. ಚ. ಆನಂದವನ.

೧೯೨೮.

ಬೆಲೆ ರೂ. ೧-೨-೦



# ಪ್ರಸ್ತಾವನೆ.

ಮರಾಟರ ಸಾಮ್ರಾಜ್ಯದಲ್ಲಿ ಶಿವಾಜಿ ಮಹಾರಾಜರ ತರುವಾಯ ಪ್ರಸಿದ್ಧಪುರುಷರೆಂದರೆ ಮೊದಲನೇ ಬಾಜೀರಾಯನೇ ಸರಿ! ಬಾಜೀರಾಯ ನಂತೆ ಆತನ ತಮ್ಮನಾದರೂ ಅಂಥ ರಣಧುರಂಧರನಾಗಿದ್ದನು. ಈತನೇ ಪ್ರಸ್ತುತ ಕಾದಂಬರಿಯ ನಾಯಕನಾದ ಚಿಮಣಾಜಿ ಅಪ್ಪಾಜಿಯು! ಈ ಬಂಧುದ್ವಯರು ಮಹಾರಾಷ್ಟ್ರ ಸಾಮ್ರಾಜ್ಯವನ್ನು ವಿಸ್ತರಿಸಿದರು. ಶಿವಾಜಿ ಮಹಾರಾಜರ ಪಶ್ಚಾತ್ ಮುರುಕಳಿಗೆ ಬಂದ ಮಹಾರಾಷ್ಟ್ರ ಸಾಮ್ರಾಜ್ಯ ವನ್ನು ಪುನರುದ್ಧಾರ ಗೋಳಿಸಿದವರೆಂದರೆ ಈ ವೀರದ್ವಯರೇ ಆಗಿರುವರು. ಆಗಿನ ಮಹತ್ವದ ಪ್ರಸಂಗದಲ್ಲಿ ಬಾಜೀರಾವ ಹಾಗು ಚಿಮಣಾಜಿಅಪ್ಪಾ ನಂಥ ನರವೀರಶಿರೋಮಣಿಗಳು ಉದಯಕ್ಕೆ ಬಾರದಿದ್ದರೆ ಮಹಾರಾಷ್ಟ್ರ ಸಾಮ್ರಾಜ್ಯವು ಆಗ್ಗೇ ಮುರಿದು ಮುಕ್ಕಾಬಟ್ಟೆಯಾಗುತ್ತಿತ್ತು. ಇರಲಿ.

ಪ್ರಸ್ತುತ ಕಾದಂಬರಿ ನಾಯಕನಾದ ಚಿಮಣಾಜಿಅಪ್ಪಾಜಿಯಲ್ಲಿ ಅನುಕರಣೀಯ ಗುಣಗಳು ಹಲವಿರುವವು. ಅವುಗಳಲ್ಲಿ ಏಕಪತ್ನೀವ್ರತವು ಶ್ರೇಷ್ಠವಾಗಿರುವದು. ಅದರಂತೆ ಪರಧರ್ಮಸಹಿಷ್ಣುಗುಣವೂ ಭೂತ ದಯೆಯೂ ಕ್ಷಮೆಯೂ ಮೊದಲಾದ ಗುಣಗಳು ಒಂದಕ್ಕಿಂತಲೂ ಒಂದು ಹೆಚ್ಚಾಗಿರುವವು. ಇಂಥ ವೀರಶಿರೋಮಣಿಯ ಆಯುಷ್ಯದಲ್ಲಿ ಒದಗಿದ ವಸಯಿ ಕಾಳಗದ ಇತಿಹಾಸವು ಈ ಕಾದಂಬರೀ ರೂಪದಿಂದ ಪ್ರಸಿದ್ಧ ವಾದದ್ದಕ್ಕೆ ತುಂಬಾ ಸಮಾಧಾನವಾಗುತ್ತದೆ. ಭಾರತಭೂಮಾತೆಯ ಸುಪುತ್ರರೆನಿಸುವ ಇಂಥ ವೀರಾಗ್ರೇಸರರ ಕಾದಂಬರಿಗಳು ಚಂದ್ರಿಕೆಯಲ್ಲಿ ಅಧಿಕವಾಗಿ ಪ್ರಸಿದ್ಧವಾಗಲೆಂದು ಹಾರೈಸಿ ಈ ಅಲ್ಪ ಪ್ರಸ್ತಾವನೆಯನ್ನು ಮುಗಿಸುವೆನು.

ಸಜ್ಜನ ವಿಧೇಯ,<br>
ರಾ. ತ್ರ್ಯ. ಕರ್ಪೂರ,<br>
ಮ್ಯಾ, ಸ. ಶಾಲ

ಶ್ರೀ ಕ್ಷೇತ್ರ ಆನಂದವನ,<br>
ತಾ|| ೧೮-೨-೨೮.

# ವಿಷಯಾನುಕ್ರಮಣಿಕೆ.





# ಚಿಮಣಾಜಿ ಅಪ್ಪಾ

ಅಥವಾ

# ಕಲಿಯುಗದ ಪರಶುರಾಮ.



## (೧) ದುಷ್ಟಗ್ರಹ.






ಶಾಲಿವಾಹನಶಕದ೧೬೬೧ನೇ ಸಾಲಿನ ಮಾಘಮಾಸದ ಒಂದು ದಿನ ಮಧ್ಯರಾತ್ರಿಯ ಸಮಯವು; ಪಿಂಪಳ ಗ್ರಾಮದ ಜನರು ನಿಶ್ಚಿಂತೆಯಿಂದ ನಿದ್ದೆ ಮಾಡುತ್ತಿದ್ದರು. ಸರ್ವತ್ರದಲ್ಲೂ ಶಾಂತಿಯ ಸಾಮ್ರಾಜ್ಯವು ಪ್ರಸ್ಥಾಪಿತವಾಗಿತ್ತು. ಹಕ್ಕಿಪಕ್ಕಿಗಳು ಕೂಡಾ ವಿ-ಶ್ರಾಂತಿಯನ್ನು ಹೊಂದುತ್ತಿದ್ದವು; ಆದರೆ ಗ್ರಾಮದ ಕಾವಲುಗಾರರು ಮಾತ್ರ ಕಣ್ಣಿಗೆ ಕಣ್ಣು ಹಚ್ಚದೆ ಕುಳಿತುಕೊಂಡಿದ್ದರು. ಆ ಕಾವಲುಗಾರರು ಒಂದು ಎತ್ತರವಾದ ಕೊತ್ತಳದಮೇಲೆ ಒಂದು ಗುಡಿಸಲದ ಮುಂದೆ ಕುಳಿತುಕೊಂಡಿದ್ದರು. ಅವರ ಮುಂದೆ ದೊಡ್ಡದೊಂದು ಕಟ್ಟಿಗೆಯ ತುಂಡು ಉರಿಯುತ್ತಿತ್ತು. ನಾಲ್ವರು ಕಾವಲುಗಾರರು ಅದರ ಸುತ್ತುವರೆದು ಕುಳಿತು ತಂಬಾಕ ಸೇದುತ್ತಿದ್ದರು. ಅವರು ಯಾವ ಮಾ-ತನ್ನೂ ಆಡುತ್ತಿರಲಿಲ್ಲ. ತಂಬಾಕ ಸೇದುವಾಗ ನಡನಡುವೆ ಕೆಮ್ಮು ಬಂದು ಅಲ್ಲಿರುವ ಶಾಂತತೆಯನ್ನು ಮಾತ್ರ ಭಂಗಪಡಿಸುತ್ತಿತ್ತು.

ಕೆಲ ಹೊತ್ತಿನಮೇಲೆ ಒಬ್ಬ ಕಾವಲುಗಾರನು—ರಾಮಜೀ, ಈ ಫಿರಂಗೀ ಜನರ ಕಾಟವು ಬಹಳ ಹೆಚ್ಚಾಯಿತು. ಇವರು ಹೀಗೆ ದಿನಾಲು

ಒಂದೊಂದು ಊರು ಸುಲಿಯುತ್ತ ಹೋದರೆ ಮುಂದೆ ಗತಿಯೇನು? ನನ ಗೆಂತೂ ನೆಟ್ಟಗೆ. ಕಾಣುವದಿಲ್ಲವಪ್ಪಾ, ಎಂದು ನುಡಿದನು. ರಾಮುಜಿಯು ಏನೋ ಪ್ರತ್ಯುತ್ತರ ಕೊಡಬೇಕೆಂದು ಹವಣಿಸುತ್ತಿರುವಷ್ಟರಲ್ಲಿ ಗ್ರಾಮು ದಿಂದ ಕೆಲ ಅಂತರದಮೇಲೆ ಪುಂಡರ ಸುಳಿದಾಟವು ಕಂಡುಬಂದಿತು. ಆಗೆ ಅವನು ಲಕ್ಷಗೊಟ್ಟು ಪುಂಡರ ಸುಳವನ್ನು ನೋಡಿ—"ಎಲೆ, ಗಾತ ಆಯಿ ತಲೆ, ಆ ಕುಲಗೇಡಿ ಫಿರಂಗಿಗಳು ಬಂದೇಬಿಟ್ಟರು; ಭೀಮಾ, ಲಗು ಕೊತ್ತ ಳದಿಂದ ಕೆಳಗೆ ಹಾರು; ಆ ನಮ್ಮ ಸೂರ್ಯಾಜಿರಾಯರಿಗೂ, ರಾಘಪ್ಪನವ ರಿಗೂ ಸುದ್ದೀ ಮುಟ್ಟಿಸಿ ಬಾ; ಎಲೇ ಖಂಡ್ಯಾ, ನೀನು ನಮ್ಮ ಓಣಿಯೊ ಳಗಿನ ಜನರನ್ನೆಲ್ಲ ಎಬ್ಬಿಸು ಹೋಗು; ಈ ದಿನ ಆ ಸೊಟ್ಟ ಫಿರಂಗೀ ಜನರಿಗೆ ಕೈ ತೋರಿಸಿಬಿಡೋಣ."

ಈ ಮೇರೆಗೆ ರಾಮುಜಿಯು ಮಾತನಾಡುತ್ತಿರಲು, ಭೀಮನೂ, ಖಂ-ಡೋಬನೂ ಸರಸರ ಕೊತ್ತಳದಿಂದಿಳಿದು ಊರಲ್ಲಿ ನಡೆದರು. ಅವರು ಜನ ರನ್ನು ಎಬ್ಬಿಸುತ್ತಿರಲು, ಫಿರಂಗೀಜನರ ದೊಡ್ಡದೊಂದು ಗುಂಪು ಆ ಗ್ರಾಮು ವನ್ನು ಮುತ್ತಿಬಿಟ್ಟಿತು.

ಸೂರ್ಯಾಜಿರಾಯನೂ, ರಾಘೋಪಂತನೂ ಆ ಗ್ರಾಮುದಲ್ಲಿ ಪ್ರಮುಖರಾಗಿದ್ದರು. ಅವರು ಒಳ್ಳೇ ಎದೆಗಾರರಿದ್ದು, ಲಢಾಯಿಯಲ್ಲಿ ನಿಪುಣರಿದ್ದರು. ಅವರ ಬಳಿಯಲ್ಲಿ ಕತ್ತಿ, ಢಾಲು, ಭಲ್ಲೆ, ಬರ್ಚಿ ಮೊದ ಲಾದ ಆಯುಧಗಳಿದ್ದವು. ಈ ಆಯುಧಗಳನ್ನು ಉಪಯೋಗಿಸಲಿಕ್ಕೆ ಆಗಿನ ಕಾಲದಲ್ಲಿ ಯಾರ ಅಡ್ಡಿಯೂ ಇದ್ದಿಲ್ಲ. ಸೂರ್ಯಾಜಿಯು ತನ್ನ ಊರೊಳಗಿನ ಕೆಲಜನ ತರುಣರಿಗೆ ಯುದ್ಧಶಿಕ್ಷಣವನ್ನು ಕೊಟ್ಟಿದ್ದನು. ಪೆಂಡಾರಿಗಳ ಕಾಟವು ಮೇಲಿಂದ ಮೇಲೆ ಇದ್ದದರಿಂದ ಅವರು ಆ ಶಿಕ್ಷಣ ವನ್ನು ಹೊಂದಲೇಬೇಕಾಗಿತ್ತು.

ಕಾವಲುಗಾರರು ಹೇಳಿದ ಸುದ್ದಿಯನ್ನು ಕೇಳಿ ಸೂರ್ಯಾಜಿಯು ಎದ್ದು ಬರುವಷ್ಟರಲ್ಲಿ ಫಿರಂಗೀ ಜನರು ಕೋಟೆಯ ಬಾಗಿಲವನ್ನು ಕೆಡವುವ ಸಾಹಸವನ್ನು ನಡಿಸಿದ್ದರು. ಕೆಲವರು ಅಡ್ಡಗೋಡೆಗಳನ್ನು ಕೆಡವುತ್ತಿ ದ್ದರು. ಸೂರ್ಯಾಜಿಯು ಎಲ್ಲ ಆಯುಧಗಳನ್ನು ವ್ಯವಸ್ಥೆಯಿಂದಿರಿಸಿದ್ದನು. ಆತನು ತನ್ನ ಜನರನ್ನು ಕೂಡ ಹಾಕಿ ಶತ್ರುಗಳ ಮೇಲೆ ಸಾಗಿ ಹೋದನು. ಅಷ್ಟರಲ್ಲಿ ರಾಘೋಬನೂ ಒಂದು ಟೋಳಿಯನ್ನು ಕಟ್ಟಿಕೊಂಡು ಸೂರ್ಯಾ

ಜಿಯ ಸಹಾಯಕ್ಕೆ ಬಂದನು, ಪಿಂಪಳಗ್ರಾಮವು ಸಣ್ಣದು; ಅಲ್ಲಿಯ ಜನ ವಸತಿಯಾದರೂ ತಕ್ಕಮಟ್ಟಿಗಿತ್ತು. ಶತ್ರುಗಳಿಗೆ ಎದುರಾಗುವಂಥ ಬಂಟರು ಸರಾಸರಿ ಐವತ್ತು ಜನರಿದ್ದರು. ಫಿರಂಗೀಜನರು ನೂರರವರೆಗೆ ಇದ್ದರು. ಆದ್ದರಿಂದ ಅವರು ಹಾಹಾ ಅನ್ನುವಷ್ಟರಲ್ಲಿ ಕೋಟೆಯ ಬಾಗಿಲವನ್ನು ಕೆಡವಿ ಒಳಸುಗ್ಗಿದರು. ಪಿಂಪಳಗ್ರಾಮದ ಜನರಿಗೂ ಫಿರಂಗಿಗಳಿಗೂ ಕೈಗೆ ಕೈಹತ್ತಿತು. ಒಂದು ತಾಸಿನ ವರೆಗೆ ಒಳ್ಳೇ ಕಾಳಗವು ನಡೆಯಿತು. ಆದರೆ ಜನ ಸಂಖ್ಯಾಬಾಹುಲ್ಯರೂ. ಕ್ರೂರ ಆಯುಧಪಾಣಿಗಳೂ ಆದ ಫಿರಂಗೀಜನರ ಮುಂದೆ ಪಿಂಪಳಗ್ರಾಮದ ಕೆಚ್ಚೆದೆಯ ತರುಣರು ತಡೆಯಲಿಲ್ಲ. ಕೆಲಜನರು ಧಾರಾತೀರ್ಥದಲ್ಲಿ ಪತನಹೊಂದಿದರು. ಕೆಲ ಜನರು ಓಡಿ ಹೋದರು.

ಹೀಗೆ ಪಿಂಪಳಗ್ರಾಮದ ಕೆಚ್ಚೆದೆಯ ತರುಣರು ಕಾಲ್ದೆಗೆಯಲು ಫಿರಂಗೀಜನರಿಗೆ ಇಮ್ಮಡಿ ಆವೇಶ ತುಂಬಿತೆಂಬದನ್ನು ಬರೆಯಲವಶ್ಯವಿಲ್ಲ. ಅವರು ಮೊದಲೇ ಕ್ರೂರಬುದ್ಧಿಯಿಂದ ಹಳ್ಳಿಯನ್ನು ಸುಲಿಯಲಿಕ್ಕೆ ಬಂದವರು, ಆದರಲ್ಲಿ ಆ ಹಳ್ಳಿಯ ಜನರು ಮೊದಲು ಶೌರ್ಯವ ತೋರಿಸಿ ಬಳಿಕ ಅಂಜಿ ಓಡಿದ್ದರಿಂದ ಆ ಗ್ರಾಮದ ಜನರ ಮೇಲೆ ಅವರ ಕ್ರೂರಕಟಾಕ್ಷವು ಮತ್ತಿಷ್ಟು ಹೆಚ್ಚಿತು, ಅವರು ಅತ್ಯಂತ ಕ್ರೂರತನದಿಂದ ಆ ಗ್ರಾಮವನ್ನು ಸುಲಿದು ಆ ಗ್ರಾಮಕ್ಕೆ ಕೊಳ್ಳಿಯನ್ನು ಕೊಟ್ಟು ಮೂರು ನಾಲ್ಕು ಜನ ಸುಂದರ ತರುಣಿಯರನ್ನೂ ೧೦-೧೨ ಜನ ತರುಣರನ್ನೂ ಸೆರೆಹಿಡಿದುಕೊಂಡು ವಿಜಯದ ಉಬ್ಬಿನಿಂದ ಹೊರಟು ಹೋದರು.

ಪ್ರಿಯವಾಚಕರೇ, ಶಾಂತಿಯ ಸಾಮ್ರಾಜ್ಯದಲ್ಲಿದ್ದ ನಮಗೆ—ನಿರ್ವೀರ್ಯರಾದ ನಮಗೆ ನಮ್ಮ ಪೂರ್ವಜರ ಕಷ್ಟದ ಕಲ್ಪನೆಯಾಗಲಿ-ಸಾಮರ್ಥ್ಯದ ಕಲ್ಪನೆಯಾಗಲಿ ಯಥಾರ್ಥವಾಗಿ ಬರಲಾರದು; ನಮ್ಮ ಕಥಾನಕವು ನಡೆದ ಕಾಲದಲ್ಲಿ ವಸಯೀಪ್ರಾಂತದ ಭಾರತೀಯ ಪ್ರಜೆಗಳಿಗೆ ಬಹಳ ಕಷ್ಟವಿತ್ತು. ಪಾಶ್ಚಾತ್ಯರಾಷ್ಟ್ರಗಳ ಜನರ ಸುಳಿದಾಟವು ಪಶ್ಚಿಮಸಮುದ್ರತೀರದಲ್ಲಿ ಹೆಚ್ಚಾಗತೊಡಗಿತ್ತು. ಮುಂಬಯಿಯಲ್ಲಿ ಇಂಗ್ಲಿಷರು ವ್ಯಾಪಾರದ ವಖಾರಗಳನ್ನು ಹೂಡಿದ್ದರು. ಧೂರ್ತರಾದ ಇಂಗ್ಲಿಷ ಜನರು ವ್ಯಾಪಾರದಿಂದ ದುಡ್ಡುಗಳಿಸುವ ಹವ್ಯಾಸವುಳ್ಳವರಾದ್ದರಿಂದ ಇವರಿಂದ ಹಿಂದುಜನರಿಗೆ ಯಾವ ಬಗೆಯ ತೊಂದರೆಯೂ ಇದ್ದಿಲ್ಲ.

ಆದರೆ ಪೋರ್ತುಗೀಜರು ಮಾತ್ರ ಧರ್ಮಪ್ರಸಾರಕ್ಕೆ ಟೊಂಕಕಟ್ಟಿದ್ದರಿಂದ ಅವರಿಂದ ಹಿಂದೂಜನರಿಗೆ ಬಹಳ ತೊಂದರೆಯಾಗುತ್ತಿತ್ತು. ಪೋರ್ತುಗೀಜರ ಲಕ್ಷವು ದ್ರವ್ಯಸಂಪಾದನದ ಕಡೆಗಾಗಲಿ, ರಾಜ್ಯಸಂಪಾದನದ ಕಡೆಗಾಗಲಿ ಇದ್ದಿಲ್ಲ. ಅವರು ಮೊದಲು ಕ್ರಿಸ್ತೀಧರ್ಮದ ಪ್ರಸಾರವೇ ತಮ್ಮ ಮುಖ್ಯಕರ್ತವ್ಯವೆಂದು ತಿಳಿದಿದ್ದರು. ವಸಯಿಯು ಅವರ ಮುಖ್ಯಸ್ಥಳವಾಗಿತ್ತು. ಅಲ್ಲಿ ಪೋರ್ತುಗೀಜರ ಧರ್ಮಾಧಿಕಾರಿಯಿರುತ್ತಿದ್ದನು. ಈ ಫಿರಂಗೀಜನರು ಸುತ್ತಲಿನ ಪ್ರದೇಶವನ್ನೆಲ್ಲ ಸುಲಿದು, ಸಿಕ್ಕಷ್ಟು ಜನರನ್ನು ಸೆರೆಹಿಡಿದು ಆ ಧರ್ಮಾಧಿಕಾರಿಗೆ ಒಪ್ಪಿಸುತ್ತಿದ್ದರು. ಅವನು ಅವರೆಲ್ಲರಿಗೆ ಕ್ರಿಸ್ತೀಧರ್ಮದ ದೀಕ್ಷೆಯನ್ನು ಕೊಡುತ್ತಿದ್ದನು.

ಫಿರಂಗೀಜನರ ಈ ಕ್ರಮವು ಕೆಲವು ವರುಷಗಳಿಂದ ಮುಂದವಾಗಿ ಸಾಗಿದ್ದು, ನಮ್ಮ ಕಥಾನಕವು ನಡೆದ ಕಾಲದಲ್ಲಿ ಮುಂದಡಿ ಇಡಲಾರಂಭಿಸಿತ್ತು. ಅವರ ಈ ಉಪಟಳಕ್ಕೆ ವಸಯಿ ಪ್ರಾಂತದ ಜನರು ಬೇಸತ್ತು ಹೋಗಿದ್ದರು. ಆದರೆ ರಕ್ಷಕರಿಲ್ಲದ್ದರಿಂದ ನಿರುಪಾಯರಾಗಿ ತಾವೇ ತಮ್ಮ ಕಷ್ಟಗಳನ್ನು ನೀಗಿಕೊಳ್ಳಲು ಹೆಣಗುತ್ತಿದ್ದರು. ಆದರೆ ಧರ್ಮದ ಹುಚ್ಚಿನಿಂದ ಹಬ್ಬಿ ಹರಿಬಿದ್ದಿರುವ ಪೋರ್ತುಗೀಜರನ್ನು ದಂಡಿಸಲಿಕ್ಕೆ ಆ ಹಳ್ಳಿಗಳ ಜನರು ಅಸಮರ್ಥರಾಗಿದ್ದರು.

ಪಿಂಪಳಗ್ರಾಮದ ಸೂರ್ಯಾಜಿ, ಹಾಗು ರಾಘೋಬಾ ಇವರು ಫಿರಂಗೀಜನರನ್ನು ತಿರಸ್ಕರಿಸುವ ಜನರಲ್ಲಿ ಮುಖ್ಯರಾಗಿದ್ದರು. ಹೀಗಿರಲು ಮೇಲೆ ಹೇಳಿದಂತೆ ತಮ್ಮ ಊರಿಗೇ ಫಿರಂಗೀ ಜನರ ದಾಳಿಯು ತಟ್ಟಿದ್ದರಿಂದ ಅವರು ಅತ್ಯಂತ ಸಂತಾಪಗೊಂಡಿದ್ದರು. ಆದರೆ ಫಿರಂಗೀಜನರ ಸಂಖ್ಯಾಬಾಹುಲ್ಯದಿಂದ ತಮ್ಮವರ ಮುಂಗೈ ಸತ್ವವು ಕಡಿಮೆಯಾಗಲು ಆ ಧೀರರು ಹೊಟ್ಟೆಯೊಳಗಿನ ಸಿಟ್ಟು ರಟ್ಟೆಯಲ್ಲಿಲ್ಲವೆಂಬಂತೆ ಮನಸ್ಸಿನಲ್ಲಿಯೇ ಕುದಿಯಲಾರಂಭಿಸಿದರು.

ದಾಳಿಗಾರರು ಸೆರೆಹಿಡಿದೊಯ್ದ ಜನರಲ್ಲಿ ಸೂರ್ಯಾಜಿಯ ಪ್ರಾಯದ ಮಗಳಾದ ಚಂದ್ರಾವತಿಯೂ, ನಿಳೋಜಿ ಎಂಬ ತರುಣ ಮಗನೂ ಇದ್ದರು. ಮಗನನ್ನು ಸೆರೆಹಿಡಿದದ್ದರಿಂದ ಸೂರ್ಯಾಜಿಗೆ ಅಷ್ಟು ಸಂತಾಪವಾಗಲಿಲ್ಲ; ಆದರೆ ಪ್ರಾಯದ ಮಗಳನ್ನು ಒಯ್ದುದ್ದರಿಂದ ಆತನು ಅತ್ಯಂತ ಸಂತಾಪಗೊಂಡಿದ್ದನು. ಆ ರಾಕ್ಷಸರು ತನ್ನ ಮಗಳ ಪಾತಿವ್ರತ್ಯವನ್ನು ಭಂಗಪಡಿಸದೆ

ಇರಲಾರರೆಂಬ ಕಲ್ಪನೆಯೇ ಅವನ ಸಂತಾಪಕ್ಕೆ ಕಾರಣವಾಗಿತ್ತು.

ಮರುದಿನ ರಾಘೋಬನೂ ಸೂರ್ಯಾಜಿಯೂ ಚಾವಡಿಯಲ್ಲಿ ಫಿರಂಗೀ ಜನರ ಶಾಸನಮಾಡುವದಕ್ಕೆ ಏನುಮಾಡಬೇಕೆಂಬ ವಿಚಾರವನ್ನು ನಡಿಸಿದರು. ಸೂರ್ಯಾಜಿಯಾಗಲಿ, ರಾಘೋಬನಾಗಲಿ ಅಪಮಾನ ಸಹನೆ ಮಾಡುವಷ್ಟು ದುರ್ಬಲ ಮನಸ್ಸಿನವರಿದ್ದಿಲ್ಲ. ಫಿರಂಗೀ ಜನರ ಮೂಲೋತ್ಪಾಟನೆ ಮಾಡುವಷ್ಟು ಶಕ್ತಿಯು ತಮ್ಮಲ್ಲಿರದಿದ್ದರೂ ಸರಕಾರಕ್ಕೆ ದಾದು ಹಚ್ಚಿ ಆ ಕೆಲಸಮಾಡಿಯೇ ತೀರಬೇಕೆಂಬದು ಅವರ ಹಟವಾಗಿತ್ತು.

ಆ ಕಾಲಕ್ಕೆ ಪುಣೆಯಲ್ಲಿ ಬಾಜೀರಾವ ಪೇಶ್ವೆಯು ರಾಜ್ಯಭಾರವನ್ನು ಮಾಡುತ್ತಿದ್ದನು. ಬಾಜೀರಾಯನು ಶೂರನೂ ಮೇಲಾದ ಮುತ್ಸದ್ದಿಯೂ ಆದದ್ದರಿಂದ ಮರಾಟರ ರಾಜ್ಯದ ವಿಸ್ತಾರವನ್ನು ಬಹುಮಟ್ಟಿಗೆ ಬೆಳೆಸಿದ್ದನು. ಉತ್ತರದಲ್ಲಿ ಮೊಗಲರನ್ನು ಹಣಿದು ಅಲ್ಲಿ ಮರಾಟರ ಸತ್ತೆಯನ್ನು ನೆಲೆಗೊಳಿಸಿದ್ದನು. ಬಾಜೀರಾಯನ ಲಕ್ಷವೆಲ್ಲ ಉತ್ತರದ ಕಡೆಗೇ ಇದ್ದದರಿಂದ ಪಶ್ಚಿಮ ಸಮುದ್ರತೀರದಲ್ಲಿ ತಲೆಯೆತ್ತಿದ ಪೋರ್ತುಗೀಜರ ಕಡೆಗೆ ಆತನ ಲಕ್ಷಹೋಗಿದ್ದಿಲ್ಲ. ಆ ಪೋರ್ತುಗೀಜರು ಕೇವಲ ವ್ಯಾಪಾರದ ಕಡೆಗೇ ಲಕ್ಷಗೊಡುವವರಾದ್ದರಿಂದ ಇವರಿಂದ ನಮ್ಮ ಸಾಮ್ರಾಜ್ಯಕ್ಕೆ ಅಪಾಯವಿಲ್ಲವೆಂದು ಆತನು ದುರ್ಲಕ್ಷಿಸಿದ್ದನು. ಆದರೆ ಬಾಜೀರಾಯನ ಈ ದುರ್ಲಕ್ಷದ ಲಾಭವನ್ನೇ ಪಡೆದು ಪೋರ್ತುಗೀಜರು ವಸಯಿ ಪ್ರಾಂತದಲ್ಲಿ ತಮ್ಮ ಕಾಯಕವನ್ನು ನಡಿಸಿದ್ದರು, ಯಾವದೊಂದು ಪ್ರಾಂತದಲ್ಲಿದ್ದ ಪರಚಕ್ರದ ದಾಳಿಯಾಗಲಿ, ಕ್ಷುದ್ರಜನರ ಉಪದ್ರವವಾಗಲಿ ತಿಳಿಯಬೇಕಾದರೆ ಈಗಿನಂತೆ ಟಪಾಲ ತಾರಾಯಂತ್ರಗಳ ಅನುಕೂಲತೆಯಿದ್ದಿಲ್ಲ. ಸರಕಾರೀ ಅಧಿಕಾರಿಗಳಾಗಲಿ, ಇಲ್ಲವೆ ದುಃಖಪೀಡಿತರಾದ ಪ್ರಜೆಗಳಾಗಲಿ ಈ ಸಂಗತಿಯನ್ನು ಸರಕಾರಕ್ಕೆ ತಿಳಿಸಬೇಕಾಗುತ್ತಿತ್ತು. ಹೀಗೆ ಆಗಬೇಕಾದರೆ ಪ್ರಾಂತಕ್ಕೆ ಪ್ರಾಂತವೇ ಗಂಡಾಂತರದಲ್ಲಿ ಬಿದ್ದಿರಬೇಕಾಗುತ್ತಿತ್ತು. ಅಲ್ಪ ಸ್ವಲ್ಪ ಸಂಗತಿಗಳ ದಾದು ಹತ್ತುವದೇ ಕಠಿಣವಾಗಿತ್ತು.

ಈ ದಿನ ಸೂರ್ಯಾಜಿ-ರಾಘೋಬನ ಯೋಚನೆಯ ವಿಷಯವು ಇದೇ ಆಗಿದ್ದಿತು. ಅವರು ಬಹಳ ಹೊತ್ತಿನವರೆಗೆ ಆಲೋಚಿಸಿದ ಬಳಿಕ ಸೂರ್ಯಾಜಿಯು—“ರಾಘೋಬಾ, ನಮ್ಮ ಮಾತನ್ನು ಪೇಶ್ವೆ ಸರಕಾರವು ಕೇಳಲಿಕ್ಕಿಲ್ಲೇನು? ಸರಕಾರವು ಪ್ರಜೆಗಳ ದೂರನ್ನು ಕೇಳದಿದ್ದರೆ ಇನ್ನಾರು ಕೇಳ

ಬೇಕು? ಇಷ್ಟು ದಿನ ನಾವು ಹೀಗೆ ಕೈಮುಚ್ಚಿಕೊಂಡು ಕುಳಿತದ್ದೇ ನಮ್ಮ ತಪ್ಪಾಗಿದೆ. ಆ ಪುಂಡ ಪೋರ್ತುಗೀಜರ ಪುಚ್ಛಗಳು ಬಲಿತವೆ. ಅವರು ಈಗ ನಮ್ಮಂಥವರಿಗೆ ಹಣಿಯುವಹಾಗಿಲ್ಲ. ಅದ್ದರಿಂದ ಅವರ ಪಾರುಪತ್ಯೆಗಾಗಿ ಸರಕಾರವೇ ಮನಸ್ಸಿನ ಮೇಲೆ ತಕ್ಕೊಳ್ಳಬೇಕು. ನಾನಂತೂ ಬಾಜೀರಾವ ಪೇಶ್ವೆಯವರಿಗೆ ಖಂಡಿತವಾಗಿ ಹೇಳಿಬಿಡುವೆನು. ಹೊಸದಾಗಿ ರಾಜ್ಯವನ್ನು ಗಳಿಸುವದಕ್ಕಿಂತ ಇದ್ದ ರಾಜ್ಯದಲ್ಲಿಯ ಪ್ರಜೆಗಳು ಸೌಖ್ಯವಾಗಿರುವಂತೆ ನೋಡಿಕೊಳ್ಳುವದು ಮುಖ್ಯವಾಗಿರುತ್ತದೆ. ಯಾಕೆ, ನಾನು ಹೇಳುವ ಮಾತು ನಿಮ್ಮ ಮನಸ್ಸಿಗೆ ಬರುವದೋ?'' ಎಂದು ನುಡಿದನು.

‘‘ಸೂರ್ಯಾಜೀ, ನಮ್ಮ ದೃಷ್ಟಿಯಿಂದ ಈ ಮಾತು ನಿಜವಿರುತ್ತದೆ; ಆದರೆ ಬಡವರಾದ ನಮ್ಮ ದಾದು ಬಾಜೀರಾವ ಪೇಶ್ವೆಯವರಿಗೆ ಹತ್ತುವದೇ ಮೊದಲು ಕಠಿಣವಿರುತ್ತದೆ. ಕಠಿಣವೆಂದು ತಿಳಿದು ಸುಮ್ಮನೆ ಕುಳಿತರೆ ನಮ್ಮ ಪ್ರಾಂತದ ಹಾನಿಯು ಅಪಾರವಾಗುತ್ತದೆ. ಇಂದಿನವರೆಗೆ ಎಷ್ಟುಜನ ಸ್ತ್ರೀಯರ ಪಾತಿವ್ರತ್ಯವನ್ನು ಆ ನೀಚರು ಭಂಗಪಡಿಸಿರುವರೋ ಹಾಗು ಎಷ್ಟು ಜನ ಹಿಂದುಗಳನ್ನು ಕುಲಗೆಡಿಸಿ ಕ್ರಿಸ್ತರನ್ನಾಗಮಾಡಿರುವರೋ ತಿಳಿಯದು! ನಾವು ಈ ಊರಲ್ಲಿ ಎಷ್ಟು ಪ್ರಮುಖರಾದರೇನು? ನಮ್ಮ ಮಕ್ಕಳನ್ನು ರಕ್ಷಿಸಿಕೊಳ್ಳುವ ತ್ರಾಣವು ನಮ್ಮಲ್ಲಿ ಉಳಿಯಲಿಲ್ಲ. ಬರಿಯ ನಮ್ಮ ಮಕ್ಕಳ ಬಗ್ಗೆಯೇ ನನಗೆ ಯೋಚನೆ ಹತ್ತಿಲ್ಲ. ನಮ್ಮ ಧರ್ಮ-ನಮ್ಮ ಆರ್ಯಸ್ತ್ರೀಯರ ಮಾನ ಸಂರಕ್ಷಣ ಈ ಬಗ್ಗೆ ನನಗೆ ಬಹಳ ಆಲೋಚನೆಯಾಗಿದೆ. ಆ ಫಿರಂಗೀ ಜನರು ಹಿಂದೂಧರ್ಮದ ಕಟ್ಟಾದ್ವೇಷಿಗಳಿರುವರು. ನಮ್ಮ ಭಾರತ ಭೂಮಿಯನ್ನೆಲ್ಲ ಕ್ರಿಸ್ತಭೂಮಿಯನ್ನಾಗ ಮಾಡಬೇಕೆಂಬದೇ ಅವರ ಹವಣಿಕೆಯಾಗಿದೆ. ನಾವು ಕಷ್ಟಪಟ್ಟು ಪುಣೆಗೆ ಹೋಗಿ ಈ ಸಂಗತಿಯನ್ನು ಪೇಶ್ವೇ ಸರಕಾರಕ್ಕೆ ಹ್ಯಾಗಾದರೂ ಮಾಡಿ ನಿವೇದಿಸಲಿಕ್ಕೇಬೇಕು. ಇಲ್ಲದಿದ್ದರೆ ಈ ದುಷ್ಟಗ್ರಹದ ನಿವಾರಣವು ಆಗುವಂತಿಲ್ಲ. ಈಗ ಬಾಜೀರಾವ ಪೇಶ್ವೆಯವರು ಉತ್ತರಪ್ರಾಂತಕ್ಕೆ ದಂಡೆತ್ತಿ ಹೊರಟಿರುವದಿಲ್ಲ. ಬಾಜೀರಾಯರ ತಮ್ಮಂದಿರಾದ ಚಿಮಣಾಜಿ ಅಪ್ಪಾ ಇವರಾದರೂ ಪುಣೆಯಲ್ಲಿರಬಹುದು. ಇವರಿಬ್ಬರಲ್ಲಿ ಒಬ್ಬರ ಕಿವಿಗೆ ಈ ಸುದ್ದಿಯು ಬಡಿದರೆ ಸಾಕು; ಅವರು ತಡಮಾಡದೆ ದಂಡೆತ್ತಿ ಬಂದು ಈ ಫಿರಂಗೀ ಜನರಿಗೆ ಶಾಸನ ಮಾಡುವರು. ಈ ಮಹಾಪುರುಷರಲ್ಲಿ ಸ್ವಾಭಿ

ಮಾನವು ವಿಶೇಷವಾಗಿರುತ್ತದೆ. ಹಿಂದೂಧರ್ಮದ ಅಪಮಾನವನ್ನು ಅವರು ಎಂದೂ ಸಹಿಸರು. ಶಿವಾಜಿರಾಜರು ಧರ್ಮಸ್ಥಾಪನೆಗೆ ಅವತರಿಸಿ ದಂತೆ ಬಾಜೀರಾವ ಪ್ರಭುಗಳು ಧರ್ಮಸ್ಥಾಪನೆಗಾಗಿಯೇ ಅವತರಿಸಿರು ವರು, ಅವರ ಗುರುಗಳಾದ ಬ್ರಹ್ಮೇಂದ್ರಸ್ವಾಮಿಗಳು ಸಮರ್ಥ ರಾಮ ದಾಸರಂತೆ ಮಹಾಪುರುಷರಿರುತ್ತಾರೆ. ನಾವು ಪುಣೆಗೆ ಹೋಗಲಿಕ್ಕೇಬೇಕು. ಅಲ್ಲಿಗೆ ಹೋದಬಳಿಕ ಶ್ರೀಮಂತರ ಭೆಟ್ಟಿಯಾಗುವದಕ್ಕೆ ಏನಾದರೊಂದು ಹಂಚಿಕೆಯನ್ನು ಹೂಡೋಣ.''

ಈ ಮೇರೆಗೆ ರಾಘೋಬನ ಭಾಷಣವನ್ನು ಕೇಳಿ ಸೂರ್ಯಾಜಿಯು ಹುರಿದುಂಬಿ—''ರಾಘೋಬಣ್ಣಾ, ಪುಣೆಗೆ ಎಂದು ಹೊರಡೋಣ? ಇಂದು ನಾಳೆ ಎಂದು ಮೀನಮೇಷ ಮಾಡುವದು ಒಳಿತಲ್ಲ. ಆದಷ್ಟು ಬೇಗನೆ ಸರ ಕಾರಕ್ಕೆ ಈ ಸಂಗತಿಯನ್ನು ತಿಳಿಸಿ ಮುಂದಿನ ಅನರ್ಥವನ್ನಾದರೂ ತಪ್ಪಿ ಸೋಣ. ನೀನು ಪುಣೆಯನ್ನು ನೋಡಿರುವಿಯೇನು?'' ಎಂದನು.

''ಪುಣೆಯನ್ನು ಎರಡು ಸಾರೆ ನೋಡಿರುವೆನು. ಅಲ್ಲಿ ನನಗೊಬ್ಬ ಸ್ನೇಹಿತನಿರುವನು. ಇಳಿದುಕೊಳ್ಳಲಿಕ್ಕೆ ಆಶ್ರಯವಿದೆ. ನಾಳೆಗೆ ಹೊರ ಡೋಣ; ಹೊರಡುವದೇ ನಿಶ್ಚಯವಾದಬಳಿಕ ತಡವೇತಕ್ಕೆ? ಆದರೆ ಇಲ್ಲಿಯ ವ್ಯವಸ್ಥೆಯನ್ನು ಮಾತ್ರ ಚನ್ನಾಗಿ ಮಾಡಿ ಹೋಗಬೇಕು. ಫಿರಂಗೀಜನರ ಕಾಟದಿಂದ ಊರು ಮೊದಲೇ ತ್ರಸ್ತವಾಗಿದೆ. ಆದರಲ್ಲಿ ನಾವಿಬ್ಬರೂ ಹೊರಟುಹೋದರೆ ಊರ ಜನರೆಲ್ಲರೂ ಗಾಬರಿಯಾಗುವರು. ಪೆಂಡಾರಿ ಗಳು ಬಂದು ಬಡಿದುಕೊಂಡುಹೋದರೂ ಕೇಳುವವರು ದಿಕ್ಕಿಲ್ಲದಾದೀತು? ಆದ್ದರಿಂದ ಊರ ಸಂರಕ್ಷಣೆಗೆ ಏನು ಮಾಡೋಣ?''

''ನನಗೂ ಇದೇ ಚಿಂತೆಯೇ ಹಗಲಿರಳೂ ಬಾಧಿಸುತ್ತದೆ. ಕೆಲ ಜನ ಹರೆಯದ ಹುಡುಗರನ್ನು ಆ ದುಷ್ಟರು ಹಿಡಿದೊಯ್ದರು. ಕೆಲವರು ಸತ್ತರು; ಹೀಗಾಗಿ ಊರಲ್ಲಿ ಪ್ರಾಯಸ್ಥರ ಸಂಖ್ಯೆಯೇ ಕಡಿಮೆಯಾಗಿದೆ. ಬೇರೆ ಗ್ರಾಮದಿಂದ ಜನರನ್ನು ತಂದ ಹೊರತು ಗತ್ಯಂತರವೇ ಇಲ್ಲ. ನಾವು ತಿರುಗಿ ಬರುವ ವರೆಗೆ ಊರನ್ನು ಸಂರಕ್ಷಿಸುವದಕ್ಕೆ ಕೆಲಜನ ತರುಣರನ್ನು ಗ್ರಾಮಾಂತರಗಳಿಂದ ತರಿಸಿ ಅವರಿಗೆ ಹೊಟ್ಟೆಗೆ ಕೊಟ್ಟು ಇಡುವದು ಯುಕ್ತವಾಗಿ ತೋರುತ್ತದೆ.''

''ದೇಶಕ್ಕೇ ದುಷ್ಟಗ್ರಹವ್ಯಾದಗಿದಾಗ ನಮ್ಮ ನೆರವಿಗೆ ಬರುವ

ರಾರು? ಯಾವ ಹಳ್ಳಿಯವರು ನಮಗೆ ಸಹಾಯ ಮಾಡಬಹುದು! ಎಲ್ಲರೂ ನಮ್ಮಂತೆ ವಿಪದ್‌ಗ್ರಸ್ತರಾಗಿ ಬಾಯೊಳಗೆ ಅಕ್ಕೀಕಾಳು ಹಾಕಿಕೊಂಡು ಕುಳಿತಿರಬಹುದು. ಈಗಿನ ಕಾಲವು ಅತ್ಯಂತ ಕಠಿಣವಿರುವದು—“ಜೀವಂ ಪಶ್ಯತಿ ಭದ್ರಾಣಿ” ಎಂಬಂತೆ ಎಲ್ಲರೂ ತಮ್ಮ ತಮ್ಮ ಸಂರಕ್ಷಣೆಯ ಮಾರ್ಗವನ್ನು ನೋಡಿಕೊಳ್ಳುವರೇ ಹೊರತು ಮುಂದಿಯ ಚಿಂತೆ ಮಾಡ ಲಿಕ್ಕೆ ಅವರಿಗೆ ಶಕ್ಯವೇ ಇಲ್ಲ. ತನ್ನ ಜೀವ ಬದುಕಿದ ಮೇಲೆ ಮುಂದಿನ ಯೋಚನೆ; ಇಂಥ ಸ್ಥಿತಿಯಲ್ಲಿ ನಾವು ಯಾರಿಗೆ ಬಾಯಿ ತೆರೆಯೋಣ! ತೆರೆದರೂ ಯಾರಿಂದ ನಮಗೆ ಜನಸಹಾಯವೊದಗಬಹುದು!”

ರಾಘಣ್ಣಾ! ನನಗೆ ಒಂದು ಸಂಗತಿ ನೆನಪಾಗಿದೆ ಮಾಣಗ್ರಾಮದ ನಾಯಿಕನು ನನ್ನ ಸ್ನೇಹಿತನಿದ್ದಾನೆ. ಆತನಲ್ಲಿ ನೂರಾರು ಜನರು ಯಾವಾ ಗಲೂ ಇದ್ದೇ ಇರುವರು. ಅವನಿಗೆ ಪತ್ರ ಬರೆದರೆ ಈ ವಿಪತ್ತಿನ ಪ್ರಸಂಗ ದಲ್ಲಿ ಸಹಾಯ ಮಾಡಬಹುದು. ನಾವು ತಿರುಗಿ ಬರುವವರೆಗೆ ಐವತ್ತು ಜನರನ್ನಾದರೂ ನಾಯಿಕನು ಕಳಿಸಿದರೆ ನಮ್ಮ ಊರು ಸುರಕ್ಷಿತವಾಗಿ ಉಳಿಯುವದು. ಆತನಿಗೆ ಪತ್ರ ಬರೆಯಲಾ?

“ಯೋಗ್ಯಸ್ಥಳವನ್ನು ನೆನಪು ಮಾಡಿದೆ. ರಾಮನಾಯ್ಕನು ಸಹಾ ಯ ಮಾಡತಕ್ಕ ಮನುಷ್ಯನಾಗಿದ್ದಾನೆ ಅವಶ್ಯವಾಗಿ ಪತ್ರಬರೆ; ಅವನಿಂದ ಜನಸಹಾಯ ಬಂದ ಕೂಡಲೆ ಅವರಿಗೆ ಹೇಳತಕ್ಕದ್ದನ್ನು ಹೇಳಿ ನಾವು ಪುಣೆಗೆ ಹೊರಡೋಣ.

ಈ ಮೇರೆಗೆ ಅವರಿಬ್ಬರ ಸಂಭಾಷಣವಾದ ಬಳಿಕ ಸೂರ್ಯಾಜಿಯು ರಾಮನಾಯ್ಕರಿಗೆ ಪತ್ರ ಬರೆದು ಕಳುಹಿಸಿ, ದೇಶಕ್ಕೆ ಒದಗಿದ ಈ ದುಷ್ಟ ಗ್ರಹದ ವಿಷಯವಾಗಿ ಚಿಂತಿಸುತ್ತ ಅವರಿಬ್ಬರೂ ತಮ್ಮ ತಮ್ಮ ಮನೆಗಳಿಗೆ ತೆರಳಿದರು.



# (೨) ಚಿಮಣಾಜಿರಾವ ಅಪ್ಪಾ.

ಒಂದು ದಿನ ಮುಂಜಾವಿನ ಸಮಯ ಅದೇ ಸೂರ್ಯೋದಯವಾಗಿದೆ. ಆತನ ಹೊಂಬಣ್ಣದ ಕಿರಣಗಳು ಸುತ್ತಲೂ ಪಸರಿಸಹತ್ತಿವೆ. ಮುಂಜಾವಿನ ತಂಗಾಳಿಯು ಸಮಯುವಾಗಿದ್ದರೂ ಹವೆಯಲ್ಲಿ ಆರ್ದ್ರತೆಯು ಸ್ವಲ್ಪವೂ ಇಲ್ಲದಾಗಿದೆ. ಮನೆಯಲ್ಲಿರುವದಕ್ಕಿಂತ ಬೈಲುಹವೆಯಲ್ಲಿ ಆಡ್ಡಾಡುವದೇ ಮನುಷ್ಯಮಾತ್ರರಿಗೆ ಹಿತಕರವಾಗಿದೆ. ಇಂಥ ಸಮಯದಲ್ಲಿ ಪುಣೆ ಶಹರದಿಂದ ಕೆಲ ಅಂತರದ ಮೇಲೆ ಹಾದಿಗೆ ಹೊಂದಿ ಮಧ್ಯಮ ವಯಸ್ಸಿನ ಇಬ್ಬರು ಗೃಹಸ್ಥರು ನಿಂತುಕೊಂಡಿದ್ದರು. ಅವರು ಸುದೃಢ ದೇಹಿಗಳೂ, ನೋಡಲಿಕ್ಕೆ ಭವ್ಯಪುರುಷರೂ ಆಗಿ ತೋರುತ್ತಿದ್ದರು. ಅವರಲ್ಲಿ ಒಬ್ಬನು ಕಲ್ಲೀಮೀಶೆಯನ್ನು ಬಿಟ್ಟದ್ದರಿಂದ ಅವನು ಅತ್ಯಂತ ಉಗ್ರನಾಗಿ ತೋರುತ್ತಿದ್ದನು. ಇನ್ನೊಬ್ಬನು ಸ್ವಲ್ಪ ಸೌಮ್ಯವಾಗಿ ತೋರುತ್ತಿದ್ದರೂ ಕ್ಷಾತ್ರ ತೇಜವು ಆತನ ಮುಖದ ಮೇಲೆ ಸ್ಪಷ್ಟವಾಗಿ ತೋರುತ್ತಿತ್ತು. ಇಬ್ಬರ ಮೋರೆಯ ಮೇಲೂ ಗಂಭೀರಭಾವವಿದ್ದರೂ ಒಂದು ಬಗೆಯ ಚಿಂತೆಯು ಅವರನ್ನು ಆವರಿಸಿದಂತೆ ಕಂಡು ಬರುತ್ತಿತ್ತು. ಅವರು ಹಳ್ಳಿಯ ಜನರಿಗೆ ಒಪ್ಪಬಹುದಾದ ಆದರೆ ಸಭ್ಯತನದ ಪೋಷಾಕನ್ನು ಧರಿಸಿದ್ದರು. ಅವರು ಮೌನದಿಂದ ನಿಂತುಕೊಂಡಿದ್ದರು; ಅವರು ಯಾರದೋ ದಾರಿಯನ್ನು ನಿರೀಕ್ಷಿಸುತ್ತಿರುವಂತೆ ಅವರ ರೀತಿಯಿಂದ ವ್ಯಕ್ತವಾಗುತ್ತಿತ್ತು.

ಪ್ರಿಯವಾಚಕರೇ, ಇಂಥ ಆ ಗೃಹಸ್ಥರು ಯಾರಾಗಿರಬಹುದು? ಅವರು ಊರ ಹೊರಗೆ ನಿಂತು ಯಾರ ಮಾರ್ಗವನ್ನು ನಿರೀಕ್ಷಿಸುತ್ತಿರಬಹುದು? ವಿಚಾರ ಮಾಡೋಣ ನಡೆಯಿರಿ. ಓಹೊ! ಇವರು ನಮಗೆ ಅಪರಿಚಿತರಲ್ಲ. ಇವರು ಪಿಂಪಳಗ್ರಾಮದ ಅಧಿಕಾರಿಗಳು. ದೊಡ್ಡ ಉತ್ಪನ್ನದಾರರು; ಒಬ್ಬನು ಸೂರ್ಯಾಜಿಯು; ಇನ್ನೊಬ್ಬನು ರಾಘೋಬನು.

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಸೂರ್ಯಾಜಿ ರಾಘೋಬ ಇವರು ಪಿಂಪಳಗ್ರಾಮದ ವ್ಯವಸ್ಥೆಯನ್ನು ಮಾಡಿ ಪುಣೆಗೆ ಹೊರಟು ಬಂದರು. ಆದರೆ ಪಿಂಪಳಗ್ರಾಮದಲ್ಲಿ ಪ್ರತಿಷ್ಠಿತರಾದ ಈ ಜನರನ್ನು ಪುಣೆಯಲ್ಲಿ ಕೇಳುವ

ರಾರು? ಹಳ್ಳಿಯಲ್ಲಿ ಗೌಡನ ಮಗನೇ ಚಲುವನೆಂಬಂತೆ ಸಿಂಪಳಗ್ರಾಮ ದಲ್ಲಿ ಇವರೇ ಇಂದ್ರ-ಚಂದ್ರರಾಗಿದ್ದರು. ಆದರೆ ಶ್ರೀಮಂತ ಸರಕಾರದ ರಾಜಧಾನಿಯೆನಿಸಿದ ಪುಣೆಯಲ್ಲಿ ಸೂರ್ಯನ ಮುಂದೆ ಹೊನ್ನೇಹುಳವು ಹ್ಯಾಗೆ ಪ್ರತಿಭಾಶೂನ್ಯವಾಗುವದೋ ಹಾಗೆ ಇವರು ಪ್ರತಿಭಾಶೂನ್ಯರಾ ದರು. ರಾಘೋಬನು ಸೂರ್ಯಾಜಿಯೊಡನೆ ತನ್ನ ಸ್ನೇಹಿತನ ಮನೆಗೆ ಹೋಗಿ ಊಟ ಮಾಡಿ ಮಾರ್ಗಾಯಾಸವನ್ನು ಕಳೆದುಕೊಂಡ ಬಳಿಕ ತಾವು ಬಂದ ಸಂಗತಿಯನ್ನು ಅವನ ಮುಂದೆ ತಿಳಿಸಿದನು. ಆದರೆ ಆ ಸ್ನೇಹಿತನು ಇವನ ಮಾತನ್ನು ಕೇಳಿಯೇ ನಕ್ಕುಬಿಟ್ಟನು. ಸುಮ್ಮಸುಮ್ಮನೆ ಸ್ನೇಹಿತನು ನಕ್ಕದ್ದನ್ನು ನೋಡಿ ರಾಘೋಬನಿಗೆ ದಿಗಿಲು ಬಿದ್ದಿತು. ಆಗ ಅವನು—ಮಿತ್ರಾ, ಹೀಗೇಕೆ ನಗುವಿ? ನಮ್ಮ ಮಾತುಗಳಲ್ಲಿ ಏನಾದರೂ ತಪ್ಪುತಡೆಗಳು ಕಂಡುಬಂದವೇನು? ನಾವಂತೂ ಹಳ್ಳಿಯವರು. ನಮಗೆ ಶುದ್ಧವಾಗಿ ಮಾತಾಡಲಿಕ್ಕೆ ಬರುವದಿಲ್ಲ, ಎಂದು ನುಡಿದನು.

"ನಿಮ್ಮ ಮಾತಿನಲ್ಲಿ ವ್ಯಾಕರಣದೋಷವನ್ನು ಕಂಡು ನನಗೆ ನಗೆ ಬರಲಿಲ್ಲ. ನೀವು ಶ್ರೀಮಂತಸರಕಾರಕ್ಕೆ ಭೆಟ್ಟಿಯಾಗಬೇಕೆಂದು ಅಂದದ್ದಕ್ಕೆ ನನಗೆ ನಗೆ ಬಂದಿತು. ಮಿತ್ರಾ, ನಿನಗೆ ಇಲ್ಲಿಯ ಪರಿಸ್ಥಿತಿಯು ಗೊತ್ತಿಲ್ಲ. ಶ್ರೀಮಂತ ಬಾಜೀರಾವ ಪೇಶ್ವೆಯೆಂದರೆ ನಿಮ್ಮ ಹಳ್ಳಿಯ ಗೌಡ-ಶಾನು ಭೋಗರೆಂದು ಮಾಡಿರುವೆಯಾ? ಎಂದು ಆ ಸ್ನೇಹಿತನು ನುಡಿದನು.

ಆತನ ಮಾತುಕೇಳಿ ಸೂರ್ಯಾಜಿಯು—ಸರಿ! ಸರಿ! ಚಲೋ ಮಾತನ್ನಾಡಿದಿರಿ. ರಾಜನೆಂದರೆ ಪ್ರಜೆಗಳ ತಾಯಿ-ತಂದೆ; ನಮಗೆ ಕಷ್ಟ ವಾದರೆ ನಾವು ರಾಜನ ಮುಂದಲ್ಲದೆ ಇನ್ನಾರ ಮುಂದೆ ಹೇಳಬೇಕು? ನಾವೆಲ್ಲರೂ ಪ್ರಜೆಗಳು ಸೌಖ್ಯದಿಂದಿದ್ದರೆ ರಾಜನಿಗೆ ಕ್ಷೇಮವು. ನಾವೇ ಗೋಳಾಡಹತ್ತಿದರೆ ರಾಜನನ್ನು ಕೇಳುವವರಾರು? ಎನಲು, ಆ ಸ್ನೇಹಿತನು:—

"ಛೀ ಛೀ, ನನ್ನ ಮಾತನ್ನು ನೀವು ವಿಪರೀತವಾಗಿ ತಿಳಿದುಕೊಂಡಿರಿ. ಬಾಜೀರಾಯನಾಗಲಿ, ಆತನ ತಮ್ಮ ಚಿಮಣಾಜಿ ಅಪ್ಪಾ ಈತನಾಗಲಿ ಶಾಂತಸ್ವಭಾವದವರೂ ಪ್ರಜೆಗಳ ಹಿತಚಿಂತಕರೂ ಆಗಿರುವರು. ಆದರೆ ಅವರು ಇರುವದು ಶನಿವಾರವಾಡೆಯೆಂಬ ರಾಜಮಂದಿರದಲ್ಲಿ; ರಾಜಸ್ಥಳ ದಲ್ಲಿದ್ದ ಸೇವಕ ಜನರು ಬಹಳ ಸೊಕ್ಕಿನವರೂ ನಿರ್ದಯರೂ ಇರುತ್ತಾರೆ.

ಅವರು ನಿಮ್ಮನ್ನು ರಾಜಮಂದಿರದಲ್ಲಿ ಬಿಡುವದೇ ಅಶಕ್ಯವಾಗಿದೆ. ಆದ್ದರಿಂದಲೇ ನಿಮಗೆ ಬಾಜೀರಾವ ಪೇಶ್ವೆಯವರ ಭೆಟ್ಟಿಯಾಗುವದು ಅಶಕ್ಯವೆಂದು ಅಂದೆನು.''

"ಹಾಗಾದರೆ ಹ್ಯಾಗೆ ಮಾಡಬೇಕು? ಇಲ್ಲಿ ನಮಗೆ ದೊಡ್ಡ ಜನರ ಗುರುತು ಇಲ್ಲ. ಯಾರ ವಶೀಲಿಯನ್ನು ಹಚ್ಚಲಿಕ್ಕೂ ಶಕ್ಯವಿಲ್ಲ. ನಮ್ಮ ಕೆಲಸವಾಗುವ ಬಗೆಯೆಂತು'' ಎಂದು ರಾಘೋಬನು ನುಡಿದನು.

ಈ ಮೇರೆಗೆ ಅವರು ಸಂಭಾಷಣಮಾಡುವದರಲ್ಲಿಯೇ ಅಂದು ಕಾಲ ಕಳೆದರು. ಆ ದಿನ ಅವರಿಗೆ ಯಾವ ಯೋಚನೆಯೂ ಬಗೆಹರಿಯದಾಯಿತು. ಅವರು ಮರುದಿನವುಸಹ ಯಲ್ಲಿ ರಾಜಮಂದಿರದ ಮುಂದೆ ಅಡ್ಡಾಡಿ ಸುಮ್ಮನೆ ಕಾಲಕಳೆದರು. ಶ್ರೀಮಂತರ ವಾಡೆಯಲ್ಲಿ ಪ್ರವೇಶವಾಗುವದು ಅವರಿಗೆ ಅಶಕ್ಯವಾಗಿ ತೋರಿತು. ಆಗ ಸೂರ್ಯಾಜಿಯು —ರಾಘಣ್ಣಾ, ಹೀಗೆ ಸುಮ್ಮನೆ ಶುನಃಶ್ಶೇಫನಂತೆ ಅಡ್ಡಾಡಿದರೆ ನಮ್ಮನ್ನು ಕೇಳುವವರಾರು? ನಾವು ಬಂದು ನಾಲ್ಕಾರು ದಿನಗಳಾದವು, ನಮ್ಮನ್ನು ಇಲ್ಲಿ ಯಾರೂ ಮಾತಾಡಿಸಲಿಲ್ಲ. ಇಲ್ಲಿ ನಾವು ಕುಳಿತರೆ ಶ್ರೀಮಂತರ ಮೈಮೇಲಿನ ಛಾಯೆಯು ಕೂಡಾ ನಮಗೆ ಬಡಿಯುವಂತಿಲ್ಲ. ನಾನು ಈ ವಾಡೆಯ ಮುಂದೆ ನಿಂತು ಶಂಖಪುಟಿಸಬೇಕೆಂದು ಮಾಡಿದ್ದೇನೆ. ಅಂದರೆ ಇಲ್ಲಿಯ ರಾಜಸೇವಕರ ದೃಷ್ಟಿಯು ನಮ್ಮ ಕಡೆಗೆ ಸಹಜವಾಗಿ ಹೊರಳುವದು. ಆ ಬಳಿಕ ನಾವು ನಮ್ಮ ಕಷ್ಟವನ್ನು ಅವರ ಮುಂದೆ ತೋಡಿಕೊಳ್ಳೋಣ!

"ಛೀ! ಇಂಥ ಅಲ್ಲದ ಕೆಲಸ ಮಾಡುವದು ಸರಿಯಲ್ಲ. ನಮ್ಮ ಕಷ್ಟವನ್ನು ಕೇಳಿ ರಾಜಸೇವಕರಿಗೆ ಕರುಣೆ ಬರಲಿಕ್ಕಿಲ್ಲ. ಶ್ರೀಮಂತಸರಕಾರಕ್ಕೆ ನಮ್ಮ ವಿಷಯಕ್ಕೆ ದಯ ಹುಟ್ಟಬಹುದೇ ಹೊರತು ಈ ಸೇವಕರಿಗೆ ಹುಟ್ಟಲಾರದು. ಇವರ ಮುಂದೆ ಶಂಖಹೊಡೆದರೆ ಇವರು ನಮ್ಮನ್ನು ಸೆರೆಯಿಡಲು ಹಿಂದುಮುಂದೆ ನೋಡಲಿಕ್ಕಿಲ್ಲ. ಹೇಳಿಕೇಳಿ ಇವರು ರಾಜಸೇವಕರು. ಅಧಿಕಾರದ ಗರ್ವವು ಅವರಲ್ಲಿಯ ಚಲೋ ಬುದ್ಧಿಯನ್ನು ಹುರಿದುಬಿಟ್ಟಿರುತ್ತದೆ ಅದ್ದರಿಂದ ಹಾಗೆ ಮಾಡಬೇಡ; ನನಗೊಂದು ಹಂಚಿಕೆಯು ತೋಚುತ್ತದೆ ಚಿಮಣಾಜಿ ಅಪ್ಪಾ ಇವರು ಬೆಳಗಿನಲ್ಲಿ ತಿರುಗಾಡಲಿಕ್ಕೆ ಹೊರಡುವರಂತೆ; ಅವರು ಯಾವ ನಿಟ್ಟಿಗೆ ಹೋಗುವರೆಂಬದನ್ನು ಶೋಧಹಚ್ಚಿ, ದಾರಿಯಲ್ಲಿಯೇ ಅವರಿಗೆ ಭೆಟ್ಟಿಯಾಗಿ ನಮ್ಮ

ಕಷ್ಟವನ್ನು ಅವರ ಮುಂದೆ ತೋಡಿಕೊಳ್ಳೋಣ: ಅಂದರೆ ನಮ್ಮ ಕೆಲಸವು ಸಹಜವಾಗಿ ಆಗುವದು.

ರಾಘೋಬನ ಈ ಹಂಚಿಕೆಯು ಸೂರ್ಯಾಜಿಯ ಮನಸ್ಸಿಗೆ ಬಂದಿತು. ಕಾರ್ಯವು ಬೇಗನೆ ಆಗಬೇಕೆಂಬ ಕುತೂಹಲವು ಅವರಲ್ಲಿ ವಿಶೇಷವಾಗಿದ್ದ ದರಿಂದ ಅವರು ತಡಮಾಡದೆ ಆ ಕೆಲಸಕ್ಕೆ ಪ್ರಾರಂಭಿಸಿದರು. ಅವರು ಈ ಸಂಗತಿಯನ್ನು ತಮ್ಮ ಆಶ್ರಯದಾತೃವಿನ ಮುಂದೆ ತಿಳಿಸಲಿಲ್ಲ. ಒಂದು ದಿನ ದೊಡ್ಡ ನಸುಕಿನಲ್ಲಿ ಚಿಮಣಾಜಿ ಅಪ್ಪಾ ಇವರು ಬರುವ ಮಾರ್ಗ ವನ್ನು ನಿರೀಕ್ಷಿಸುವದಕ್ಕಾಗಿ ಪುಣೆಯಿಂದ ಕೆಲ ಅಂತರದ ಮೇಲೆ, ಮೇಲೆ ಹೇಳಿದಂತೆ ನಿಂತುಕೊಂಡರು.

ರಾಘೋಬ ಹಾಗು ಸೂರ್ಯಾಜಿಯು ಬಂದು ನಿಂತು ಬಹಳ ಹೊ-ತ್ತಾದರೂ ಚಿಮಣಾಜಿಅಪ್ಪಾ ಇವರು ಆ ಮಾರ್ಗದಿಂದ ಬರಲಿಲ್ಲ. ಒಂದು ತಾಸಾಯಿತು; ಎರಡು ತಾಸು ಏರಿತು. ಆದರೂ ಅವರ ಇಷ್ಟಕಾರ್ಯವು ಸಾಧಿಸಲಿಲ್ಲ. ಆಗ ಅವರ ಮನಸ್ಸಿನಲ್ಲಿ ಹಲವು ವಿಚಾರಗಳು ಬರಲಾರಂ ಭಿಸಿದವು. ನಾಲ್ಕೆಂಟು ದಿನಗಟ್ಟಲೆ ಪೇಶ್ವೆಸರಕಾರದ ದರ್ಶನಕ್ಕಾಗಿ ದಾರೀ ಕಾಯ್ದು ಅವರು ಬೇಸತ್ತು ಹೋಗಿದ್ದರು. ಈ ದಿನವಂತೂ ಅವರು ಕೇವಲ ಹತಾಶರಾಗಿದ್ದರು. ಇನ್ನೊಂದು ತಾಸಿನವರೆಗೆ ದಾರೀನೋಡಿ ಪುಣೆಗೆ ಹೋಗದೆ ತಿರುಗಿ ಹಾಗೇ ಊರಿಗೆ ಹೋಗಬೇಕೆಂದು ಸೂರ್ಯಾಜಿಯು ನಿರ್ಧರಿಸಿದನು; ಆದರೆ ರಾಘೋಬನು ವಿವೇಕವುಳ್ಳವನಿದ್ದದರಿಂದ ಸೂ-ರ್ಯಾಜಿಗೆ ತಿಳಿಹೇಳಿ ಅವನಲ್ಲಿ ಹೊಸ ಹುರುಪನ್ನುಂಟುಮಾಡಿದನು. ಹೀಗೆ ಅವರು ಮಾತಾಡುತ್ತಿರುವಷ್ಟರಲ್ಲಿ ದೂರದಲ್ಲಿ ಕುದುರೆಯ ಖುರಪುಟಗಳ ಸಪ್ಪಳವು ಕೇಳಲಾರಂಭಿಸಿತು. ಸಪ್ಪಳವು ಕೇಳಬರುವ ದಿಕ್ಕಿಗೆ ದಿಟ್ಟಿಸಿ ನೋಡುತ್ತಿರಲು, ತಮ್ಮ ಇಚ್ಛಿತಕಾರ್ಯವು ಕೈಗೂಡಬಹುದೆಂಬ ಆಶೆಯು ಅವರಲ್ಲಿ ಅಂಕುರಿಸಿತು. ಅಷ್ಟರಲ್ಲಿ ಕುದುರೆಯು ಸಮೀಪಕ್ಕೆ ಬಂದಿತು. ಅದರ ಮೇಲೆ ಚಿಮಣಾಜಿ ಅಪ್ಪಾ ಈತನು ಕುಳಿತಿದ್ದನು. ಊರು ಸಮೀ ಪಕ್ಕೆ ಬಂದದ್ದರಿಂದ ಕುದುರೆಯನ್ನು ಸಾವಕಾಶವಾಗಿ ಬಿಟ್ಟಿದ್ದನು. ಆಗ ಆತನು ತೆಳ್ಳನ್ನ ಬಂಡಿಯನ್ನು ಮೈಯಲ್ಲಿ ಹಾಕಿದ್ದನು. ಜರತಾರಿಯ ಪಾಗೋಟಿಯು ಅವನ ತಲೆಯಲ್ಲಿ ಶೋಭಿಸುತ್ತಿತ್ತು. ಒಟ್ಟಿನಮೇಲೆ ಆಗಿನ ಆತನ ಪೋಷಾಕು ಕೇವಲ ಸಾದಾತರದ್ದಾಗಿತ್ತು. ಸೂರ್ಯಾಜಿ-

ರಾಘೋಬ ಇವರು ದೂರಿನಿಂದಲೇ ನೋಡಿ ಈತನೇ ಚಿಮಣಾಜಿ ಅಪ್ಪಾ ಇರಬಹುದೆಂದು ತರ್ಕಿಸಿ, ಕುದುರೆಯು ಮುಂದೆ ಹೋಗಿ ನೆಲಕ್ಕೆ ಕೈಹಚ್ಚಿ ಮುಜುರೆಮಾಡಿ ನಿಂತರು. ಚಿಮಣಾಜಿಯು ಕುದುರೆಯ ಕಡಿವಾಣವನು ಬಿಗಿಹಿಡಿದು ನಿಲ್ಲಿಸಿ, ಅವರು ಯಾರೆಂಬದನ್ನು ವಿಚಾರಿಸಿದನು.

ಆಗ ರಾಘೋಬನು ಕೈಮುಗಿದು—"ಸರಕಾರ, ನಾವು ವಸಯಿ, ಅಷ್ಟಾಗರ ಪ್ರಾಂತದವರು. ನಮ್ಮ ಊರು ಪಿಂಪಳಗಾಂವ ಎಂಬದು. ನಮ್ಮ ಪ್ರಾಂತದಲ್ಲಿ ಫಿರಂಗೀಜನರ ಹಾವಳಿಯು ಬಹಳವಾಗಿದೆ. ಮೊನ್ನೆ ನಮ್ಮ ಗ್ರಾಮಕ್ಕೆ ಬಂದು ಅವರು ಬಹಳ ಹಾವಳಿಯನ್ನು ಮಾಡಿದ್ದಾರೆ. ಊರುಗಳನ್ನು ಸುಡುವದು, ಜನರ ದ್ರವ್ಯ ಹರಣಮಾಡುವದು, ಕೈಗೆ ಸಿಕ್ಕ ವರನ್ನು ಹಿಡಿದೊಯ್ದು ಕ್ರಿಸ್ತರನ್ನಾಗಮಾಡುವದು, ಇವೇ ಅವರ ಕೆಲಸಗ ಳಾಗಿವೆ. ಅವರ ಬಂದೂಕ ಮೊದಲಾದ ಆಯುಧಗಳ ಮುಂದೆ ನಮ್ಮ ಕತ್ತಿ ಭಾಲೆಗಳ ಆಟವು ಸಾಗದಾಗಿದೆ. ಆದ್ದರಿಂದ ತಮ್ಮ ಬಳಿಗೆ ನಿವೇದಿ ಸುವದಕ್ಕಾಗಿ ಬಂದಿರುತ್ತೇವೆ. ಸರಕಾರವು ಈ ವಿಷಯದಲ್ಲಿ ಮನಸ್ಸಿನ ಮೇಲೆ ತಕ್ಕೊಳ್ಳದಿದ್ದರೆ ಫಿರಂಗೀಜನರು ಸ್ವಲ್ಪ ದಿವಸಗಳಲ್ಲಿಯೇ ನಮ್ಮ ಪ್ರಾಂತವನ್ನೆಲ್ಲ ಕೈವಶಮಾಡಿಕೊಂಡು ಅಲ್ಲಿಯ ಎಲ್ಲ ಪ್ರಜೆಗಳನ್ನು ಕ್ರಿಸ್ತರ ನ್ನಾಗಮಾಡುವರು. ಇದ್ದ ಸಂಗತಿಯನ್ನು ಸರಕಾರಕ್ಕೆ ಶ್ರುತಪಡಿಸಿದ್ದೇವೆ. ಎಂದು ನುಡಿದು ಸುಮ್ಮನಾದನು.

ರಾಘೋಬನು ಹೇಳಿದ ಈ ಸಂಗತಿಯನ್ನು ಕೇಳಿ ಚಿಮಣಾಜಿ ಅಪ್ಪಾನು ನುಡಿದನೇನಂದರೆ—"ಬೇರೆ ಜನರಿಂದಲೂ ಫಿರಂಗೀ ಜನರ ದುರ್ನಡತೆಯು ನಮಗೆ ತಿಳಿದು ಬಂದಿದೆ, ನೀವು ಬಂದದ್ದು ಬಹಳ ನೆಟ್ಟಗೆ ಮಾಡಿದಿರಿ. ಈ ದಿನ ಸಂಜೆಯ ಮುಂದೆ ನೀವು ನಮ್ಮ ವಾಡೆಗೆ ಬನ್ನಿರಿ, ಅಂದರೆ ಅಲ್ಲಿ ನಿಮ್ಮ ಬಾಯಿಂದ ಎಲ್ಲ ಸಂಗತಿಗಳನ್ನು ಕೇಳಿಕೊಂಡು ಫಿರಂ ಗೀ ಜನರ ಬಂದೋಬಸ್ತಿಗಾಗಿ ತಕ್ಕ ಯೋಚನೆಯನ್ನು ಮಾಡುತ್ತೇನೆ."

ಈ ಮೇರೆಗೆ ಚಿಮಣಾಜಿಯು ನುಡಿಯಲು, ರಾಘೋಬನು—ಸರ ಕಾರ, ತಮ್ಮ ವಾಡೆಯಲ್ಲಿ ನಮ್ಮ ಪ್ರವೇಶವಾಗುವ ಬಗೆಹ್ಯಾಗೆ? ಈಗ ನಾಲ್ಕೆಂಟು ದಿನಗಳಿಂದ ತಮ್ಮ ಭೆಟ್ಟಿಗಾಗಿ ನಾವು ಕಾದಿದ್ದರೂ ಈ ದಿನ ಅಡವಿಯಲ್ಲಿ ತಮ್ಮ ಭೆಟ್ಟಿಯಾಗುವ ಸಂಧಿದೊರಕಿತು ಎಂದನು. ಆಗ ಚಿಮಣಾಜಿ ಅಪ್ಪಾನು ಹಿಂದಿನಿಂದ ಬರುವ ತುಳಾಜಿರಾವ ಎಂಬ ಸರದಾ

ರನನ್ನು ಕುರಿತು—ತುಳಾಜೀ, ಇವರು ಪಿಂಪಳಗ್ರಾಮದ ನಮ್ಮ ಪ್ರಜೆಗಳು, ತಮಗೊದಗಿದ ಕಷ್ಟವನ್ನು ಹೇಳುವದಕ್ಕಾಗಿ ಬಂದಿದ್ದಾರೆ. ಸಂಜೆಯ ಮುಂದೆ ಇವರನ್ನು ನನ್ನ ಬಳಿಗೆ ತಂದು ಮುಟ್ಟಿಸುವ ವ್ಯವಸ್ಥೆ ಮಾಡು ಎಂದು ಹೇಳಿ ಕುದುರೆಯನ್ನು ಚಪ್ಪರಿಸಿದನು. ಆ ಚತುರ ಪ್ರಾಣಿಯು ಹಾ ಹಾ ಅನ್ನುವಷ್ಟರಲ್ಲಿ ಊರನ್ನು ಮುಟ್ಟಿತು.

ಇತ್ತ ತುಳಾಜಿರಾಯನು ಪಿಂಪಳ ಗ್ರಾಮದ ಗೃಹಸ್ಥರನ್ನು ಕುರಿತು “ನೀವು ಸಂಜೆಯ ನಾಲ್ಕು ಗಂಟೆಗೆ ಶನಿವಾರವಾಡೆಗೆ ಬರ್ರಿ. ಅಲ್ಲಿಯ ಕಾವಲುಗಾರನಿಗೆ ನನ್ನ ಹೆಸರು ಹೇಳಿರಿ, ಅಂದರೆ ಅವನು ನಿಮ್ಮನ್ನು ನನ್ನ ಬಳಿಗೆ ತಂದು ಮುಟ್ಟಿಸುವನು. ಬಳಿಕ ನಾನು ಸರಕಾರದ ಕಡೆಗೆ ನಿಮ್ಮನ್ನು ಕರೆದೊಯ್ಯುವೆನು ಎಂದು ಹೇಳಿ ಕುದುರೆಯನ್ನು ಓಡಿಸಿದನು. ಇತ್ತ ಸೂರ್ಯಾಜಿಯೂ, ರಾಘೋಬನೂ ಚಿಮಣಾಜಿ ಅಪ್ಪಾನ ಶಾಂತ ಗುಣವನ್ನೂ ಪ್ರಜಾವಾತ್ಸಲ್ಯವನ್ನೂ ಹೊಗಳುತ್ತ ಮನೆಗೆ ಬಂದರು.

## (೩) ಬಂಧುದ್ವಯರು.



ಸೂರ್ಯಾಜಿರಾವ ಹಾಗು ರಾಘೋಬ ಇವರಿಬ್ಬರು ಭೆಟ್ಟಿಯಾಗಿ ಹೋದ ಮರುದಿನ ಚಿಮಣಾಜಿ ಅಪ್ಪಾನು ಮುಂಜಾನೆ ನಾಲ್ಕುಗಂಟೆಗೆ ಎದ್ದು ಪತ್ರಬರಿಯಲಿಕ್ಕೆ ಕುಳಿತವನು ಮಧ್ಯದಲ್ಲಿ ಮಧ್ಯಾಹ್ನದ ಊಟಕ್ಕೆ ಮಾತ್ರ ಎದ್ದನಲ್ಲದೆ ಬೇರೆ ಯಾವ ಕೆಲಸಕ್ಕೂ ಏಳಲಿಲ್ಲ. ಸಂಜೆಯ ನಾಲ್ಕು ಗಂಟೆಯ ಸಮಯವಾದರೂ ಆತನ ಪತ್ರ ಬರವಣಿಗೆಯ ಕೆಲಸವೇ ಮುಗಿಯಲಿಲ್ಲ. ಬರಬರುತ್ತ ಹೊತ್ತು ತೀರ ಕೆಳಕ್ಕಿಳಿದು ಅಸ್ತಮಯದ ಸಮಯವು ಸಮೀಪಿಸಿತು. ಆದರೂ ಆ ಕಡೆಗೆ ಆತನ ಲಕ್ಷವಿರಲೇ ಇಲ್ಲ. ಈ ಕಾಲಕ್ಕೆ ಹಿರಿಯ ಬಾಜೀರಾವ ಪೇಶ್ವೆಯವರು ಶನಿವಾರವಾಡೆಯಲ್ಲಿಯೇ ಇದ್ದರು. ಈ ಬಾಜೀರಾವ ಹಾಗು ಚಿಮಣಾಜಿ ಅಪ್ಪಾ ಇವರಲ್ಲಿರುವ ಬಂಧುಪ್ರೇಮವು ಅಪ್ರತಿಮವಾಗಿತ್ತು. ಪೇಶ್ವೆಮನೆತನದೊಳಗಿನ ಈ ಬಂಧುದ್ವಯರಿಗೆ ಪುರಾಣಾಂತರದಲ್ಲಿರುವ ರಾಮ-ಲಕ್ಷ್ಮಣರ ಉಪಮೆ

ಯನ್ನೇ ಹೋಲಿಸಬಹುದಲ್ಲದೆ ಅನ್ಯರ ಉಪಮೆಯು ಇವರಿಗೆ ಒಪ್ಪಲಾರದು. ಇವರಲ್ಲಿದ್ದ ಭ್ರಾತೃಪ್ರೇಮವು ಅನಿರ್ವಚನೀಯವಾಗಿತ್ತು. ಬಾಜೀರಾಯನು ಅತ್ಯಂತ ತೇಜಸ್ವಿಯೂ, ಶೂರನೂ, ಕರ್ತೃತ್ವಶಕ್ತಿಯುಳ್ಳವನೂ ಆಗಿದ್ದು, ಬ್ರಾಹ್ಮಣ ಕುಲದಲ್ಲಿ ಅವತರಿಸಿದ ಮೂರ್ತಿಮಂತ ಕ್ಷಾತ್ರಧರ್ಮವೇ ಆಗಿದ್ದನು. ಆತನು ತನ್ನ ವಯಸ್ಸಿನ ೨೦-೨೧ ನೇ ವರುಷದಿಂದಲೇ ಅಖಿಲ ಮಹಾರಾಷ್ಟ್ರದ ಅಸ್ತವ್ಯಸ್ತವಾದ ರಾಜ್ಯಭಾರವನ್ನು ಶ್ರೀಛತ್ರಪತಿ ಶಾಹೂ ಮಹಾರಾಜರಿಂದ ಪಡೆದು ಅದನ್ನು ಸುಸ್ಥಿತಿಗೆ ತರಲು ಪ್ರಯತ್ನ ನಡಿಸಿದ್ದನು. ಆತನು ಮರಾಟರಲ್ಲಿದ್ದ ಮುಂಗೈ ಸತ್ವವನ್ನು ದಿಲ್ಲೀ ಬಾದಶಹನಿಗೂ, ನಿಜಾಮನಿಗೂ, ಖಾನದೌರಾನ ಮೊದಲಾದವರಿಗೂ ಚನ್ನಾಗಿ ತೋರಿಸಿದ್ದನು. ಈ ಬಾಜೀರಾಯನಂತೆ ಚಿಮಣಾಜಿ ಅಪ್ಪಾನೂ ಅತ್ಯಂತ ರಣಶೂರನಾಗಿದ್ದನು. ಹಿಂದಕ್ಕೆ ಶ್ರೀ ಛತ್ರಪತಿ ಶಿವಾಜಿ ಮಹಾರಾಜರು ವಿಜಾಪುರದ ಬಾದಶಹನ ದಂಡಾಳುಗಳಿಗೆ ಏಳುಕೆರೆ ನೀರು ಕುಡಿಸಿದಂತೆ ಈ ಪರಾಕ್ರಮಶಾಲಿಯು ನಾ-ನಾ ಅನ್ನುವ ಮುಸಲ್ಮಾನ ಸರದಾರರಿಗೆ ಏಳುಕೆರೆ ನೀರು ಕುಡಿಸಿ ಪರಶುರಾಮ ಕ್ಷೇತ್ರದಲ್ಲಿ ಜನ್ಮತಾಳಿದ--ಮಜ್ಜಿಗೆ ಅನ್ನ ಉಂಡ ಬ್ರಾಹ್ಮಣನ ಸತ್ವವು ಎಷ್ಟೆಂಬದನ್ನು ಜಗತ್ತಿನ ನಿದರ್ಶನಕ್ಕೆ ತಂದ ಕೊಟ್ಟನು. ಈತನಿಗೆ ಪರಾಕ್ರಮದಲ್ಲಿ ಶ್ರೀ ಪರಶುರಾಮನ ಉಪಮೆಯನ್ನೇ ಕೊಡಬಹುದಾಗಿತ್ತು. ಚಿಮಣಾಜಿ ಅಪ್ಪಾನು ಸೈನ್ಯದಲ್ಲಿರುವನೆಂಬ ವಾರ್ತೆಯು ಶ್ರವಣದಿಂದಲೇ ಶತ್ರುಗಳ ಹಲ್ಲಣವು ಹಾರಿಹೋಗುತ್ತಿತ್ತು. ಇಂಥ ಕಡುಗಲಿಗಳಾದ ಆ ಬಂಧುದ್ವಯರು ಕೇವಲ ಭರತಖಂಡದ ಪುಣ್ಯನಿಧಿಗಳಾಗಿದ್ದರೆಂದು ಹೇಳಬಹುದು.

ಚಿಮಣಾಜಿ ಅಪ್ಪಾನು ಪ್ರತಿದಿವಸ ಮುಕ್ಕಾಮಿನಲ್ಲಿದ್ದಾಗ ಬಾಜೀರಾಯನಿಗೆ ಭೆಟ್ಟಿಯಾಗದೆ ಇರುತ್ತಿರಲಿಲ್ಲ. ಮುಂಜಾನೆ ಹಾಗು ಮಧ್ಯಾನ್ಹದಲ್ಲಿಯಾಗಲಿ, ಅಥವಾ ಸಂಜೆಯ ಮುಂದಾಗಲಿ ಆ ಬಂಧುದ್ವಯರು ಕೂಡಿ ಪ್ರಚಲಿತ ಪರಿಸ್ಥಿತಿಯ ಬಗ್ಗೆ ನಾಲ್ಕು ಮಾತುಗಳನ್ನಾಡದೆ ಇರುತ್ತಿದ್ದಿಲ್ಲ. ಹೀಗಿದ್ದು, ಇಡೀ ದಿವಸದಲ್ಲಿ ಚಿಮಣಾಜಿಯು ತನ್ನ ಬಳಿಗೆ ಬರದ್ದನ್ನು ನೋಡಿ ಬಾಜೀರಾಯನಿಗೆ ಆಶ್ಚರ್ಯವೆನಿಸಿತು. ಭ್ರಾತೃಪ್ರೇಮದ ಆ ಶೂರನು ಚಿಮಣಾಜಿಯು ಬರದಿರುವ ಕಾರಣವನ್ನು ತಿಳಿಯುವದಕ್ಕಾಗಿ ಸಂಜೆಯ ಮುಂದೆ ತಾನೇ ಆತನ ದಿವಾಣಖಾನೆಗೆ ಹೋದನು.

ಬಾಜೀರಾಯನು ಬಂದಾಗ ಚಿಮಣಾಜಿಯು ಪತ್ರ ಬರೆಯುವದ ರಲ್ಲಿ ಒಳ್ಳೇ ತಲ್ಲೀನನಾಗಿದ್ದನು. ಆತನ ಗಾದೆಯ ಮೇಲೆ ಬರೆದು ಸಿದ್ಧ ವಾದ ಹತ್ತಿಪ್ಪತ್ತು ಪತ್ರಗಳು ವ್ಯವಸ್ಥೆಯಿಂದ ಇಡಲ್ಪಟ್ಟಿದ್ದವು. ಹೀಗೆ ಕೆಲಸದಲ್ಲಿ ತಲ್ಲೀನನಾದ ತಮ್ಮನನ್ನು ನೋಡಿ ಬಾಜೀರಾಯನು—

“ಅಪ್ಪಾ, ಇದೇನು ಉದ್ಯೋಗವನ್ನು ನಡಿಸಿರುವಿ? ನಮಗೆ ತಿಳಿ ಯದಂಥ ಯಾವ ವ್ಯೂಹವನ್ನು ರಚಿಸತೊಡಗಿರುವಿ? ಕಾರಕೂನ ಮೊದಲಾ ದವರ ಸಹಾಯವಿಲ್ಲದೆ ನೀನೇ ಪತ್ರ ಬರಿಯುತ್ತಿರುವದರಿಂದ ನಿನ್ನ ಈ ಪತ್ರ ಗಳು ಅಂಥ ಯಾವ ಮಹತ್ವದ ಕಾರಸ್ಥಾನಕ್ಕೆ ಸಂಬಂಧಿಸಿರುವವು? ನನಗೆ ತಿಳಿಸಲಿಕ್ಕೆ ಶಕ್ಯವಿದ್ದರೆ ಹೇಳು.”

ಚಿಮಣಾಜಿಯು ಲೆಕ್ಕಣಿಕೆಯನ್ನು ಕೆಳಗಿಟ್ಟು, ಹಾಸ್ಯಮುಖದಿಂದ ಅಣ್ಣನಿಗೆ ಸ್ವಾಗತವನ್ನು ಮಾಡಿದನು. ಬಾಜೀರಾಯನು ನಗನಗುತ್ತ ಅಪ್ಪಾನ ಬಳಿಯಲ್ಲಿರುವ ಬೇರೊಂದು ಗಾದೆಯ ಮೇಲೆ ಕುಳಿತುಕೊಂ ಡನು. ಆಗ ಆಪ್ಪಾನು ನುಡಿದನೇನಂದರೆ—ನಿಮಗೆ ತಿಳಿಯದಂಥ ಕಾರ ಸ್ಥಾನವು ಈ ಮರಾಠೀ ಶಾಹಿಯಲ್ಲಿ ಆದಾವದಿರುವದು? ನಿಮಗೆ ಅವಶ್ಯ ವಾಗಿ ತಿಳಿಸತಕ್ಕ ಸಂಗತಿಯೇ ಇರುತ್ತದೆ. ಈ ಪತ್ರಗಳ ಬರವಣಿಗೆ ಮುಗಿಸಿ ನಿಮ್ಮ ಬಳಿಗೆ ಬರಬೇಕೆಂದು ಮಾಡಿದ್ದೆನು. ತಾವೇ ಇಲ್ಲಿ ಬಂದದ್ದು ಬಹಳ ಉತ್ತಮವಾಯಿತು. ನಾನು ಹೇಳುವ ಸಂಗತಿಯನ್ನು ಲಕ್ಷಪೂ ರ್ವಕವಾಗಿ ಕೇಳಿಕೊಳ್ಳೋಣವಾಗಲಿ!

ಈ ಮೇರೆಗೆ ಚಿಮಣಾಜಿಯು ನುಡಿದು ಪಿಂಪಳಗ್ರಾಮದ ಪ್ರಮುಖ ರಾದ ಸೂರ್ಯಾಜಿ-ರಾಘೋಬ ಇವರು ಹೇಳಿದ ಎಲ್ಲ ಸಂಗತಿಗಳನ್ನು ಶ್ರುತ ಪಡಿಸಿದನು. ವಸಯಿ ಪ್ರಾಂತದಲ್ಲಿ ಪೋರ್ತುಗೀಜರು ಈಗ ಪುಂಡಾಟಿಕೆ ನಡಿಸಿದ್ದನ್ನು ನೋಡಿ ಬಾಜೀರಾಯನಿಗೂ ಬಹಳ ಸಿಟ್ಟು ಬಂದಿತು. ವಿಧ ರ್ಮಿಗಳಾದ ಅವರು ಭರತಖಂಡದಲ್ಲಿ ಕಾಲಿಟ್ಟು ‘ಹೊರಗಿನ ದೆವ್ವ ಬಂದು ಮನೆಯ ದೆವ್ವವನ್ನು ಓಡಿಸಿತೆಂಬ”ಂತೆ ಹಿಂದೂಧರ್ಮಕ್ಕೇ ಉಚ್ಚಾಟನೆ ಕೊಡುತ್ತಿರುವರೆಂದ ಬಳಿಕ ಕ್ಷುದ್ರ ಕೀಟಕಗಳನ್ನು ಸಂಹರಿಸಿದಂತೆ ಇವ ರನ್ನು ಸಂಹರಿಸಬೇಕೆಂದು ಆತನು ಆವೇಶದಿಂದ ನುಡಿದನು. ಯಾರಾದರೂ ಪರಕೀಯರು ಬಂದು ತಮ್ಮ ಮನೆ ಹಾಳು ಮಾಡುವರೆಂದರೆ ಸಾಮಾನ್ಯ ಜನರಿಗೇ ಸಹನವಾಗುವದಿಲ್ಲ. ಅಂದಮೇಲೆ ತೇಜಸ್ವಿಗಳಾದ ಬಾಜೀರಾವ

ಚಿಮಣಾಜಿಅಪ್ಪಾ ಇವರಿಗೆ ಪರಕೀಯರು ತಮ್ಮ ರಾಜ್ಯದೊಳಗೆ ಪುಂಡಾಟಿಕೆ ನಡಿಸಿರುವರೆಂಬ ಸಂಗತಿಯು ಸಹನವಾಗಬಹುದೇ? ಇಂಥ ಸಹನ ಗುಣವು ಒಬ್ಬ ಜೀವನ್ಮುಕ್ತನಲ್ಲಿರುವದು ಅಥವಾ ಹೇಡಿಯಾದವನೊಬ್ಬನಲ್ಲಿರುವದು. ಪರರ ಉಪಟಳವನ್ನು ಮೌನದಿಂದ ಸಹನ ಮಾಡುವವನು ಜೀವನ್ಮುಕ್ತನಾದರೂ ಇರಬೇಕು ಹೇಡಿಯಾದರೂ ಇರಬೇಕು. ಇವರಿಬ್ಬರ ಹೊರತು ಅನ್ಯರಿಗೆ ಶತ್ರುಗಳ ಪರಾಟವು ಸಹನವಾಗದು. ಬಾಜೀರಾಯನಾಗಲಿ, ಚಿಮಣಾಜಿಯಾಗಲಿ ಇಂಥ ಜೀವನ್ಮುಕ್ತರಿದ್ದಿಲ್ಲ. ಅವರು ಜೀವನ್ಮುಕ್ತರಾಗಿದ್ದರೆ ಗಿರಿಗಹ್ವರಗಳನ್ನು ಸೇರಿ ಭಗವಚ್ಚಿಂತನದಲ್ಲಿ ಕಾಲ ಕಳೆಯುತ್ತಿದ್ದರು. ಅಥವಾ ಹೇಡಿಗಳಾಗಿದ್ದರೆ ರಾಜ್ಯವನ್ನು ಪರಕೀಯರಿಗೊಪ್ಪಿಸಿ ಭಿಕ್ಷೆಯಿಂದ ಉಪಜೀವಿಸುತ್ತಿದ್ದರು. ಆದರೆ ಅವರು ಮೇಲಾದ ರಣಧುರಂಧರರೂ, ಶತ್ರುಗಳ ಗುಂಡಿಗೆಗಳನ್ನು ನಡಿಲಿಸುವ ಕಡುಗಲಿಗಳೂ ಆದದ್ದರಿಂದ ಖಡ್ಗಪಾಣಿಗಳಾಗಿ ಅಡ್ಡಬಂದ ಶತ್ರುಗಳನ್ನು ಜಡಿದು ಭರತ ಖಂಡದಲ್ಲಿ ಮರಾಟರ ಪ್ರಭುತ್ವವನ್ನು ಸ್ಥಿರಗೊಳಿಸಿದರು. ಛತ್ರಪತಿಯ ರಾಜ್ಯವನ್ನು ವಿಸ್ತರಿಸಿದರು. ವೇದಧರ್ಮಕ್ಕೆ ಆಶ್ರಯವನ್ನಿತ್ತರು. ಪರಮ ತೇಜಸ್ವಿಗಳಿಂದಲ್ಲದೆ ಪಾಪೀ ಪರದೇಶಿಗಳಿಂದ ಇಂಥ ಕೆಲಸವಾಗಬಹುದೇ? ಇರಲಿ.

ಬಳಿಕ ಆ ಬಂಧುದ್ವಯರಲ್ಲಿ ಫಿರಂಗೀಜನರ ಬಲಾಬಲಗಳ ವಿಷಯವಾಗಿ ಚರ್ಚೆ ನಡೆಯಿತು. ಆಗ ಚಿಮಣಾಜಿಯು ತನಗೆ ತಿಳಿದ ಸಂಗತಿಗಳನ್ನು ಹೇಳಿ, ಆ ಜನರನ್ನು ಬಗ್ಗುಬಡಿಯುವದಕ್ಕೆ ಯಾವ ಯಾವ ಹಂಚಿಕೆ ಯೋಚಿಸಿರುವೆನೆಂಬದನ್ನೂ ಈ ಕೆಲಸಕ್ಕೆ ಯಾರು ಯಾರು ಹ್ಯಾಗೆ ಹ್ಯಾಗೆ ಸಹಾಯ ಮಾಡಬೇಕೆಂಬದಕ್ಕಾಗಿ ಯಾವ ಯಾವ ಜನರಿಗೆ ಪತ್ರ ಬರೆದಿರುವೆನೆಂಬದನ್ನೂ ಬಾಜೀರಾಯನಿಗೆ ಶ್ರುತಪಡಿಸಿದನು. ಬಾಜೀರಾಯನು ಮೇಲಾದ ಮುತ್ಸದ್ದಿಯೂ ಯುದ್ಧಕುಶಲನೂ ಆಗಿದ್ದು, ತಮ್ಮನ ಈ ಯೋಜನೆಗೆ ತುಂಬಾ ಸಂತೋಷಪಟ್ಟು ಆ ಸಂತೋಷದ ಭರದಲ್ಲಿ ಆತನ ಬೆನ್ನ ಮೇಲೆ ಕೈಯಾಡಿಸಿ---ಅಪ್ಪಾ, ನೀನು ಸಾಮಾನ್ಯ ಮನುಷ್ಯನಲ್ಲ; ನಿನ್ನ ಪೌರುಷವೂ-ಮುತ್ಸದ್ದಿತನವೂ ಬಹು ಶ್ರೇಷ್ಠತರದವಾಗಿರುತ್ತವೆ. ನೀನು ಮರಾಟರ ರಾಜ್ಯಕ್ಕೆ ಮುಖ್ಯ ಸ್ತಂಭಸ್ವರೂಪನಾಗಿರುತ್ತೀ; ನಿನ್ನಂಥ ರಣಧೀರ ತಮ್ಮನನ್ನು ಒದಗಿಸಿ ಕೊಟ್ಟದ್ದಕ್ಕೆ ಆ ದಯಾಘನನಾದ ಪರ

ಮಾತ್ಮನ ಉಪಕಾರವನ್ನು ನಾನು ಸರ್ವದಾ ಸ್ಮರಿಸುತ್ತಲಿರುತ್ತೇನೆ. ಈ ಫ್ರೋರ್ತುಗೀಜರ ಮೇಲೆ ನೀನೇ ಸ್ವಾರೀ ಮಾಡು; ನಾನು ಉತ್ತರದಲ್ಲಿ ಮುಸಲ್ಮಾನರ ಸಮಾಚಾರಕ್ಕೆ ಹೋಗುವೆನು. ಆದರೆ ನೀನು ಇಂತಿಷ್ಟೇ ದಿವಸಗಳಲ್ಲಿ ಫ್ರೋರ್ತುಗೀಜರ ಸೊಕ್ಕನ್ನು ಅಡಗಿಸುತ್ತೇನೆಂದು ಹೇಳಿದರೆ ಅಷ್ಟು ದಿವಸಗಳ ವರೆಗೆ ನಾನು ಪುಣೆಯಲ್ಲಿ ವಾಸಿಸಿ ಈ ಶನಿವಾರವಾಡೆ ಯನ್ನು ರಕ್ಷಿಸುವೆನು. ಎಂದು ನುಡಿದನು.

ಇಂತು ಬಾಜೀರಾಯನು ಪ್ರೋತ್ಸಾಹಿಸಿ ಮಾತನಾಡಲು ಚಿಮಣಾಜಿ ಅಪ್ಪಾನ ವೀರಶ್ರೀಯು ದ್ವಿಗುಣಿತವಾಯಿತು. ಆಗ ಆತನು ಅಣ್ಣನನ್ನು ಕುರಿತು--ಈ ಕ್ಷಣದಿಂದ ಆರುತಿಂಗಳ ಅವಧಿಯಲ್ಲಿ ನಾನು ಪೋರ್ತುಗೀ ಜರನ್ನು ವಸಯಿ ಪ್ರಾಂತದಿಂದ ಹೊರಗೆಟ್ಟುತ್ತೇನೆ. ಎಂದು ನುಡಿದನು. ತಮ್ಮನ ಈ ಸಾಹಸದ ಮಾತುಗಳನ್ನು ಕೇಳಿ ಬಾಜೀರಾಯನಿಗೆ ಪರಮಾ ವಧಿಯಾದ ಸಂತೋಷವಾಯಿತು. ಆತನು ತನ್ನ ಮನಸ್ಸಿನಲ್ಲಿ—ಇದ್ದರೆ ಇಂಥ ತಮ್ಮನಿರಬೇಕು. ಈತನಲ್ಲಿಯ ಗುಣಗಳು ಅಮೌಲ್ಯವಾಗಿರು ವವು. ಈತನು ನಾಮಾಂಕಿತ ಶೂರನಿರುವನಲ್ಲದೆ ಮೇಲಾದ ಭ್ರಾತೃ ನಿಷ್ಠನೂ ಇರುವನು. ಈತನು ನನ್ನಲ್ಲಿಟ್ಟಿರುವ ನಿಷ್ಠೆಯನ್ನು ನೋಡಿ ಜಗತ್ತೇ ದಂಗುಬಡಿದು ಹೋಗುವದು. ಶಿವಛತ್ರಪತಿಯ ಪುಣ್ಯಪ್ರಭಾವ ದಿಂದಲೇ ಇಂಥ ಬಂಧುವು ನನಗೆ ದೊರೆತಿರುವನು. ಇಂದಿನ ವರೆಗೆ ಈತನು ಪ್ರತಿಜ್ಞೆಗೆ ಹೊರತಾಗಿ ನಡೆದಿಲ್ಲ. ರಾಮಬಾಣಕ್ಕೆ ಹ್ಯಾಗೆ ಹುಸಿ ಇಲ್ಲವೆಂದು ರಾಮಾಯಣವು ಸಾರುತ್ತದೋ ಹಾಗೆ ಚಿಮಣಾಜಿಅಪ್ಪಾನ ಪ್ರತಿಜ್ಞೆಗೆ ಹುಸಿಇಲ್ಲವೆಂಬದನ್ನು ಜಗತ್ತೇ ಕೊಂಡಾಡುವದು. ಶ್ರೀದಯಾ ಘನನಾದ ಪರಮೇಶ್ವರನು ಇವನಿಂದ ಇದೇ ರೀತಿಯಾಗಿ ರಾಷ್ಟ್ರದ ಸೇವೆ ಕೈಕೊಳ್ಳಲಿ? (ಬಹಿರಂಗದಲ್ಲಿ) ಅಪ್ಪಾ, ನಿನ್ನ ಸಾಹಸವನ್ನು ಮನಃಪೂರ್ವ ಕವಾಗಿ ಹೊಗಳುತ್ತೇನೆ. ಪೋರ್ತುಗೀಜರ ಆಯುಧಗಳು ಕ್ರೂರವಿರುವ ವರಿಂದ ಬಹು ಎಚ್ಚರದಿಂದ ಕಾರ್ಯವನ್ನು ಕೊನೆಗಾಣಿಸು. ಈ ಸಂಗತಿಯ ವಿಷಯವಾಗಿ ನಿನಗೆ ಇನ್ನೊಮ್ಮೆ ಯೋಗ್ಯಸೂಚನೆಗಳನ್ನು ಮಾಡುತ್ತೇನೆ ಹಾವಿನಮರಿಯು ಹುಟ್ಟಿದಾಗ ಒಂದು ಚೋಟು ಸಹ ಇರುವದಿಲ್ಲ. ಆಗ್ಗೇ ಅದನ್ನು ಕೊಲ್ಲದಿದ್ದರೆ ಮುಂದೆ ಅದು ದೊಡ್ಡದಾಗಿ ತನ್ನ ವಿಷದಿಂದ ಅನೇಕ ಜನರ ಪ್ರಾಣವನ್ನು ಹೀರದೆ ಹ್ಯಾಗೆ ಬಿಡುವದಿಲ್ಲವೋ ಹಾಗೆ ಈ ಫಿರಂಗೀ

ಜನರ ಸ್ಥಿತಿಯಾಗಿದೆ. ಅವರನ್ನು ದೇಶದಿಂದ ಹೊರಗೆ ಹಾಕುವದಕ್ಕಾಗಿ ನಾವು ಇಂದಿನ ವರೆಗೆ ಮಾಡಿದ ಪ್ರಯತ್ನಗಳೆಲ್ಲ ನಿಷ್ಫಲವಾಗಿ ಅವರು ಹೆಚ್ಚು ಹೆಚ್ಚು ಬಲಶಾಲಿಗಳಾಗ ಹತ್ತಿದ್ದು, ಬಹಳ ಆಶ್ಚರ್ಯದ ಸಂಗತಿಯಾಗಿದೆ. ಇನ್ನು ಮುಂದೆ ಹೀಗೆ ಸಡಿಲು ಬಿಡುವದು. ಒಳಿತಲ್ಲ. ನೀನು ಅವರ ಪಾರುಪತ್ಯಕ್ಕಾಗಿ ಟೊಂಕಕಟ್ಟಿದ್ದು ಯೋಗ್ಯವೇ ಆಗಿದೆ. ಮೇಲಾಗಿ ನಿನ್ನ ಮೇಲೆ ಶ್ರೀಪರಶುರಾಮನ ಕೃಪಾಕಟಾಕ್ಷವಿದ್ದದರಿಂದ ಈ ಕೆಲಸದಲ್ಲಿ ನೀನು ನಿಶ್ಚಯವಾಗಿ ಯಶಸ್ವೀಯಾಗುತ್ತೀ ಎಂಬದು ನನಗೆ ನಂಬುಗೆಯದೆ. ನೀನು ಈ ಕೆಲಸವನ್ನು ನಿರ್ವಹಿಸಿದ ನಂತರ ನಾನು ಉತ್ತರಕಡೆಗೆ ಬುಂದೇಲಖಂಡ, ರಜಪುತಸ್ಥಾನ, ದಿಲ್ಲಿ ಮೊದಲಾದವುಗಳ ಮೇಲೆ ಸ್ವಾರೀಮಾಡುವೆನು. ನಿನಗೆ ಆ ಫಿರಂಗೀಜನರ ವಿಷಯವಾಗಿ ಮತ್ತಿ ಮಹತ್ವದ ಸಂಗತಿಗಳೇನು ತಿಳಿದಿವೆ? ಎಂದು ಕೇಳಿದನು. ಅಣ್ಣನ ಈ ಪ್ರಶ್ನೆಯನ್ನು ಕೇಳಿ ಚಿಮಣಾಜಿಯು—

ಚಿಮಣಾಜಿ—ಸದ್ಯಕ್ಕೆ ಅಂಥ ಮಹತ್ವದ ಸುದ್ದಿ ತಿಳಿದಿಲ್ಲ. ಅವರು ವಸಯೀಪ್ರಾಂತದಲ್ಲಿ ತಮ್ಮ ಪ್ರಸ್ಥವನ್ನು ಹ್ಯಾಗೆ ಬೆಳಿಸಿರುವರೆಂಬದು ಮಾತ್ರ ಚನ್ನಾಗಿ ತಿಳಿದುಬಂದಿದೆ. ಈ ಫಿರಂಗೀಜನರಿಗೆ ಮುಂಬಯಿಯಲ್ಲಿರುವ ಇಂಗ್ರಜರ ಗುಪ್ತಸಹಾಯವಿದ್ದಂತೆ ತೋರುತ್ತಿದೆ. ವಸಯೀ ಹಾಗು ಮುಂಬಯಿಗಳಲ್ಲಿದ್ದ ಈ ಜಲಚರಪ್ರಾಣಿಗಳನ್ನು ಹೊಡೆದೋಡಿಸಿದ ಹೊರತು ನಮ್ಮ ರಾಜ್ಯಕ್ಕೆ ಕ್ಷೇಮವಿಲ್ಲ. ಈ ಫಿರಂಗೀಜನರ ಸೊಕ್ಕನ್ನು ಇಳಿಸುವದಕ್ಕಾಗಿ ಮೇಲೆಹೇಳಿದಂತೆ ಆಂಗ್ರೇಬಂಧುಗಳಿಗೆ ಪತ್ರಬರೆದಿದ್ದೇನೆ. ಹಾಗು ಸಾವಂತ, ವೆಂಕಟರಾವ ಘೋರ್ಪಡೆ, ಜೋಶಿ ಮೊದಲಾದವರಿಗೂ ಪತ್ರಬರೆದಿದ್ದೇನೆ. ಸುತ್ತಲೂ, ಜನರು ಮುಗಿಬಿದ್ದ ಹೊರತು ಆ ಸೊಕ್ಕಿನ ಫಿರಂಗೀಜನರು ಕಣ್ಣುತೆರೆಯುವದಿಲ್ಲ.

ಬಾಜೀರಾವ—ಅಪ್ಪಾ, ನಿನ್ನ ಯೋಜನೆಯು ಯೋಗ್ಯವಾದದ್ದಿದೆ. ಈ ಕೊಂಕಣ ಪ್ರದೇಶದಲ್ಲಿ ಗುಡ್ಡಗಳು ಬಹಳ ಇರುವದರಿಂದ ವಿಶೇಷ ಸೈನ್ಯವನ್ನು ಇಲ್ಲಿಂದಲೇ ಒಯ್ದರೆ ಬಹಳ ತೊಂದರೆಯಾಗುವ ಸಂಭವವಿರುತ್ತದೆ. ಆದ್ದರಿಂದ ಘೋರ್ಪಡೆ, ಜೋಸಿ, ಆಂಗ್ರೇ ಇವರೇ ಮೊದಲಾದವರ ಸಹಾಯದಿಂದ ಕೆಲಸ ನಿರ್ವಹಿಸುವ ಎತ್ತುಗಡೆ ಮಾಡು. ಈ ಫಿರಂಗೀ ಜನರು ಎಷ್ಟು ಬಲಿಷ್ಠರಾದರೂ ನಮ್ಮ ಸೈನ್ಯಕ್ಕೆ ಈಡಾಗಲಾರರು

ಅವರ ಆಯುಧಗಳು ಮಾತ್ರ ನಮ್ಮಕ್ಕಿಂತಲೂ ಕ್ರೂರವಾಗಿವೆ. ಮುಸಲ್ಮಾನ-ಪಠಾಣ, ರೋಹಿಲ, ರಜಪೂತ, ಮೊದಲಾದವರಿಗೆ ಏಳುಕೆರೆನೀರು ಕುಡಿಸಿದ ನಮ್ಮ ದಂಡಾಳುಗಳು ಈ ಕೆಂಪುಮೋರೆಯ ವ್ಯಾಪಾರೀ ಜನರನ್ನು ಲೆಕ್ಕಿಸಲಾರರು. ಆದರೂ ಶತ್ರುವು ಅಸಮರ್ಥನಿರುವನೆಂದು ಮೈಮರೆಯಬಾರದು. ಶತ್ರುವು ಬಲಿಷ್ಠನಿರಲಿ, ದುರ್ಬಲನಿರಲಿ. ನಾವು ಯಾವಾಗಲೂ ಸಾವಧತೆಯಿಂದ ವರ್ತಿಸುವದೇ ಜಾಣತನವು. ಇದರಲ್ಲಿಯೇ ಮುತ್ಸದ್ದಿತನವಿರುತ್ತದೆ.

ಚಿಮಣಾಜಿ- ಈ ಫಿರಂಗೀಜನರ ವ್ಯಾಪಾರವು ಕೇವಲ ತೋರಿಕೆಗಾಗಿ ಮಾತ್ರ; ಇವರ ಉದ್ಯೋಗವು ವ್ಯಾಪಾರದಿಂದ ತೀರ ಭಿನ್ನವಾಗಿದೆ. ಧರ್ಮದ ವಿಷಯದಲ್ಲಿ ಇವರು ಮುಸಲ್ಮಾನರಿಗಿಂತಲೂ ನಮ್ಮ ಜನರಿಗೆ ಹೆಚ್ಚು ತೊಂದರೆಯನ್ನು ಕೊಡುತ್ತಾರೆ. ಸಾಷ್ಟಿಯಲ್ಲಿ ಇವರು ಹಿಂದುಗಳಿಗೆ ತಮ್ಮ ಧರ್ಮಕೃತ್ಯಗಳನ್ನು ನೆರವೇರಿಸಕೂಡದೆಂದು ಕಟ್ಟಪ್ಪಣೆ ಕೊಟ್ಟರುತ್ತಾರಂತೆ! ಏನು ನೀಚರಿರುವರು? ಹಿಂದುಗಳ ರಾಜ್ಯದಲ್ಲಿ ಬಂದು, ಹಿಂದುಗಳ ಉಪ್ಪು ಉಂಡು ಹಿಂದುಗಳ ಮೇಲೆಯೇ ರಾಕ್ಷಸೀಸತ್ತೆಯನ್ನು ನಡಿಸುವರಲ್ಲ! ಹಿಂದುಗಳಾದ ನಾವು ಜೀವಂತವಿರುವಾಗಲೇ ಇವರು ಇಷ್ಟೊಂ-ದು ಕ್ರೂರಕೃತ್ಯಗಳನ್ನು ನಡಿಸಿರುವರಲ್ಲವೇ? ನೋಡಿರಿ ಇವರ ವ್ಯಾಪಾರವು ಹ್ಯಾಗಿದೆಯೆಂಬದನ್ನು? ಇವರು ಸರಕುಗಳ ವ್ಯಾಪಾರಿಗಳಲ್ಲ; ಧರ್ಮದ ವ್ಯಾಪಾರಿಗಳು!! ಇನ್ನುಮುಂದೆ ಇವರ ಪಾರುಪತ್ಯಮಾಡದೆಬಿಡುವ ಹಾಗಿಲ್ಲ.

ಬಾಜೀರಾವ- ಇಂಥ ಪರಧರ್ಮ ದ್ವೇಷಿಗಳಿಗೆ ಅವಶ್ಯವಾಗಿ ಶಿಕ್ಷೆ ಮಾಡಲೇಬೇಕು. ದುಷ್ಟರನ್ನು ದಂಡಿಸುವ ವಿಷಯದಲ್ಲಿ ಜನಮೇಜಯರಾಜನನ್ನೇ ಅನುಸರಣ ಮಾಡಬೇಕು. ಆತನು ಸರ್ಪಸತ್ರವನ್ನು ಮಾಡಿದಂತೆ ಇಂಥ ನೀಚರನ್ನು ನಿಲ್ಲಿಸಿ ಸುಡಬೇಕು. ಅಪ್ಪಾ, ಈ ವಿಷಯದಲ್ಲಿ ನೀನು ಸ್ವಲ್ಪವೂ ಅನುಮಾನ ಮಾಡಕೂಡದು. ದುಷ್ಟನಿಗ್ರಹ ಮಾಡುವದು ಕ್ಷಾತ್ರಧರ್ಮ ಸ್ವೀಕಾರಮಾಡಿದ ನಮ್ಮಗಳಕರ್ತವ್ಯವೇ ಆಗಿರುವದು.

ಚಿಮಣಾಜಿ—ಹುಜೂರಿನಿಂದ ಇಷ್ಟು ಅಪ್ಪಣೆ ದೊರೆತಬಳಿಕ ಕೆಲಸದಲ್ಲಿ ಸ್ವಲ್ಪವೂ ಅಂತರವಾಗಗೊಡುವದಿಲ್ಲ. ಆರುತಿಂಗಳಲ್ಲಿ ಈ ಫಿರಂಗೀಜನರ ಸೊಕ್ಕನ್ನು ಇಳಿಸುವೆನೆಂದು ಈ ಮೊದಲೇ ಸನ್ನಿಧಿಯಲ್ಲಿ ಪ್ರತಿಜ್ಞೆ ಮಾಡಿದ್ದೇನೆ. ಪ್ರತಿಜ್ಞಮಾಡಿದ ಹೊರತು ಕಾರ್ಯಕ್ಕೆ ಹುರುಪು ಬರುವ

ದಿಲ್ಲ. ಹೊತ್ತು ಮುಳುಗುವಷ್ಟರಲ್ಲಿ ಜಯದ್ರಥನ ತಲೆ ಕತ್ತರಿಸುವೆನು ಇಲ್ಲವೆ ಅಗ್ನಿಕಾಷ್ಠ ಭಕ್ಷಣಮಾಡುವೆನು ಎಂಬದಾಗಿ ಭಯಂಕರ ಪ್ರತಿಜ್ಞೆಯನ್ನು ಅರ್ಜುನನು ಮಾಡಿದನಂತರ ಒದಗಿದ ಕೆಲಸವಾಯಿತು.

ಬಾಜೀರಾವ—ನೀನು ಅಪ್ಪಾ, ಇದರಲ್ಲಿ ಒಂದು ಸಂಗತಿಯನ್ನು ಮಾತ್ರ ನೀನು ಮರೆತಿರುತ್ತೀ; ಹೇಗಂದರೆ—ಅರ್ಜುನನ ಪ್ರತಿಜ್ಞೆಯನ್ನು ಪೂರ್ಣಪಡಿಸಲು ಭಗವಂತನು ಸಹಕಾರಿಯಾಗಿ ನಿಂತಂತೆ ಈಗಿನ ಕಲಿಯುಗದಲ್ಲಿ ನಿನಗೆ ಸಹಾಯಕರು ಯಾರಿರುವರು? ಭಗವಂತನ ಸಹಾಯವಿಲ್ಲದಿದ್ದರೆ ಅರ್ಜುನನ ಪ್ರತಿಜ್ಞೆ ಪೂರ್ಣವಾಗುತ್ತಿತ್ತೆ?

ಚಿಮಣಾಜಿ—ಈ ಮಾತನ್ನು ನಾನು ಮರೆತಿರುವೆನು? ನಮ್ಮ ರಕ್ಷಣಕ್ಕಾಗಿ ಶ್ರೀ ಭಾರ್ಗವರಾಮನು ಸದೈವ ಜಾಗರೂಕನಾಗಿರುವನು; ಯಾವ ಮಹಾವೀರನು ಕೇವಲ ಒಂದೇ ಕೊಡಲಿಯಿಂದ ೨೧ ಸಾರೆ ಪೃಥ್ವಿಯನ್ನೆಲ್ಲ ನಿಃಕ್ಷತ್ರಿಯನ್ನಾಗಿ ಮಾಡಿದನೋ ಆ ಪರಶುರಾಮದೇವನ ಕೃಪೆಯು ನಮ್ಮ ಮನೆತನದ ಮೇಲಿರುವದು. ಆತನ ಕೃಪೆಯುಬಲದಿಂದಲೇ ಶತ್ರುಗಳನ್ನು ಗೆಲ್ಲುವ ಸಾಮರ್ಥ್ಯವು ನಮ್ಮಲ್ಲುಂಟಾಗಿದೆಯೆಂಬದರ ಅನುಭವವು ನನಗೆ ಅನೇಕ ಸಾರೆ ಬಂದಿರುವದು. ಶ್ರೀ ಭಾರ್ಗವರಾಮನ ಕೃಪೆಯಲ್ಲದೆ ಶ್ರೀ ಸದ್ಗುರು ಬ್ರಹ್ಮೇಂದ್ರಸ್ವಾಮಿಗಳ ಶುಭಾಶೀರ್ವಾದವು ನಿಮ್ಮ ಮೇಲೂ ನನ್ನ ಮೇಲೂ ಸದೈವ ಇರುವದು. ಶ್ರೀ ಶಿವಛತ್ರಪತಿಯ ಪುಣ್ಯವಂತೂ ಸದೈವ ನಮ್ಮ ಬೆನ್ನಿನ ಮೇಲೆ ವರ್ತಿಸುತ್ತಿರುವದು. ಇಷ್ಟೆಲ್ಲ ಯೋಗವು ಕೂಡಿರುವಾಗ ಎಂಥ ಬಲಾಢ್ಯ ಶತ್ರುವನ್ನಾದರೂ ಲೀಲಾಮಾತ್ರದಿಂದ [illegible] ನನಗಿರುವದು. ಆದರೆ ಈ [illegible] ನನಗೆ ಅಶಕ್ಯವಾಗಬಹುದೇ?

ಬಾಜೀರಾವ—[illegible] ಅಪ್ಪಾ, ನೀನು ಅಂಥ ಸಮರ್ಥನೇ ಇರುವಿ; ಇಂದಿನ ವರೆಗೆ ನೀನು ತೋರಿಸಿದ ಪರಾಕ್ರಮದ ಪ್ರಸಂಗಗಳನ್ನು ನೋಡಿದರೆ ಈಗ ಒದಗಿದ ಈ ಪ್ರಸಂಗದಲ್ಲಿ ನೀನು ಲೀಲಾಮಾತ್ರದಿಂದ ಯಶಸ್ವಿಯಾಗುವೆ.

ಈ ಮೇರೆಗೆ ಆ ಬಂಧುದ್ವಯರಲ್ಲಿ ಸಂಭಾಷಣವಾದ ಬಳಿಕ ಬಾಜೀರಾಯನು ವಿಶ್ರಾಂತಿಗಾಗಿ ಅರಮನೆಯ ಹೂಡೋಣಿಕ್ಕೆ ನಡೆದನು. ಬಳಿಕ

ಚಿಮಣಾಜಿಯು ಸಿದ್ಧವಾದ ಕಾಗದಪತ್ರಗಳನ್ನೆಲ್ಲ ತೆಗೆದಿಟ್ಟು ಅಣ್ಣನೊಡನೆ ಹರಟೆಹೊಡೆಯುವದಕ್ಕಾಗಿ ಹೂದೋಟಕ್ಕೆ ತೆರಳಿದನು.

## (೪) ಪೋರ್ತುಗೀಜ-ಫಿರಂಗಿಗಳ ಪರಿಸ್ಥಿತಿ.

**ಕಡುಗಲಿಯಾದ** ಚಿಮಣಾಜಿಅಪ್ಪಾನ ರಣಕೌಶಲ್ಯವನ್ನು ಓದುವ ಮೊದಲು ನಮ್ಮ ಪ್ರಿಯವಾಚಕರು ಪೋರ್ತುಗೀಜ ಫಿರಂಗಿಗಳೆಂದರೆ ಯಾರು? ಅವರು ಹಿಂದುಸ್ತಾನಕ್ಕೆ ಹ್ಯಾಗೆ ಬಂದರು? ವಸಯೀ ಪ್ರದೇಶವು ಎಂಥದು ಅಲ್ಲಿ ಅವರ ಪ್ರಸ್ಥವು ಹ್ಯಾಗೆ ಬೆಳೆಯಿತು? ಇತ್ಯಾದಿ ಸಂಗತಿಗಳನ್ನು ತಿಳಕೊಳ್ಳುವದು ಅವಶ್ಯವಾಗಿರುವದು. ಈ ಐತಿಹಾಸಿಕ ಚಿತ್ರವು ಮನೋಹರವಾದದ್ದರಿಂದ ಅದರ ಅಲ್ಪಪರಿಚಯುವನ್ನು ಇಲ್ಲಿ ಮಾಡಿಕೊಡುವೆವು.

ಹದಿನೈದನೇ ಶತಕದ ಕೊನೆಯ ಭಾಗದಲ್ಲಿ ಪಾಶ್ಚಾತ್ಯರಿಗೆ ಹಿಂದುಸ್ತಾನದ ಪರಿಚಯುವನ್ನು ಮೊಟ್ಟಮೊದಲು ಮಾಡಿಕೊಟ್ಟವನು ವಾಸ್ಕೋಡಿಗಾಮಾ ಎಂಬ ಪ್ರಸಿದ್ಧ ಸಾಹಸಿಯು: ಈತನು ಪೋರ್ತುಗಾಲದೇಶದ ನಿವಾಸಿಯು; ಈ ವಾಸ್ಕೋಡಿಗಾಮನ ಆಗಮನವಾಗಿ ಹೋದ ಬಳಿಕ ಪೋರ್ತುಗಾಲದ ಅನೇಕ ಜನರು ಹಿಂದುಸ್ಥಾನಕ್ಕೆ ಬರಲಾರಂಭಿಸಿದರು. ಅವರೆಲ್ಲರೂ ದಕ್ಷಿಣಆಫ್ರಿಕೆಯನ್ನು ಸುತ್ತಿಕೊಂಡು ಬರುತ್ತಿದ್ದದರಿಂದ ಹಿಂದುಸ್ಥಾನದ ಪಶ್ಚಿಮದಂಡೆಗೇ ಅವರು ಪ್ರಥಮದರ್ಶನವನ್ನು ಕೊಡಬೇಕಾಗುತ್ತಿತ್ತು. ಹೀಗೆ ಹಿಂದುಸ್ತಾನಕ್ಕೆ ನುಗ್ಗಹತ್ತಿದ ಪೋರ್ತುಗೀಜರು ಗೋಮಾಂತಕದಲ್ಲಿ ಪಣಜಿಯೆಂಬಲ್ಲಿ ವಸತಿಯನ್ನು ಮಾಡಿದರು. ಬಳಿಕ ಅವರು ಕ್ರಮಕ್ರಮವಾಗಿ ಕೊಂಕಣದ ಉತ್ತರ ದಂಡೆಯ ಕಡೆಗೆ ಕಾಲು ಚಾಚಿ ಚೌಲ ಹಾಗು ವಸಯೀ ಎಂಬಲ್ಲಿ ಭದ್ರತೆಯಿಂದ ನೆಲಸಿದರು.

ಪೋರ್ತಗೀಜರು ಹಿಂದುಸ್ತಾನಕ್ಕೆ ಬರಹತ್ತಿದ ಸುಳಿವು ತಿಳಿದು ಫ್ರೇಂಚ-ಇಂಗ್ರಜ ಮೊದಲಾದ ಪಾಶ್ಚಾತ್ಯ ರಾಷ್ಟ್ರಗಳ ನಿವಾಸಿಗಳೂ ಹಿಂದುಸ್ತಾನಕ್ಕೆ ಬರಲಾರಂಭಿಸಿದರು. ಕೆಲದಿನಗಳಲ್ಲಿ ಈ ರಾಷ್ಟ್ರಗಳ ಜನರೂ ಪಶ್ಚಿಮಸಮುದ್ರ ತೀರದಲ್ಲಿ ವಾಸಸ್ಥಳಗಳನ್ನು ಹುಡುಕಿಕೊಂಡರು.

ಆದರೆ ಈ ಫ್ರೇಂಚ-ಇಂಗ್ರೇಜರಿಗಿಂತ ಪೋರ್ತುಗೀಜ ಫಿರಂಗೀಜನರ ಉಪ ಟಳವು ಹೆಚ್ಚಾಯಿತು. ಇಂಗ್ರೇಜ ಹಾಗು ಫ್ರೇಂಚರು ಕೇವಲ ವ್ಯಾಪಾರೀ ದೃಷ್ಟಿಯಿಂದ ದೂರದರ್ಶಿಗಳಾಗಿ ನಡೆಯಲಾರಂಭಿಸಿದರು. ಆದರೆ ಪೋ-ರ್ತುಗೀಜ ಫಿರಂಗೀಜನರು ರೋಮನ್‌ಕ್ಯಾಥಲೀಕ ಕ್ರಿಸ್ತೀಪಂಥದ ಕಟ್ಟಾ ಅಭಿಮಾನಿಗಳಾಗಿದ್ದು, ಆ ಪಂಥದ ಪ್ರಸಾರದ ಸಲುವಾಗಿ ಅವರು ಹಿಂದೂ ನಿವಾಸಿಗಳಿಗೆ ವಿಲಕ್ಷಣ ತೊಂದರೆ ಕೊಡಲಾರಂಭಿಸಿದರು. ಈ ಧರ್ಮ ಛಲದಿಂದ ಪೋರ್ತುಗೀಜ ಫಿರಂಗಿಗಳು ಹಿಂದುನಿವಾಸಿಗಳಿಗೆ ರಾಕ್ಷಸರಂತೆ ತೋರಲಾರಂಭಿಸಿದರು. ಆದ್ದರಿಂದ ಪರಸ್ಪರರಲ್ಲಿ ವೈರಭಾವವು ಶೀಘ್ರ ವಾಗಿ ಬೆಳೆದುಹೋಯಿತು. ಪೋರ್ತುಗೀಜರ ಧರ್ಮಛಲದ ಮೂಲಕ ವಾಗಿಯೇ ಪೇಶ್ವೆ ಸರಕಾರವು ಅತ್ತ ಲಕ್ಷಗೊಡಬೇಕಾಯಿತು. ಅವರಲ್ಲಿ ಧರ್ಮಛಲವಿರದಿದ್ದರೆ ಉಳಿದ ಪಾಶ್ಚಾತ್ಯರಂತೆ ಇವರ ಉಸಾಬರಿಗೊ ಪೇಶ್ವೆ ಸರಕಾರವು ಹೋಗುತ್ತಿದ್ದಿಲ್ಲ.

ಪೇಶ್ವೆಸರಕಾರವು ಪೋರ್ತುಗೀಜರನ್ನು ದಂಡಿಸುವದಕ್ಕಾಗಿ ಪೂರ್ವ ಸಿದ್ಧತೆಯನ್ನು ನಡಿಸಿದಾಗ ವಸಯಿ ಕಿಲ್ಲೆಯಲ್ಲಿ ಪೋರ್ತುಗೀಜರದರ್ಪವು ವಿಶೇಷವಾಗಿ ಕುಳಿತಿತ್ತು. ಅವರು ಆ ಕೋಟೆಯಲ್ಲಿ ರೋಮನ್‌ಕ್ಯಾಥ ಲೀಕ ಧರ್ಮದ ಗುಡಿಗಳನ್ನೂ ಮಂದಿರಗಳನ್ನೂ ಕಟ್ಟಿಸಿದ್ದಲ್ಲದೆ ಆ ಧರ್ಮದ ಉಪದೇಶಕರಿಗೋಸ್ಕರ ಸುಂದರ ಇಮಾರತುಗಳನ್ನು ಕಟ್ಟಿಸಿದ್ದರು. ಹಾಗು ಧರ್ಮಾಧ್ಯಕ್ಷ ಅಂದರೆ ಬಿಶಪ್ಪನ ಸಲುವಾಗಿ ವಿಶಾಲವಾದ ಮಂದಿರವನ್ನು ಕಟ್ಟಿಸಿದ್ದಲ್ಲದೆ ಆ ಮಂದಿರದ ಸುತ್ತಲೂದೊಡ್ಡದೊಡ್ಡ ಪ್ರಾಕಾರದ ಗೋಡೆ ಗಳನ್ನು ಕಟ್ಟಿಸಿದ್ದರು. ಅಲ್ಪಾವಕಾಶದಲ್ಲಿಯೇ ಪೋರ್ತುಗೀಜರು ಇಷ್ಟು ದೊಡ್ಡ ಧಾರ್ಮಿಕ ಸಂಸ್ಥೆಯನ್ನು ನೆಲೆಗೊಳಿಸಿದರೆಂದ ಬಳಿಕ ಅವರ ಧರ್ಮಾಭಿಮಾನವು ಎಷ್ಟು ಪ್ರಚಂಡವಾಗಿತ್ತೆಂಬದರ ಕಲ್ಪನೆಯು ನಮ್ಮ ಜಾಣಾಕ್ಷ ವಾಚಕರ ಲಕ್ಷದಲ್ಲಿ ಸಹಜವಾಗಿ ಬರಬಹುದು.

ಧರ್ಮಾಭಿಮಾನವು ಒಂದು ಬಗೆಯ ಹುಚ್ಚೆಂದು ಹೇಳಬಹುದು. ಹುಚ್ಚು ಹಿಡಿದವನು ಮಂದಿಯ ಸುಖ ದುಃಖಗಳ ಕಡೆಗೆ ಹ್ಯಾಗೆ ಲಕ್ಷಗೊಡದೆ ಕೇವಲ ತನ್ನ ಉನ್ಮಾದ ಸ್ಥಿತಿಯಲ್ಲಿಯೇ ಇರುವನೋ ಹಾಗೆ ಧರ್ಮಾಭಿಮಾನದಿಂದ ಹುಚ್ಚನಾದವನು ಪರಧರ್ಮದವರ ಸುಖ ದುಃಖ ಗಳ ಕಡೆಗೆ ಲಕ್ಷಗೊಡುವದಿಲ್ಲ. ಅವನು ತನ್ನ ಧರ್ಮದ ಸೊಕ್ಕಿನಲ್ಲಿಯೇ

ಕಣ್ಣುಮುಚ್ಚಿ ಬಾಯಿ ತೆರೆಯುತ್ತಿರುತ್ತಾನೆ. ಇಂಥ ಧರ್ಮದ ಹುಚ್ಚಿನವರ ಕೈಯಲ್ಲಿ ರಾಜಸತ್ತೆಯಿದ್ದರಂತೂ ಪರಧರ್ಮದವರ ಗೋಳಾಟಕ್ಕೆ ಎಣೆಯೇ ಉಳಿಯಲಿಲ್ಲವೆಂದು ಹೇಳಬಹುದು. ವಾಸ್ತವವಾಗಿ ವಿಚಾರಿಸಿದರೆ ಇಂಥ ಹುಚ್ಚು ವಿವೇಕಶೂನ್ಯರಲ್ಲಿಯೇ ವಿಶೇಷವಾಗಿರುತ್ತದೆಂದು ಕಂಡು ಬರುವದು. ತನ್ನ ಧರ್ಮವೇ ಜಗತ್ತಿನಲ್ಲಿ ಶ್ರೇಷ್ಠವಿದ್ದು, ಆ ಧರ್ಮವನ್ನೇ ಸರ್ವರೂ ಪಾಲಿಸಬೇಕೆಂದು ದುರಾಗ್ರಹ ಪಡುವವರು ವಿವೇಕಶೂನ್ಯರಲ್ಲದೆ ಬೇರಿನ್ನೇನು? ವಸ್ತುತಃ ಸರ್ವಧರ್ಮಗಳೂ ಒಂದೇ ವಿಧವಾದ ತತ್ವವನ್ನು ಸಾರುತ್ತಿರುತ್ತವೆ. ಧರ್ಮ ವಿವರಣೆಗಳ ಪ್ರಕಾರವು ಮಾತ್ರ ಬೇರೆಬೇರೆಯಿರುವವು. ಯಾವ ಧರ್ಮದಲ್ಲಿಯೇ ಆಗಲಿ ಧರ್ಮದರಹಸ್ಯವು ಯಾವನಿಗೆ ತಿಳಿದಿರುವದೋ ಅವನೇ ನಿಜವಾದ ಧಾರ್ಮಿಕನು. ಉಳಿದವರು ಅಧಾರ್ಮಿಕರೆಂದು ಹೇಳಬಹುದು. ಧರ್ಮದ ರಹಸ್ಯ ತಿಳಿದವನಿಗೆ ಸರ್ವ ಧರ್ಮಗಳು ಸಮಾನವಾಗಿಯೇ ತೋರುವವು. ವಸ್ತುಸ್ಥಿತಿಯು ಹೀಗಿದ್ದರೂ ಆಗಾಗ್ಗೆ ರಾಷ್ಟ್ರದಲ್ಲಿ ಧಾರ್ಮಿಕ ಕಲಹಗಳು ಏಳುವದನ್ನು ನೋಡಿದರೆ ಅದು ಕೇವಲ ಅಜ್ಞಾನ ವ್ಯವಹಾರಮೂಲಕವಾಗಿ ಎಂಬದು ಸ್ಪಷ್ಟವಾಗಿ ಕಂಡು ಬರುತ್ತದೆ. ನಮ್ಮ ಧರ್ಮಾನುಯಾಯಿಗಳ ಸಂಖ್ಯೆಯು ಹೆಚ್ಚಾಗಬೇಕು. ಜಗತ್ತಿನಲ್ಲಿ ನಮ್ಮದೇ ಅಗ್ರೇಸರ ಎಂಬ ಮಹತ್ವಾಕಾಂಕ್ಷೆಯವರಿಂದಲೇ ಧರ್ಮಛಲಗಳು ಹುಟ್ಟುತ್ತಲಿದ್ದು ನಿಜವಾದ ಧಾರ್ಮಿಕರಿಂದ ಧರ್ಮಛಲಗಳು ಎಂದೂ ಆಗಲಾರವು. ಇಂಥ ಮಹತ್ವಾಕಾಂಕ್ಷೆಯು ಪೋರ್ತುಗೀಜರಲ್ಲಿದ್ದರಿಂದ ಅವರು ಗೋವೆಯೊಳು ಧರ್ಮಛಲವನ್ನು ನಡಿಸಿದರು.

ಯಾವ ಕಾಲದಲ್ಲಿ ಛತ್ರಪತಿಯಂಥವರ ಅನನ್ಯ ಪೌರುಷವು ಜನರಲ್ಲಿ ಜಾಗ್ರತವಾಗಿತ್ತೋ ಪುರುಷರು ಪುರುಷರೆಂದೆನಿಸಿಕೊಳ್ಳಲು ಯೋಗ್ಯರಾಗಿದ್ದರೋ ಶತ್ರುವು ಒಂದು ಪೆಟ್ಟು ಹಾಕಿದರೆ ತಿರುಗಿ ಹತ್ತು ಪೆಟ್ಟು ಹಾಕುವಷ್ಟು ದೇಹದಾರ್ಢ್ಯವು ಜನರಲ್ಲಿತ್ತೋ ಆ ಕಾಲದಲ್ಲಿ ಪೋರ್ತುಗೀಜರ ಈ ಧರ್ಮಛಲವು ಹ್ಯಾಗೆ ಯಶಸ್ವಿಯಾಗುವದು? ಬಲಿಷ್ಠರಿದ್ದ ಮನೆಯಲ್ಲಿ ಚೋರನ ಪ್ರವೇಶವು ಹ್ಯಾಗಾಗುವದು? ಒಂದು ವೇಳೆ ಆದರೂ ಆತನು ಕಪಾಳ ಮೋಕ್ಷವನ್ನು ಹೊಂದದೆ ಹ್ಯಾಗೆ ಪಾರಾದಾನು? ಅದರಂತೆ ಪ್ರಕೃತದಲ್ಲಿ ಪೋರ್ತುಗೀಜರ ಸ್ಥಿತಿಯೂ ಆಗಬೇಕಾಯಿತು. ಅವರಿಗೆ ಕೃತಕರ್ಮಕ್ಕೆ ತಕ್ಕ ಪ್ರಾಯಶ್ಚಿತ್ತವು ದೊರೆಯುವ ಕಾಲವು ಸಮೀಪಿಸಿತು.

ಚಿಮಣಾಜಿ ಅಪ್ಪಾಜಿಯು ಯುದ್ಧದ ಸೌರಣೆಯನ್ನು ನಡಿಸಿದಾಗ ವಸಯೀ ಕೋಟೆಯಲ್ಲಿ ಧರ್ಮಾಭಿಮಾನಿಗಳಾದ ಅಧಿಕಾರಿಗಳೇ ವಿಶೇಷವಾಗಿದ್ದರು. ಆ ಅಧಿಕಾರಿಗಳಿಗೆ ಪೋಪನ ಅಪ್ಪಣೆಯು ಧರ್ಮಪ್ರಸಾರಕ್ಕಾಗಿ ಮೇಲಿಂದ ಮೇಲೆ ಬರುತ್ತಿತ್ತು. ಆ ಪೋಪನ ತಂತ್ರದಿಂದಲೇ ಆ ಅಧಿಕಾರಿಗಳು ನಡೆಯಬೇಕಾದ್ದರಿಂದ ಅವರು ಸ್ವಬುದ್ಧಿಗೆ ತಿಲಾಂಜಲಿಯನ್ನು ಕೊಟ್ಟೇ ಇತ್ತು ಬಂದಿದ್ದರೆಂದು ಹೇಳಬೇಕಾಗುವದು. ಆದರೆ ಅವರಲ್ಲಿ ಕೆಲವರು ಸ್ವಬುದ್ಧಿಯನ್ನು ಸ್ವಲ್ಪಮಟ್ಟಿಗಾದರೂ ಸ್ವತಂತ್ರವಾಗಿಟ್ಟುಕೊಂಡಿದ್ದರು. ಕೆಲವರಿಗೆ ಹಿಂದುಗಳ ಧರ್ಮದಲ್ಲಿ ಕೈಹಾಕಿ ಈ ರೀತಿ ಅನ್ಯಾಯ ಮಾಡುವದು ಸರಿಬರುತ್ತಿರಲಿಲ್ಲ. ಅದ್ದರಿಂದ ಧರ್ಮದ ಹುಚ್ಚಿನ ಅಧಿಕಾರಿಗಳಿಗೂ ಅವರಿಗೂ ಮೇಲಿಂದ ಮೇಲೆ ಬಡಿದಾಟವಾಗುತ್ತಿತ್ತು. ಆದರೆ ಧರ್ಮದ ಹುಚ್ಚಿನ ಅಧಿಕಾರಿಗಳ ಸಂಖ್ಯೆಯೇ ಹೆಚ್ಚಾಗಿದ್ದದರಿಂದ ಅವರ ಆಟವು ನಡೆಯುತ್ತಿರಲಿಲ್ಲ. ಇದರಿಂದ ಹಿಂದುಗಳ ಗೋಳಾಟವು ಮತ್ತಿಷ್ಟು ವಿಕೋಪಕ್ಕೆ ಹೋಯಿತು.

ವಸಯೀಕೋಟೆಯಲ್ಲಿರುವ ಪೋರ್ತಗೀಜ ಅಧಿಕಾರಿಗಳು ಹೀಗೆ ಬಡಿದಾಡುತ್ತಿರಲು ಅವರಿಗೆ ಪೇಶ್ವೆಯರ ಯುದ್ಧಸೌರಣೆಯ ವಾರ್ತೆಯು ತಿಳಿದು ಬಂದಿತು. ಈ ವಾರ್ತೆಯ ಶ್ರವಣದಿಂದ ಧರ್ಮಪ್ರಸಾರಕ್ಕೆ ವಿರೋಧವಿದ್ದ ಅಧಿಕಾರಿಗಳು ಉಳಿದ ಅಧಿಕಾರಿಗಳನ್ನು ಅಂಜಿಸಲಾರಂಭಿಸಿದರು. ಆದರೆ ಧರ್ಮದ ದುರಭಿಮಾನವು ತಲೆಗೇರಿದ ಆ ಜನರು ತಮ್ಮ ಹಟವನ್ನು ಸ್ವಲ್ಪಾದರೂ ಕಡಿಮೆ ಮಾಡಲಿಲ್ಲ. ಅವರು ಪೇಶ್ವೆಯವರಿಗೆ ತಮ್ಮ ದರ್ಪವನ್ನು ತೋರಿಸಿ ತಮ್ಮ ಸತ್ತೆಯನ್ನು ಇನ್ನೂ ಹೆಚ್ಚಾಗಿ ಬೆಳಿಸಬೇಕೆಂದು ನಿರ್ಧರಿಸಿದರು. ಆಗ ಅವರು ತಮ್ಮ ಜನರದೊಂದು ಸಭೆಯನ್ನು ಕರೆದು ಒದಗಿದ ಪರಿಸ್ಥಿತಿಯ ವಿಷಯವಾಗಿ ಏನು ಮಾಡಬೇಕೆಂದು ಚರ್ಚೆಯನ್ನು ನಡಿಸಿದರು.

ಸಭೆಯ ಪ್ರಾರಂಭಕ್ಕೆ ಪೇದ್ರೋಡೆಮೆಲ್ಲೋ ಎಂಬ ಅಧಿಕಾರಿಯು ಎದ್ದುನಿಂತು ಇಂತು ನುಡಿದನು:—ಪುಣೆಯ ಪೇಶ್ವೆಯವರು ನಮ್ಮ ಮೇಲೆ ಸ್ವಾರೀಮಾಡುವದಕ್ಕಾಗಿ ಯುದ್ಧಸಾಮುಗ್ರಿಗಳನ್ನು ಸಿದ್ಧಪಡಿಸತೊಡಗಿರುವರೆಂಬ ನಂಬಿಗೆಯ ಸುದ್ದಿಯು ಬಂದಿದೆ. ಇದರ ವಿಚಾರವನ್ನೇ ಈಗ ನಾವು ಮಾಡಬೇಕಾಗಿದೆ. ಹಿಂದುಸ್ಥಾನಕ್ಕೆ ಪಾಶ್ಚಾತ್ಯ ರಾಷ್ಟ್ರಗಳಿಂದ

ಸಾಪ್ಪೊಬ್ಬರೇ ಬಂದಿಲ್ಲ. ನಮ್ಮಂತೆ ಫ್ರೆಂಚ ಹಾಗು ಇಂಗ್ರಜರು ಬಂದಿರುತ್ತಾರೆ. ಮುಂಬಯಿಯಲ್ಲಿ ಇಂಗ್ರಜರ ದೊಡ್ಡ ದೊಡ್ಡ ವಖಾರಗಳಿವೆ. ಆದರೆ ಅವರ ಸಂಗಡ ಪೇಶ್ವೆಯವರು ಯುದ್ಧ ಮಾಡದೆ ನಮ್ಮ ಮೇಲೆಯೇ ದಂಡೆತ್ತಿ ಬರುವ ಕಾರಣವೇನು? ಪರರಾಷ್ಟ್ರದವರನ್ನು ಬರಗೊಡಬಾರದೆಂಬ ಹಟವು ಅವರಲ್ಲಿದ್ದರೆ ನಮ್ಮೆಲ್ಲರಿಗೂ ಅವರು ಸರಿಯಾಗಿ ಶತ್ರುಗಳಾಗುತ್ತಿದ್ದರು. ಆದರೆ ವಸ್ತುಸ್ಥಿತಿಯು ಹಾಗೆ ಕಂಡುಬರುವದಿಲ್ಲ. ಇಂಗ್ರಜರ ಸಂಗಡ ಅವರು ಯಾವ ಬಗೆಯ ದ್ವೇಷವನ್ನೂ ಮಾಡುವದಿಲ್ಲ. ಇದಕ್ಕೆ ಏನಾದರೊಂದು ಕಾರಣವಿರಬೇಕಷ್ಟೇ? ಆ ಕಾರಣವು ಯಾವದು? ವಿಚಾರ ಮಾಡಿದರೆ ಕಾರಣವು ನಮಗೆ ಸಹಜವಾಗಿ ಹೊಳೆಯುವದು. ಇಂಗ್ರಜರು ಕೇವಲ ವ್ಯಾಪಾರದಲ್ಲಿ ಮಗ್ನರಾಗಿರುವರು. ಅವರು ಕ್ರಿಸ್ತೀಧರ್ಮದ ಪ್ರಸಾರದ ಬಗ್ಗೆ ಸ್ವಲ್ಪವೂ ಪ್ರಯತ್ನಪಡುವದಿಲ್ಲ. ಈ ಬಗೆಯ ವರ್ತನವನ್ನು ಅವರು ಇಟ್ಟದ್ದರಿಂದ ಅವರೊಡನೆ ಹಿಂದುಗಳು ವಿರೋಧ ಮಾಡುವ ಕಾರಣವೇ ಇಲ್ಲ. ಆದರೆ ನಮ್ಮ ಆಚರಣೆಯು ಇದಕ್ಕೆ ವಿರುದ್ಧವಾಗಿರುತ್ತದೆ. ನಾವು ಕ್ರಿಸ್ತೀಧರ್ಮಪ್ರಸಾರವನ್ನೇ ಪ್ರಾಮುಖ್ಯವಾಗಿಟ್ಟುಕೊಂಡಿದ್ದೇವೆ. ಹಿಂದುಗಳನ್ನು ಹಿಡಿದು ತಂದು ಅವರಿಗೆ ನಮ್ಮ ಧರ್ಮವನ್ನು ಸ್ವೀಕರಿಸಲು ಒತ್ತಾಯ ಮಾಡುತ್ತೇವೆ. ಹಾಗು ಬಲುಮೆಯಿಂದ ಅವರ ಕುಲಗೆಡಿಸಿ ನಮ್ಮ ಧರ್ಮದ ದೀಕ್ಷೆಯನ್ನು ಅವರಿಗೆ ಕೊಡುತ್ತೇವೆ. ಇದು ಯಾವ ನ್ಯಾಯವು? ನಮ್ಮ ಧರ್ಮಗುರುವಾದ ಪೋಪನು ಬಹು ದೂರದಲ್ಲಿ ಕುಳಿತು ಕಣ್ಣುಮುಚ್ಚಿಕೊಂಡು ಅಪ್ಪಣೆಯ ಚೀಟಿಗಳನ್ನು ಕಳುಹಿಸುತ್ತಾನೆ; ಆದರೆ ನಾವು ಆ ಅಪ್ಪಣೆಯ ಚೀಟಿಗಳಂತೆ ಕಣ್ಣುಮುಚ್ಚಿಕೊಂಡು ನಡೆಯುವದು ಶುದ್ಧ ಮೂರ್ಖತನವಾಗಿರುತ್ತದೆ. ನಮ್ಮ ಧರ್ಮದ ದುರಭಿಮಾನದಿಂದ ಈ ಪ್ರಾಂತದ ನಿವಾಸಿಗಳೆಲ್ಲರೂ ನಮಗ ವಿರೋಧಿಗಳಾಗಿದ್ದಾರೆ. ಇಲ್ಲಿಯವರೆಗೆ ನಮ್ಮ ಪ್ರಸ್ಥವು ಬೆಳೆದಹಾಗೆ ಇನ್ನುಮುಂದೆ ಬೆಳೆಯುವ ಸಂಭವವಿಲ್ಲ. ಎಲ್ಲಿಯವರೆಗೆ ಮನೆಯ ಯಜಮಾನನಿಗ ಸುದ್ದಿ ಹೋಗಿಲ್ಲವೋ ಅಲ್ಲಿಯವರೆಗೆ ಅನ್ಯರ ಸಾಮ್ರಾಜ್ಯವು; ಮನೆಯವರಿಗೆ ಸುದ್ದಿ ಹತ್ತಿದಬಳಿಕ ಅನ್ಯರಿಗೆ ಅರ್ಧಚಂದ್ರವು ಪ್ರಾಪ್ತವಾಗುವದೇ ಸರಿ. ಆದರಂತೆ ನಮ್ಮ ಸ್ಥಿತಿಯೂ ಆಗಬಹುದಾಗಿದೆ ಪೇಶ್ವೆ ಸರಕಾರದ ವರೆಗೆ ನಮ್ಮ ದೂರು ಹೋದದ್ದರಿಂದ ಅವರು

ನಮ್ಮ ಪಾರುಪತ್ಯ ಮಾಡದೆ ಬಿಡರು. ನಾವು ಎಷ್ಟು ಶೌರ್ಯದಿಂದ ಕಾದಿದರೂ ಅವರ ಪಾಸಂಗಕ್ಕೆ ಸಹ ನಾವು ಹತ್ತುವಹಾಗಿಲ್ಲ. ನಮ್ಮ ದಂಡಾಳುಗಳ ಸಂಖ್ಯೆಯೆಷ್ಟು? ನಮ್ಮ ಸಾಮರ್ಥ್ಯವೆಷ್ಟು ಇದನ್ನೆಲ್ಲ ನಾವು ವಿಚಾರಮಾಡದೆ ಬರಿಯ ನಮ್ಮ ಬಿಂಕದಲ್ಲಿಯೇ ಸಾವಿಸ್ಸರೆ ಈ ಬಿಂಕವು ಎಲ್ಲಿಯುವರೆಗೆ ತಡೆಯುವದು? ಪೇಶ್ವೆಸರಕಾರದ ವಿರುದ್ಧವಾಗಿ ನಮಗೆ ಸಹಾಯಮಾಡಲು ಮುಂಬಯಿಯ ಇಂಗ್ರಜರಿಗೆ ಧೈರ್ಯವಾಗಲಿಕ್ಕಿಲ್ಲ. ಇಂಗ್ರಜರ ಸಹಾಯವು ದೊರಕದಿದ್ದರೆ ನಾವು ಕಾಲೂರಿ ನಿಲ್ಲುವ ಆಶೆಯಿಲ್ಲ. ಆದ್ದರಿಂದ ನಾವು ಇಂಥ ಹುಟ್ಟಿಗೆ ಹೋಗದೆ ಯಾವ ಧೋರಣದಿಂದ ನಡೆಯಬೇಕೆಂಬದನ್ನು ನಿಶ್ಚಯಿಸಿಕೊಂಡು ಪೇಶ್ವೆಯ ಕೂಡನೆ ಒಡಂಬಡಿಕೆ ಮಾಡಿಕೊಳ್ಳುವದು ಸಯುಕ್ತವಾಗಿ ತೋರುತ್ತದೆ.

ಈ ಮೇರೆಗೆ ಪೆದ್ರೋಡೆಮೆಲ್ಲೋಸು ಮಾತನಾಡಲು ಅವನ ಪಕ್ಷದ ಜನರೆಲ್ಲರೂ ಅದಕ್ಕೆ ತಮ್ಮ ಸಮ್ಮತಿಯನ್ನು ಕೊಟ್ಟರು. ಆದರೆ ಧರ್ಮಪ್ರಸಾರದ ಪಕ್ಷಪಾತಿಗಳಿಗೆ ಈ ಮಾತು ಸ್ವಲ್ಪವೂ ರುಚಿಸದಾಯಿತು. ಧರ್ಮಾಧ್ಯಕ್ಷನಾದ ಕಾರ್ಡಿನಲ್ ಬಾರ್ಬಾರೋಸನು ಅತ್ಯಂತ ಕೋಪೋದ್ರೇಕನಾಗಿ ಕೆಂಗಣ್ಣುಗಳಿಂದ ಕೆಂಗಿಡಿಗಳನ್ನು ಬೀರಲುಪಕ್ರಮಿಸಿದನು. ಆತನ ಕ್ರೋಧವನ್ನು ನೋಡಿ ಸಭೆಯು ನಿಶ್ಶಬ್ದವಾಯಿತು. ಕ್ರೋಧಾತಿರೇಕದಿಂದ ಕೆಲಹೊತ್ತಿನ ವರೆಗೆ ಆತನಿಗೆ ಮಾತಾಡಲು ಬಾಯಿ ಬಾರದಾಯಿತು.

ವಾಸ್ತವವಾಗಿ ನೋಡಿದರೆ ಆ ಧರ್ಮಾಧ್ಯಕ್ಷನಿಗೆ ಹಿಂದುಸ್ಥಾನದ ರಾಜಕರಣವು ಸ್ವಲ್ಪಾದರೂ ಗೊತ್ತಿರಲಿಲ್ಲ. ಆತನು ಪೋಪನ ಸಂದೇಶ ಹೊಂದಿ ಬಂದು ಸ್ವಲ್ಪದಿನಗಳು ಕ್ರಮಿಸಿದ್ದವು. ಪೇಶ್ವೇರೆಂದರೆ ಯಾರು? ಅವರ ದರ್ಪವೆಷ್ಟು ಅವರ ಬಲವೆಷ್ಟು? ಎಂಬದು ಆತನಿಗೆ ಸ್ವಲ್ಪಾದರೂ ಗೊತ್ತಿರಲಿಲ್ಲ. ಅವನು ಈ ಕಾಲದಲ್ಲಿ ಹಟಹಿಡಿಯದೆ ಹಿಂದುಸ್ಥಾನದ ಪರಿಸ್ಥಿತಿಯನ್ನು ತಿಳಿದವರ ಮಾತನ್ನು ಕೇಳಿದ್ದರೆ ಮುಂದಿನ ಅನರ್ಥವು ಕೆಲಅಂಶದಿಂದಾದರೂ ಕಡಿಮೆಯಾಗುತ್ತಿತ್ತು. ಆದರೆ ಧರ್ಮದ ದುರಭಿಮಾನಿಗಳಿಗೆ ಮುಂದಿನ ಧೋರಣವು ಸ್ವಲ್ಪವೂ ಇರುವದಿಲ್ಲೆಂಬದನ್ನು ತೋರಿಸುವದಕ್ಕಾಗಿಯೋ ಅಥವಾ ತನ್ನ ಮೂರ್ಖತನವನ್ನು ಜಗತ್ತಿನಲ್ಲಿ ಪ್ರಸಿದ್ಧಪಡಿಸುವದಕ್ಕಾಗಿಯೋ ಆ ಧರ್ಮಾಧ್ಯಕ್ಷನು ಕೆಲ ಹೊತ್ತು

ಮಾಡದಿರುವದು ಇತಿಹಾಸಕಾರರಿಗೆ ಲಾಂಛನಾಸ್ಪದವೇ ಸರಿ! ಆದ್ದರಿಂದ ಇಂಥ ಕರ್ತೃತ್ವಶಾಲಿಗಳನ್ನು ಬೈಲಿಗಿಡುವದು ಇತಿಹಾಸಕಾರರ-ಕಾದಂಬರಿ ಕಾರರ ಮುಖ್ಯ ಕರ್ತವ್ಯವಾಗಿರುವದು. ಇರಲಿ.

ಪ್ರಸ್ತುತದಲ್ಲಿ ಚಿಮಣಾಜಿಅಪ್ಪಾಜಿಯು ಕಳಿಸಿದ, ಮೇಲೆ ಉಲ್ಲೇಖಿಸಿದ ನಾಲ್ವರು ಇಂಥ ಕರ್ತೃತ್ವಶಾಲಿಗಳೆಂದು ಹೇಳಲಾಗುವದು. ಚಿಮಣಾಜಿಅಪ್ಪಾಜಿಯ ಪ್ರತಿಜ್ಞಾಪೂರಣವು ಇವರ ಕರ್ತೃತ್ವಶಕ್ತಿಯನ್ನೇ ವಿಶೇಷವಾಗಿ ಅವಲಂಬಿಸಿತ್ತು. ಯಾಕಂದರೆ ಯಾವನೊಬ್ಬ ಯೋದ್ಧಾಪುರುಷನು ಹೋರಾಡಿದ್ದ ಮಾತ್ರಕ್ಕೆ ಅವನಿಗೆ ಜಯಶ್ರೀಯು ಮಾಲೆ ಹಾಕುವ ಳೆಂಬ ನಿಯಮವಿಲ್ಲ. ಆ ಯೋದ್ಧಾಪುರುಷನಿಗೆ ತಕ್ಕಂತೆ ಅವನ ಪರಿವಾರವು ಕರ್ತೃತ್ವಶಕ್ತಿಯುಳ್ಳದ್ದಿದ್ದರೆ ಆ ಯೋದ್ಧಾಪುರುಷನ ಶ್ರಮಕ್ಕೆ ಪ್ರತಿಫಲ ದೊರೆಯುವದು. ವ್ಯವಹಾರದಲ್ಲಿಯಾದರೂ ಇದೇ ಮಾತು ನಿದರ್ಶನಕ್ಕೆ ಬರುತ್ತದೆ.

ತುಳಾಜಿರಾಯನು ಬಹು ಧೂರ್ತನೂ, ಕಾರ್ಯಸಾಧನದಲ್ಲಿ ಹಲವು ಹಂಚಿಕೆಗಳನ್ನು ಬಲ್ಲವನೂ ಆಗಿದ್ದನು. ಜನರ ಯೋಗ್ಯತೆಯನ್ನು ತಿಳಿಯುವದರಲ್ಲಿ ನಿಪುಣನಾದ ಚಿಮಣಾಜಿ ಅಪ್ಪಾಜಿಯು ತುಳಾಜಿರಾಯನ ಈ ಗುಣಗಳನ್ನು ಪರೀಕ್ಷಿಸಿಯೇ ಆತನಿಗೆ ಆಶ್ರಯ ಕೊಟ್ಟಿದ್ದನು. ತುಳಾಜಿರಾಯನ ಮೇಲೆ ಅಪ್ಪಾಜಿಯ ವಿಶ್ವಾಸವು ಬಹಳವಾಗಿತ್ತು. ಅಪ್ಪಾಜಿಯ ವಿಷಯವಾಗಿಯೂ ತುಳಾಜಿರಾಯನಲ್ಲಿ ಅದೇ ಪ್ರಕಾರವಾದ ಪ್ರೇಮವಿತ್ತು. ಅಪ್ಪಾಜಿಯು ಬೇಕಾದಂಥ ಕಠಿಣ ಕಾರ್ಯವನ್ನು ಹೇಳಿದರೂ ತುಳಾಜಿಯು ಅದನ್ನು ಶಿರಸಾವಹಿಸಿ ಕೇಳುತ್ತಿದ್ದನು. ಆ ಸ್ವಾಮಿಭಕ್ತನ ಏಕನಿಷ್ಠೆಯನ್ನು ನೋಡಿ ಅಪ್ಪಾಜಿಗೆ ಹೇಳಕೂಡದಷ್ಟು ಆನಂದವಾಗುತ್ತಿತ್ತು. ಇಂಥ ಸ್ವಾಮಿಭಕ್ತರಿಂದಲೇ ಮಹತ್ವದ ಕಾರ್ಯಗಳು ಕೈಗೂಡುವವೆಂಬದನ್ನು ಅಪ್ಪಾಜಿಯು ಚನ್ನಾಗಿ ಬಲ್ಲವನಾಗಿದ್ದನು. ಅಂತೆಯೇ ಅವನು ಪೋರ್ತುಗೀಜರ ಅಂತಸ್ಥ ವಿಚಾರವನ್ನು ಗುಪ್ತರೀತಿಯಿಂದ ತಿಳಿಯುವದಕ್ಕಾಗಿ ತುಳಾಜಿಯನ್ನು ಕಳಿಸಿದ್ದನು.

ತುಳಾಜಿಯ ಹಸ್ತಕರಾಗಿ ಹೊರಟಿದ್ದ ಗಣು, ರಾಘು, ಸದಾಶಿವ ಈ ಮೂವರಾದರೂ ಅತ್ಯಂತ ಪ್ರಾಮಾಣಿಕರಿದ್ದು ಚಿಮಣಾಜಿಅಪ್ಪಾಜಿಯ ಪ್ರೇಮಕ್ಕೆ ಪಾತ್ರರಾಗಿದ್ದರು. ಆದರೆ ಇವರಲ್ಲಿ ಸದಾಶಿವನ ಹೊರತು

ಉಳಿದಿಬ್ಬರು ಇದುವರೆಗೆ ಪ್ರತ್ಯಕ್ಷ ರಾಜಕರಣದಲ್ಲಿ ಸೇರಿದ್ದಿಲ್ಲ. ಕೇವಲ ಅಪ್ಪಾಜಿಯ ಸೇವೆಯನ್ನು ಮಾಡಿಕೊಂಡಿದ್ದರು. ತನಗೆ ಸ್ನಾನಕ್ಕೆ ನೀರು ಹಾಕುವ ಹಾಗು ದೋತರವನ್ನು ನೀರಿಗೆ ಹಾಕಿ ಇಡುವ ಗಣು, ರಾಘು ಇವರಲ್ಲಿ ಕ್ಷಾತ್ರತೇಜವಿರುತ್ತದೆಂಬದನ್ನು ಅಪ್ಪಾಜಿಯು ಕಂಡು ಹಿಡಿದು ಅವರನ್ನು ಆ ಕೆಲಸದಿಂದ ನಿವೃತ್ತರನ್ನಾಗಮಾಡಿ ಸೈನ್ಯದಲ್ಲಿ ಅವರಿಗೆ ನೌಕರಿಯನ್ನು ಕೊಟ್ಟಿದ್ದನು. ಯಾವದೊಂದು ಕೆಲಸದಲ್ಲಿ ಮನುಷ್ಯನ ಸ್ವಾಭಾವಿಕ ಒಲವಿದ್ದರೆ ಅವನು ಆ ಕೆಲಸದಲ್ಲಿ ಬೇಗನೆ ನೈಪುಣ್ಯತೆಯನ್ನು ಪಡೆಯುವನೆಂಬ ಮಾತು ಸುಳ್ಳಲ್ಲ. ಗಣು ಹಾಗು ರಾಘು ಇವರು ಸೈನ್ಯದಲ್ಲಿ ಸೇರಿದ್ದೊಂದೇ ತಡ, ಅಲ್ಪಾವಕಾಶದಲ್ಲಿಯೇ ಪ್ರಗತಿಯನ್ನು ಹೊಂದಿದರು. ತುಳಾಜಿರಾಯನು ಅವರಿಬ್ಬರ ಕೌಶಲ್ಯಕ್ಕೆ ಮೆಚ್ಚಿ ಅಪ್ಪಾಜಿಗೆ ಹೇಳಿ ಅವರನ್ನು ತನ್ನ ಕೈಕೆಳಗೆ ತಕ್ಕೊಂಡಿದ್ದನು. ಸದಾಶಿವ, ಗಣು ರಾಘು ಇವರು ಮೂವರೂ ಏಕಜೀವರಾಗಿದ್ದರು. ಈ ಮೂವರ ಮೇಲೆ ತುಳಾಜಿರಾಯನ ಹಾಗು ಚಿಮಣಾಜಿ ಅಪ್ಪಾಜಿಯ ಪ್ರೇಮ ಬಹಳ; ಆದ್ದರಿಂದ ತುಳಾಜಿಯು ವಸಯಿ ಪ್ರಾಂತಕ್ಕೆ ಗುಪ್ತಹೇರನಾಗಿ ಹೊರಡುವಾಗ ತನ್ನ ಹಸ್ತಕರಾದ ಆ ಮೂವರನ್ನು ಸಂಗಡ ಕರಕೊಂಡಿದ್ದನು. ಈ ವೀರ ಚೌಕಳಿಯ ಕೆಲಸವು ಅತ್ಯಂತ ಮಹತ್ವದ್ದಾಗಿತ್ತು. ಇವರು ಯಾವ ಬಗೆಯ ಆಡಂಬರವಿಲ್ಲದೆ ಹೊರಟಿದ್ದರು. ಇವರು ಪೇಶ್ವೆಯವರ ಕಡೆಯವರೆಂಬದು ಸಹ ಬೇರೆ ಜನರಿಗೆ ತಿಳಿಯುವಂತಿದ್ದಿಲ್ಲ.

ಹೀಗೆ ಗುಪ್ತವೇಷಧಾರಿಗಳಾಗಿ ಆ ನಾಲ್ವರು ಮೊದಲು ಪಿಂಪಳಗ್ರಾಮಕ್ಕೆ ಹೋದರು. ಆಗ ರಾನೋಬಾ ಹಾಗು ಸೂರ್ಯಾಜಿಯವರಿಗೆ ಪರಮಾನಂದವಾಯಿತು. ಅವರು ತುಳಾಜಿರಾಯನನ್ನೂ ಆತನ ಸಂಗಡಿಗರನ್ನೂ ಬಹಳವಾಗಿ ಗೌರವಿಸಿ ತಮ್ಮ ಯೋಗ್ಯತೆಯ ಮೇರೆಗೆ ಆತಿಥ್ಯವನ್ನು ಮಾಡಿದರು. ಬಳಿಕ ತುಳಾಜಿಯು ಚಿಮಣಾಜಿ ಅಪ್ಪಾಜಿಯವರ ಸಂದೇಶವನ್ನು ಆ ಗ್ರಾಮಾಧಿಕಾರಿಗಳಿಬ್ಬರಿಗೂ ತಿಳಿಸಿದನು. ಕ್ಷಿಪ್ರಕಾಲದಲ್ಲಿಯೇ ಚಿಮಣಾಜಿಯು ದಂಡೆತ್ತಿ ಬಂದು ಫಿರಂಗೀಜನರ ಶಾಸನ ಮಾಡುವನೆಂದು ತಿಳಿದು ಆ ಉಭಯತರಿಗೆ ತುಂಬಾ ಸಂತೋಷವಾಯಿತು. ಅವರು ತುಳಾಜಿರಾಯನಿಗೆ ಶಕ್ಯವಾದ ದಾರಿಯಿಂದ ಸಹಾಯ ಮಾಡಲು ಒಪ್ಪಿಕೊಂಡರು. ವಸಯೀಕೋಟೆಗೆ ಹೋಗಿ ತಾವು

ಏನೇನು ಮಾಡಬೇಕೆಂಬದನ್ನು ತುಳಾಜಿಯು ಅವರಿಗೆ ತಿಳಿಸಿದನು. ತುಳಾಜಿಯ ಹಂಚಿಕೆಗಳನ್ನು ಕೇಳಿ ಆ ಗ್ರಾಮಾಧಿಕಾರಿಗಳಿಗೆ ಬಹಳ ಆಶ್ಚರ್ಯವೆನಿಸಿತು. ಶತ್ರುಗಳ ಕೋಟೆಯಲ್ಲಿ ಸೇರುವದೆಂದರೆ ಅವರಿಗೆ ಅದೊಂದು ವಿಚಿತ್ರವಾಗಿ ತೋರಿತು. ಹಳ್ಳಿಗಾಡಿನ ಅವರು ಹೀಗೆ ಆಶ್ಚರ್ಯಪಟ್ಟದ್ದು ಅಸ್ವಾಭಾವಿಕವಲ್ಲ. ಆಗೆ ತುಳಾಜಿಯು ಸೂರ್ಯಾಜಿಯನ್ನು ಕುರಿತು—ಸೂರ್ಯಾಜಿರಾವ, ನಿಮ್ಮ ಗ್ರಾಮದಲ್ಲಿ ಪ್ರತಿವರುಷ ಸದಲ್ಲಿ ಅಥವಾ ಮತ್ತಾವ ಹಬ್ಬದಲ್ಲಿ ಜನರು ಸೋಗುಗಳನ್ನು ಹಾಕುತ್ತಿರುತ್ತಾರಲ್ಲವೇ? ಎಂದು ಕೇಳಿದನು. ಅದಕ್ಕೆ

ಸೂರ್ಯಾಜಿಯು—ಹೌದು; ಹಾಕುತ್ತಿರುತ್ತಾರೆ.

ತುಳಾಜಿರಾವ—ಆ ಸೋಗು ಹಾಕುವ ಪದ್ಧತಿಯು ಯಾಕೆ ಉತ್ಪನ್ನವಾಗಿದೆಯೆಂಬದು ನಿನಗೆ ಗೊತ್ತಿರಬಹುದಲ್ಲವೇ?

ಸೂರ್ಯಾಜಿರಾವ—ಜನರು ವಿನೋದಕ್ಕಾಗಿ ಹಾಕುತ್ತಾರೆಂದು ಮಾತ್ರ ಕೇಳಿ ತಿಳಿದಿರುವೆನು.

ತುಳಾಜಿರಾವ—ಆ ಸೋಗು ಹಾಕುವದರಲ್ಲಿ ಬರಿಯ ವಿನೋದದ ಉದ್ದೇಶವಿಲ್ಲ. ಈ ಸೋಗು ಹಾಕುವದಕ್ಕೂ ರಾಜಕರಣಕ್ಕೂ ಬಹಳ ಸಂಬಂಧವಿರುತ್ತದೆ. ವೇಷಾಂತರಗಳನ್ನು ಮಾಡುವ ಕೆಲಸದಲ್ಲಿ ಕೆಲಕೆಲವರಿಗೆ ಹುಟ್ಟುಗುಣವಿರುತ್ತದೆ. ಇಂಥ ಹುಟ್ಟುಗುಣವುಳ್ಳವರು ಗುಪ್ತಹೇರರಾಗಲಿಕ್ಕೆ ಯೋಗ್ಯರಾಗಿರುತ್ತಾರೆ. ಇಂಥ ಹುಟ್ಟುಗುಣದವರನ್ನು ಕಂಡುಹಿಡಿಯುವದಕ್ಕಾಗಿಯೂ, ಗುಪ್ತಹೇರರನ್ನು ಸಿದ್ಧಪಡಿಸುವದಕ್ಕಾಗಿಯೂ ಬಹು ಪುರಾತನ ಕಾಲದಿಂದ ಈ ಪದ್ಧತಿಯು ನಮ್ಮ ದೇಶದಲ್ಲಿ ಉಂಟಾಗಿರುತ್ತದೆ. ಸೋಗು ಹಾಕುವ ಕೆಲಸದಲ್ಲಿ ಒಳ್ಳೇ ಗಟ್ಟಿಗರಾದವರನ್ನು ರಾಜರು ಗುಪ್ತಹೇರರನ್ನಾಗಿ ಆರಿಸಿಕೊಳ್ಳುತ್ತಿದ್ದರು. ಆದ್ದರಿಂದ ಸೋಗು ಹಾಕುವ ಕಲೆಯಲ್ಲಿ ನಿಷ್ಣಾತರಾಗಬೇಕೆಂದು ಜನರು ಪ್ರತಿವರುಷವೂ ತಮ್ಮ ತಮ್ಮ ಊರುಗಳಲ್ಲಿ ಯಾವದೊಂದು ಹಬ್ಬದ ನಿಮಿತ್ಯದಿಂದ ಸೋಗು ಹಾಕಿ ಜನರ ವಿನೋದಕ್ಕೆ ಮಾರ್ಗವ ಮಾಡಿ ಕೊಡುತ್ತಿರುವರು. ಈ ಕಲೆಯ ಅಭಿವೃದ್ಧಿಯಾಗುವದು ಇನ್ನೂ ಅವಶ್ಯವಿದೆ. ನಮ್ಮ ಈ ಗೆಣು, ರಾಘೋಬಾ, ಸದಾಶಿವ ಇವರು ಸೋಗು ಹಾಕುವದರಲ್ಲಿ ಒಳ್ಳೇ ನಿಪುಣರಿರುತ್ತಾರೆ. ಇವರು ಶತ್ರುಗಳಿಗೆ ನಿರಾಯಾಸದಿಂದ

ಮಂಕುಬೂದಿ ಹಚ್ಚಿ ಪಾರಾಗಿ ಬರುವರು? ನಿಮ್ಮ ಗ್ರಾಮದಲ್ಲಿ ಯಾರಾದರು ಈ ಸೋಗು ಹಾಕುವ ಕೆಲಸದಲ್ಲಿ ನಿಪುಣರಾದವರಿದ್ದರೆ ಒಬ್ಬಿಬ್ಬರನ್ನು ಇವರ ಜೊತೆಗೆ ಕಳುಹಿಸು ಅಂದರೆ ನಿನ್ನ ಹಾಗು ರಾಘೋಬನ ಮಕ್ಕಳನ್ನೂ ನಿಮ್ಮೂರಿನ ಜನರನ್ನೂ ಗುರ್ತು ಹಿಡಿಯಲಿಕ್ಕೆ ಅನುಕೂಲವಾಗುವದು. ಮಾತ್ರ ಸೋಗು ಹಾಕುವ ಜನರು ಬಹು ಜಾಣರಿರಬೇಕು. ಶತ್ರುಗಳ ಕೈಗೆ ಸಿಕ್ಕು ಅನರ್ಥವನ್ನುಂಟು ಮಾಡುವಂಥ ದಡ್ಡರಿರಬಾರದು.

ಸೂರ್ಯಾಜಿರಾವ—ಸರದಾರರೇ, ನಮ್ಮ ಊರಲ್ಲಿ ಬಹುಜನರು ಸೋಗು ಹಾಕುತ್ತಿದ್ದರೂ ಅವರೆಲ್ಲರೂ ಇಂಥ ಕೆಲಸಕ್ಕೆ ಬಾರರು. ಅವರಲ್ಲಿ ಬಾಳಾಜಿ ಎಂಬವನೊಬ್ಬನು ಮಾತ್ರ ಒಳ್ಳೇ ಚತುರನಿದ್ದಾನೆ. ಅವನು ನಿಮ್ಮ ಕೆಲಸಕ್ಕೆ ಉಪಯೋಗ ಬಿದ್ದರೆ ನೋಡಿರಿ ಅವನನ್ನು ಕರೆಸಿಕೊಡುತ್ತೇನೆ.

ತುಳಾಜಿರಾವ—ನಿಮ್ಮ ಆ ಬಾಳಾಜಿಯೋ; ಅವನು ಸೋಗು ಹಾಕುವನೇನು? ನಿನ್ನೆ ಬಂದಿದ್ದನಲ್ಲ? ಅವನೇ ಅಲ್ಲವೇ? ಅವನು ಚತುರನಿದ್ದಾನೆ, ಅವನನ್ನು ನಮ್ಮ ಕಡೆಗೆ ಒಪ್ಪಿಸಿರಿ. ಅವನಿಂದ ಗುಪ್ತಹೇರನ ಕೆಲಸವಾಗುವದು.

ಈ ಮೇರೆಗೆ ತುಳಾಜಿಯೂ ಸೂರ್ಯಾಜಿಯೂ ಸಂಭಾಷಣೆ ಮಾಡುತ್ತಿರಲು ಅಲ್ಲಿಗೆ ಗಣೂ, ರಾಘು, ಸದಾಶಿವ ಈ ಮೂವರೂ ಬಂದರು. ಬಳಿಕ ಅವರು ತಾವು ಯಾವ ಯಾವ ಸೋಗು ತಕ್ಕೊಂಡು ವಸಯಿಕೋಟೆಯಲ್ಲಿ ಸೇರಬೇಕೆಂಬದನ್ನು ಕುರಿತು ವಿನೋದ ನಡಿಸಿದರು. ಆಗ—

ರಾಘು—ನಾನು ಯಾವ ಸೋಗು ತಕ್ಕೊಳ್ಳಲಿ? ಏನು ತಿರುಕನಾಗಲೋ ಅಥವಾ ವ್ಯಾಪಾರಿಯಾಗಲೋ? ಯಾವ ಸೋಗನ್ನು ಹಾಕಿದರೆ ನನಗೆ ಬೇಕಾದಲ್ಲಿ ತಿರುಗಿದರೂ ಪ್ರತಿಬಂಧವುಂಟಾಗಲಿಕ್ಕಿಲ್ಲ?

ಗಣು—ರಾಘೂ, ನೀನು ಬಹು ಕುಶಲನಿರುತ್ತೀ; ಯಾವ ಸೋಗು ತಕ್ಕೊಂಡರೂ ಜನರನ್ನು ಮರಳು ಮಾಡದೆ ಬಿಡತಕ್ಕವನು ನೀನಲ್ಲ, ನಿನ್ನಂಥ ವಸ್ತಾದಿಯು ಯಾವ ಸೋಗು ತಕ್ಕೊಂಡರೇನು?

ಸದಾಶಿವ—ಛೇ; ಹಾಗೆ ಹ್ಯಾಗೆ ಆದೀತು? ಕೆಲವು ಸೋಗುಗಳು ಬೇಕುಬೇಕಾದಲ್ಲಿ ಹೋಗಲಿಕ್ಕೆ ಬರುವಂಥವಿರುತ್ತವೆ. ಕೆಲವು ಸೋಗುಗಳು ವಿವಕ್ಷಿತ ಸ್ಥಳಗಳಿಗೆ ಮಾತ್ರ ಹೋಗಲುಪಯುಕ್ತವಿರುತ್ತವೆ. ನಾವು

ಶತ್ರುಗಳ ಮಧ್ಯದಲ್ಲಿ ಸೇರಬೇಕಾದ್ದರಿಂದ ನಮಗೆ ಬೇಕಾದಲ್ಲಿ ಹೋದರೂ ಯಾರದೂ ಅಡ್ಡಿಯುಂಟಾಗಬಾರದು. ಅಂಥ ಸೋಗನ್ನು ನಾವು ಧರಿಸಬೇಕು.

ಗೆಣು—ವ್ಯಾಪಾರೀ ಸೋಗು ಧರಿಸುವದಕ್ಕಿಂತ ಭಿಕ್ಷುಕರ ಸೋಗು ಹಾಕುವದೇ ಯೋಗ್ಯವೆಂದು ತೋರುತ್ತದೆ.

ಸದಾಶಿವ—ಭಿಕ್ಷುಕರ ಸೋಗು ಹಾಕುವದು ಹಗುರೆಂದು ಕಂಡು ಬಂದರೂ ಅದರಷ್ಟು ಕಠಿಣ ಸೋಗು ಯಾವದೂ ಅಲ್ಲ. ಭಿಕ್ಷುಕನಾದವನು ಚನ್ನಾಗಿ ಗಿರಡೀ ಹೊರಳಿಸಿ ಹಾಡಿ ಜನರ ಚಿತ್ತವನ್ನು ಆಕರ್ಷಿಸಿದರೇ ಅವನಿಗೆ ನಾಲ್ಕು ದುಡ್ಡನ್ನು ಯಾರಾದರೂ ಕೊಡುವರು. ಇಲ್ಲದಿದ್ದರೆ ಅವರನ್ನು ಯಾರೂಹತ್ತರ ನಿಲ್ಲಗೊಡುವದಿಲ್ಲ.

ತುಳಾಜಿರಾವ—ಭಿಕ್ಷುಕರ ಸೋಗು ಹಾಕಿದರೆ ಬೇಕಾದಲ್ಲಿ ಪ್ರವೇಶ ಮಾಡಲಿಕ್ಕೆ ಬರುತ್ತದೆಂಬದೇನೋ ನಿಜ; ಆದರೆ ನೀವು ಯಾರಲ್ಲಿ ಹೋಗುವಿರೆಂಬದು ನಿಮ್ಮ ಲಕ್ಷದಲ್ಲಿ ಬಂದಂತೆ ಕಾಣುವದಿಲ್ಲ. ಅವರು ಹೇಳಿಕೇಳಿ ಫಿರಂಗಿಗಳು. ಅವರಲ್ಲಿ ಪರಧರ್ಮದ ಭಿಕ್ಷುಕರಿಗೆ ದಾನಮಾಡುವ ಗುಣವು ಇರುವ ಸಂಭವವೇ ಇಲ್ಲ. ಮೂಲತಃ ಅವರು ಭಿಕ್ಷುಕರನ್ನೇ ಒಳಗೆ ಬಿಡದಿದ್ದರೆ ನೀವು ಸುದ್ದಿಯನ್ನು ತರುವ ಬಗೆ ಹ್ಯಾಗೆ? ಭಿಕ್ಷುಕರ ವೇಷವ ಧರಿಸಿ ನೀವು ನಮಗೆ ಬೇಕಾದ ಸುದ್ದಿಯನ್ನು ತಂದರೆ ನಮಗೆ ವಿಹಿತವೇ ಸರಿ! ಯಾಕಂದರೆ ಭಿಕ್ಷೆಯಿಂದ ನಿಮ್ಮ ಉಪಜೀವಿಕೆ ಸಾಗುವದರಿಂದ ಶ್ರೀಮಂತಸರಕಾರಕ್ಕೆ ನಿಮ್ಮ ಪಗಾರ ಕೊಡುವದಾದರೂ ಉಳಿಯುವದು. (ಎಲ್ಲರೂ ನಕ್ಕರು)

ರಾಘು—ಸರಿ, ಸರಿ! ಯೋಗ್ಯ ಉತ್ತರದಿಂದ ಪ್ರಶ್ನೆಯನ್ನು ಬಿಡಿಸಿದಿರಿ. ಒಬ್ಬರು ಭಿಕ್ಷುಕರಾಗಬೇಕು. ಉಳಿದವರು ವ್ಯಾಪಾರಿಗಳಾಗಬೇಕು. ಆ ಫಿರಂಗೀ ಜನರಿಗೆ ಕಾಯಿಪಲ್ಲೆ, ಹಾಲು-ಮೊಸರು, ಕೋಳಿ, ತತ್ತಿ ಮೊದಲಾದ ಪದಾರ್ಥಗಳ ಅವಶ್ಯಕತೆಯಿರುವದಷ್ಟೇ? ಈ ಪದಾರ್ಥಗಳನ್ನು ಮಾರುವ ನೆವದಿಂದ ನಾವು ಬೇಕಾದಲ್ಲಿಗೆ ಹೋಗಬಹುದು. ಯಾಕೆ ಈ ಯುಕ್ತಿಯು ಸರ್ವಸಮ್ಮತವೋ ಹ್ಯಾಗೆ?

ತುಳಾಜಿರಾವ—ರಾಘು, ಯೋಗ್ಯ ಹಂಚಿಕೆ ಹುಡುಕಿ ತೆಗೆದೆ. ನಾಳೆಗೇ ನೀವು ಈ ಕೆಲಸಕ್ಕೆ ಪ್ರಾರಂಭಮಾಡಿರಿ. ಫಿರಂಗೀ ಜನರು ನೀವು

ಹಿಯ್ದು ಪದಾರ್ಥಗಳನ್ನು ಕೊಂಡುಕೊಳ್ಳುವರು. ಆವರಿಗೆ ಈ ಪದಾರ್ಥ ಗಳ ಅವಶ್ಯಕತೆಯಿರುವದರಿಂದ ಕೋಟೆಯಲ್ಲಿ ನಿಮ್ಮ ಪ್ರವೇಶವಾದರೂ ನಿರಾಯಾಸವಿಂದ ಆಗುವದು. ನೀವು ಸಂಜೆಯುವರೆಗೆ ಅಲ್ಲಿ ಕೆಲಸಮಾಡಿ ಬೇಕಾದ ಮಾಹಿತಿಯನ್ನು ತಿಳಕೊಂಡು ಸಂಜೆಗೆ ನಮ್ಮ ಪಾಳಯಕ್ಕೆ ಬಂದು ತಿಳಿದ ಸಂಗತಿಗಳನ್ನು ನಿವೇದಿಸುತ್ತ ಹೋಗಬೇಕು.

ಈ ಮೇರೆಗೆ ಭಾಷಣವಾದ ಬಳಿಕ ಯಾರು ಯಾರು ಯಾವ ಯಾವ ವೇಷಗಳನ್ನು ಧರಿಸಬೇಕೆಂಬದೂ ತುಳಾಜಿರಾಯನು ಯಾವ ಗ್ರಾಮುವನ್ನು ಮುಖ್ಯ ಠಾಣೆಯನ್ನಾಗ ಮಾಡಬೇಕೆಂಬದೂ ನಿರ್ಣಯವಾಯಿತು. ನಿರ್ಣ ಯದ ಮೇರೆಗೆ ರಾಘು, ಗೇಣು, ಸದಾಶಿವ, ಬಾಳಾಜಿ, ಈ ನಾಲ್ವರು ಬಗೆಬಗೆಯ ಸೋಗು ಹಾಕಿಕೊಂಡು ಕಿಲ್ಲೆಯನ್ನು ಪ್ರವೇಶಿಸಿ ತಮ್ಮ ಕ್ಷಾತ್ರತೇಜವನ್ನೆಲ್ಲ ಅಡಗಿಸಿಕೊಂಡು ಬೂದಿ ಮುಚ್ಚಿದ ಕೆಂಡದಂತೆ ಗುಪ್ತ ವಾಗಿದ್ದು ವಸಯಿ ಕೋಟೆಯಲ್ಲಿಯ ಗುಪ್ತ ಸಂಗತಿಗಳನ್ನು ತಿಳಿದುಕೊಳ್ಳ ಲಾರಂಭಿಸಿದರು.

---

## (೬) ಈ ಹುಚ್ಚನು ಯಾರಿರಬಹುದು?

ವಸಯಿ ಕಿಲ್ಲೆಯಲ್ಲಿ ಗುಪ್ತ ಸಂಗತಿಗಳನ್ನು ತಿಳಿಯುತ್ತ ಬೂದಿ ಮುಚ್ಚಿದ ಕೆಂಡದಂತಿರುವ ಆ ನಾಲ್ವರು ಗುಪ್ತಹೇರರು ದಿನಾಲು ಹೊಸ ಹೊಸ ಹಂಚಿಕೆಗಳಿಂದ ಹೊಸ ಹೊಸ ಸಂಗತಿಗಳನ್ನು ತಿಳಿದುಕೊಳ್ಳಲಾ ರಂಭಿಸಿದರು. ರಾಘೋಬನು ಗಾನವಿದ್ಯೆಯಲ್ಲಿ ಕುಶಲನಿದ್ದದರಿಂದ ಅವನು ಏಕತಾರಿಯನ್ನು ಕೈಯಲ್ಲಿ ಹಿಡಿದು ನಿರ್ಭಯದಿಂದ ಕಿಲ್ಲೆಯಲ್ಲಿ ಸಂಚರಿಸು ತ್ತಿದ್ದನು. ಆಗ ಅವನ ವೇಷವು ವರ್ಣಿಸುವಹಾಗಿತ್ತು. ಮೂಲತಃ ರಾ- ಘೋಬನು ತೇಜಸ್ವಿಯು; ರೂಪದಿಂದ ಸುಂದರನು; ಆತನಿಗೆ ವಯಸ್ಸು ಬಹಳಿರಲಿಲ್ಲ; ಇಪ್ಪತ್ತರ ಒಳಹೊರಗಿರಬಹುದು. ನಿಲುವಿಕೆಯು ಭವ್ಯ ವಾದದ್ದು; ಮೈಕಟ್ಟು ಗರಡೀಸಾಧನ ಮಾಡಿದವರಿಗಿಂತಲೂ ಗಟ್ಟಿಮುಟ್ಟ ಯಾದದ್ದೂ, ಮಾಟಾದದ್ದೂ ಆಗಿತ್ತು. ಇಂಥ ಆ ರಾಘೋಬನು ಭಿಕ್ಷುಕ ವೇಷವನ್ನು ತಾಳಿರಲು, ಆತನ ಮೋಹಕ ಸ್ವರೂಪವು ಹ್ಯಾಗೆ ಅಡಗ ಬೇಕು? ಅವನು ಕೃತ್ರಿಮ ಗಡ್ಡ-ಮೀಸೆಗಳನ್ನು ಕಟ್ಟಿಕೊಂಡಿದ್ದರೂ ಅವನ

ಮುಖವು ಸುಂದರವಾಗಿಯೇ ತೋರುತ್ತಿತ್ತು. ಅವನು ಮೈಮೇಲೆ ಹೊಲಸಾದ ಹರಕ ಬಟ್ಟೆಗಳನ್ನು ಧರಿಸಿದ್ದರೂ ಇಂಥ ತೇಜಸ್ವಿಯಾದವನಿಗೆ ಇಂಥ ಹರಕ ಬಟ್ಟೆಗಳನ್ನು ಧರಿಸುವ ಪ್ರಸಂಗ ಬಂದಿತೇ? ಎಂದು ನೋಡಿದವರು ಕನಿಕರಪಡುವಹಾಗಿತ್ತು. ಅವನು ಕೈಯಲ್ಲಿ ಏಕತಾರಿಯನ್ನು ಹಿಡಿದಿದ್ದನು; ಕಾಲಲ್ಲಿ ಪುರಿಗೆಜ್ಜೆಗಳನ್ನು ಕಟ್ಟಿದ್ದನು; ಬಗಲಲ್ಲಿ ಜೋಳಿಗೆಯನ್ನು ಹಾಕಿದ್ದನು; ಹಣೆಗೆ ವಿಭೂತಿ ಧರಿಸಿ ಕೊರಳಲ್ಲಿ ಕೆಂಪುಮಣಿಗಳನ್ನು ಧರಿಸಿದ್ದನು. ಇವನು ಕೃತ್ರಿಮ ಭಿಕ್ಷುಕನೆಂದು ಯಾರೂ ಗುರ್ತಿಸುವಹಾಗಿದ್ದಿಲ್ಲ.

ಈ ಚಂದದಿಂದ ರಾಘೋಬನು ನಡೆದಿರಲು ಅವನಿಗೆ ಫಿರಂಗೀ ಅಧಿಕಾರಿಗಳ ಮಂದಿರಗಳು ಹತ್ತಿದವು. ಆ ಫಿರಂಗೀ ಅಧಿಕಾರಿಗಳ ಸ್ತ್ರೀಯರಿಗೆ ಹಿಂದೀ ಗಾನಾಲಾಪವು ಬಹು ರಮ್ಯವಾಗಿ ತೋರಿತು. ಆದ್ದರಿಂದ ಅವರು ಸಿಪಾಯಿಯನ್ನು ಕಳಿಸಿ ರಾಘೋಬನನ್ನು ತಾವಿದ್ದಲ್ಲಿಗೆ ಬರಮಾಡಿಕೊಂಡು ಅವನನ್ನು ಹಾಡಲಿಕ್ಕೆ ಹಚ್ಚಿದರು. ರಾಘೋಬನು ಸುತ್ತಲೂ ನೋಡುತ್ತ ತಾನಿನ ಮೇಲೆ ತಾನು ಏರಿಸಿ ಆ ಹೆಂಗಸರನ್ನು ಮಂತ್ರಮುಗ್ಧ ಹಾವಿನಂತೆ ಸ್ತಬ್ಧರನ್ನಾಗ ಮಾಡಿದನು. ರಾಘೋಬನ ಗಾಯನದಿಂದ ಆ ಫಿರಂಗೀ ಹೆಂಗಸರಿಗೆ ನಿಜವಾಗಿಯೂ ಆನಂದವಾಯಿತು. ಅವರು ಇಂಥ ಗಾನರತ್ನವು ಭಿಕ್ಷುಕ ವರ್ಗದಲ್ಲಿ ಕೊಳೆಯಬೇಕೆ? ಎಂದು ಕನಿಕರಪಟ್ಟು ಆತನಿಗೆ ಕೆಲವು ಸುವರ್ಣ ನಾಣ್ಯಗಳ ಪಾರಿತೋಷಕವನ್ನು ಕೊಟ್ಟರು. ಹೀಗೆ ಆ ಹೆಂಗಳೆಯರ ಚಿತ್ತಹರಣ ಮಾಡಿ ರಾಘೋಬನು ಕಿರುಗೆಜ್ಜೆಗಳ ಮಂಜುಲನಾದದೊಡನೆ ಮುಂದೆ ಸಾಗಲು ಅವರಿಗೆ ಬಹು ಎತ್ತರ ಗೋಡೆಗಳುಳ್ಳ ಒಂದು ಇಮಾರತು ಕಾಣಿಸಿತು. ಆ ಇಮಾರತಿನಲ್ಲಿ ಏನಿರುವದು ನೋಡಬೇಕೆಂಬ ಕುತೂಹಲವು ಅವನಲ್ಲಿ ಸ್ವಾಭಾವಿಕವಾಗಿ ಉತ್ಪನ್ನವಾಯಿತು. ಆಗ ಅವನು ಸ್ವಲ್ಪ ಒತ್ತರದಿಂದ ನಡೆದು ಆ ಇಮಾರತನ್ನು ಸುತ್ತಿ ಅದರ ಹೆಬ್ಬಾಗಿಲ ಬಳಿಗೆ ಬಂದನು. ಮತ್ತು ಹೆಬ್ಬಾಗಿಲ ಕಾಯುವ ಕಾವಲುಗಾರನನ್ನು ಕಂಡು—"ಏನಯ್ಯಾ, ಇದು ಯಾರ ಮನೆಯು?" ಎಂದು ಪ್ರಶ್ನೆ ಮಾಡಿದನು. ಕಾವಲುಗಾರನು ಸೊಕ್ಕಿನಿಂದ—ನಿನಗೆ ಹುಚ್ಚು ಹಿಡಿದದೆಯೋ ಏನು? ಇದು ಮನೆಯು ಹಾಗೆ ಕಾಣುವದೇ? ಇದರಗೊಡವೆ ನಿನಗೇನು ಸುಮ್ಮನೆ ಹೋಗು; ಇಲ್ಲದ ಉಸಾಬರಿ ಮಾಡಿದೆಯೆಂದರೆ ನಿನ್ನನ್ನೂ ಈ ಕೈದ ಖಾನೆಯಲ್ಲಿರಿಸಿ ಬಿಟ್ಟೇನು? ಎಂದು ಗದ್ದರಿಸಿದನು.

ಕಾವಲುಗಾರನ ಈ ಉತ್ತರದಿಂದ ಇದು ಜೇಲಖಾನೆ ಎಂಬದನ್ನು ತಿಳಿದು ರಾಘೋಬನು ಇಲ್ಲಿ ಸೂರ್ಯಾಜಿಯ ಮಗ-ಮಗಳು ಇರುವರು. ಸಾಧ್ಯ ವಾದರೆ ಅವರನ್ನು ನೋಡುವ ಯೋಗವು ಬರುವದೋ ಹ್ಯಾಗೆಂಬದನ್ನು ನೋಡಬೇಕೆಂದು ಯೋಚಿಸಿ—ಕಾವಲುಗಾರಣ್ಣಾ ಹೀಗೇಕೆ ಬಡವನನ್ನು ಬೆದರಿಸುವೆ? ಕೈದುಖಾನೆಯಲ್ಲಿರಿಸಲು ನಾನೇನು ನಿನಗೆ ಅಂಥ ಅಪರಾಧವ ಮಾಡಿದ್ದೇನೆ. ನಾನೊಂದು ಪದ ಹೇಳುತ್ತೇನೆ ಸ್ವಲ್ಪ ಕೇಳುವಿಯಾ? ಎಂದು ನುಡಿದು ಏಕತಾರಿಯನ್ನು ನುಡಿಸುತ್ತ ಪದವನ್ನಾರಂಭಿಸಿದನು. ಸ್ವಲ್ಪ ಹೊತ್ತಿನಲ್ಲಿಯೇ ಕಾವಲುಗಾರನು ಸಂತೋಷಿತನಾದನು. ಅವನು ರಾಘೋಬನ ಗಾನಾನಂದದಲ್ಲಿ ಮಗ್ನನಾಗಿ ತಾನು ಯಾವ ಕೆಲಸದ ಮೇಲಿ ರುವೆನೆಂಬದನ್ನು ಸಹ ಮರೆತು ತಲೆಯಲ್ಲಾಡಿಸಲಾರಂಭಿಸಿದನು.

ರಾಘೋಬನು ಗಾನಕುಶಲನಿದ್ದಂತೆ ವ್ಯವಹಾರಕುಶಲನೂ ಇದ್ದನು. ಕಾವಲುಗಾರನು ಗಾನಾನಂದಮಗ್ನನಾದದ್ದನ್ನು ಕಂಡು ಅದರಲ್ಲಿ ಮತ್ತಿಷ್ಟು ಕುಶಲತೆಯನ್ನು ವ್ಯಕ್ತಗೊಳಿಸಲಾರಂಭಿಸಿದನು. ಬಳಿಕ ರಾಘೋಬನು ತಾನು ಹೇಳುವ ಪದದಲ್ಲಿ ಸೂರ್ಯಾಜಿಯ ಮಕ್ಕಳಾದ ನಿಳೋಜಿ, ಚಂದ್ರಾ ಇವರ ಹೆಸರನ್ನು ಕೃತ್ರಿಮವಾಗಿ ಸೇರಿಸಿದನು. ಅದರಂತೆ ಸೂ-ರ್ಯಾಜಿಯು ನಿಮ್ಮ ಬಿಡುಗಡೆಯ ಪ್ರಯತ್ನದಲ್ಲಿರುವನೆಂಬರ್ಥವನ್ನೂ ಸೂಚಿಸಿದನು ಪಿಂಪಳಗ್ರಾಮದ ಕೈದಿಗಳಿಗೆ ರಾಘೋಬನ ಈ ಗಾಯನವು ಸ್ಪಷ್ಟವಾಗಿ ಕೇಳಿಸುತ್ತಿತ್ತು. ಅವರು ಚಂದ್ರಾ, ನಿಳೋಜಿ, ಸೂ-ರ್ಯಾಜಿ ಎಂಬ ಹೆಸರುಗಳನ್ನು ಕೇಳಿ ಜೇಲಖಾನೆಯ ಕಟಾಂಜನದವರೆಗೆ ಬಂದು ನಿಂತರು. ರಾಘೋಬನು ನಿಂತ ಸ್ಥಳಕ್ಕೂ, ಪಿಂಪಳಗ್ರಾಮದ ಕೈದಿಗಳಿರುವ ಸ್ಥಳಕ್ಕೂ ಬಹಳ ಅಂತರವಿರಲಿಲ್ಲ. ಜೇಲಜಾನೆಯ ಮೊದಲನೆಯ ಕೋಣೆಯೇ ಅವರದಾಗಿತ್ತು. ಆದ್ದರಿಂದ ರಾಘೋಬನು ಅವರಿಗೆ ಸ್ಪಷ್ಟವಾಗಿ ಕಾಣಿಸುತ್ತಿದ್ದನು. ನಮ್ಮ ಗುರುತು-ಪರಿಚಯವಿಲ್ಲದ ಈತನಾರು? ಎಂದು ಜೇಲಿನಲ್ಲಿದ್ದ ನಿಳೋಜಿ ಮೊದಲಾದವರು ಯೋಚನೆಗೊಳಗಾದರು. ಕಾವಲುಗಾರನು ಗಾನಾನಂದದಲ್ಲಿಯೇ ಗುಂಗಾಗಿ ಬಿಟ್ಟದ್ದರಿಂದ ಜೇಲಖಾನೆಯಲ್ಲಿದ್ದವರನ್ನು ಮನದಣಿಯಾಗಿ ನೋಡುವದಕ್ಕೆ ರಾಘೋಬನಿಗೂ, ರಾಘೋಬನನ್ನು ಮನದಣಿಯಾಗಿ ನೋಡುವದಕ್ಕೆ ಜೇಲಖಾನೆಯವರಿಗೂ ಅವಕಾಶ ದೊರೆಯಿತು. ಹೀಗೆ ತನ್ನನ್ನು

ಎವೆಯಿಕ್ಕದೆ ನೋಡುವ ಈ ಜನರು ಪಿಂಪಳಗ್ರಾಮದವರೇ ಇರಬೇಕೆಂದು ರಾಘೋಬನು ತರ್ಕಿಸಿದಂತೆ ಈತನಾರೋ ಗುಪ್ತಹೇರನಾಗಿ ನಮ್ಮ ತಂದೆಯ ಕಡೆಯಿಂದ ನಮ್ಮ ಶೋಧಕ್ಕಾಗಿ ಬಂದಿರಬೇಕೆಂದು ನಿಳೋಜಿಯು ತಿಳಿದನು. ಅವನು ಸನ್ನೆಯಿಂದ ತಾನೇ ನಿಳೋಜಿಯೆಂತಲೂ, ತನ್ನ ಬಳಿಯಲ್ಲಿ ಪುರುಷವೇಷದಿಂದ ನಿಂತವಳೇ ಚಂದ್ರಾ ಎಂತಲೂ ತಿಳಿಸಿದನು. ರಾಘೋಬನು ಕೂಡಲೆ ಆ ಸನ್ನೆಯ ಅಭಿಪ್ರಾಯವನ್ನು ಗ್ರಹಿಸಿ ತನ್ನ ತರ್ಕವು ನಿಜವೆಂದು ನಂಬಿ ನಿಳೋಜಿಯ ಮೋರೆಯ ಗುರ್ತನ್ನು ಇಟ್ಟುಕೊಂಡು ಗಾನಾಲಾಪವನ್ನು ನಿಲ್ಲಿಸಿದನು. ಗಾನಾಲಾಪವು ಕೇಳಬರದಂತಾಗಲು ಕಾವಲುಗಾರನು ಎಚ್ಚತ್ತು ಕಣ್ಣು ತೆರೆದನು. ಕಾವಲುಗಾರನು ಎಚ್ಚರಿಯುವಷ್ಟರಲ್ಲಿ ಆ ಕೈದಿಗಳೆಲ್ಲರೂ ಒಳಸೇರಿದ್ದರು. ಆಗ ಕಾವಲುಗಾರನು—ಯಾಕೆ ಪದವನ್ನು ನಿಲ್ಲಿಸಿದೆ? ಇನ್ನೊಂದು ಸುಂದರವಾದ ಚೀಜನ್ನು ಅನ್ನಬಾರದೇ? ಅಂದನು. ಅದಕ್ಕೆ ರಾಘೋಬನು ವಿನಯದಿಂದ—ಒಡೆಯರೇ, ಬಡವನಾದ ನಾನು ಬಹಳ ಹೊತ್ತಿನವರೆಗೆ ಹೀಗೆಯೇ ಹಾಡುತ್ತ ನಿಂತರೆ ನನ್ನ ಹೊಟ್ಟೆಯ ಗತಿಯೇನು? ಮತ್ತೆ ನಾಲ್ಕು ಮನೆಗಳಿಗೆ ಹೋದರೆ ನನ್ನ ಹೊಟ್ಟೆಗೆ ಧಾನ್ಯವಾಗಲಿ ಕಜ್ಜಾಯವಾಗಲಿ ಸಿಗುವದು. ಮತ್ತೆ ನಾಳೆಗೆ ಬರುವೆನು. ಅಪ್ಪಣೆ ಕೊಡಬೇಕು, ಎಂದು ನುಡಿದು ಕಾವಲುಗಾರನ ಸಮ್ಮತಿ ಪಡೆದು ಬೇರೆ ಕಡೆಗೆ ಹೊರಟು ಹೋದನು. ಸೂರ್ಯಾಜಿಯ ಮಕ್ಕಳಾದ ನಿಳೋಜಿ-ಚಂದ್ರಾ ಇವರು ಸುರಕ್ಷಿತವಾಗಿರುವರೆಂದೂ, ಇನ್ನೂ ಅವರ ಧರ್ಮಾಂತರವಾಗಿಲ್ಲವೆಂದೂ ತಿಳಿದು ರಾಘೋಬನಿಗೆ ಬಹಳ ಸಂತೋಷವಾಯಿತು. ಈ ಮಹತ್ವದ ಸುದ್ದಿಯನ್ನು ಹೇಳುವದಕ್ಕಾಗಿ ಅವನು ಅಂದು ಅಷ್ಟಕ್ಕೇ ತಿರುಗಾಡುವ ಕೆಲಸವನ್ನು ನಿಲ್ಲಿಸಿ ಊರ ದಾರೀ ಹಿಡಿದನು. ಅಷ್ಟರಲ್ಲಿ ಗೆಣೂ, ಸದಾಶಿವ, ಬಾಳಾಜಿ ಇವರು ತಾವು ತಂದ ಪದಾರ್ಥಗಳನ್ನು ಮಾರಿ ಬರಿಯ ಬುಟ್ಟಿಗಳನ್ನು ತಲೆಗೆ ಹಾಕಿಕೊಂಡು, ಹರಟೆಕೊಚ್ಚುತ್ತ ಬರುತ್ತಿದ್ದರು. ಈ ಮೂವರಿಗೂ ರಾಘೋಬನಿಗೂ ಒಂದು ದಿನ್ನೆಯ ಬಳಿಯಲ್ಲಿ ಭೆಟ್ಟಿಯಾಯಿತು. ಪರಸ್ಪರರನ್ನು ನೋಡಿ ಪರಸ್ಪರರಿಗೆ ನಗೆ ಬಂದಿತು. ಆದರೆ ಈ ತಮ್ಮ ನಗೆಯು ಫಿರಂಗೀ ಜನರ ದೃಷ್ಟಿಗೆ ಬಿದ್ದರೆ ಕೆಲಸವು ಕೆಟ್ಟುಹೋದೀತೆಂದು ಅವರು ತಮ್ಮ ನಗೆಯನ್ನು ನಿಲ್ಲಿಸಿ ಏನೂ ಅರಿಯದವರಂತೆ

ಮುಂದಕ್ಕೆ ಸಾಗಿದರು. ಆದರೆ ರಾಘೋಬನು ಇವರ ಜೊತೆಗೆ ಹೋದರೆ ಹೆಬ್ಬಾಗಿಲದ ಕಾವಲುಗಾರರಿಗೆ ಸಂಶಯು ಬರಬಹುದೆಂದು ಅವರನ್ನು ಬಿಟ್ಟು ಬೇರೆ ದಾರೀ ಹಿಡಿದನು. ಕಾಯಿಪಲ್ಲೆ ಮಾರುವವರಾದ ಆ ಮೂ-ವರು ಹೆಬ್ಬಾಗಿಲವನ್ನು ದಾಟಿ ಬಹು ದೂರ ಹೋಗಿ ರಾಘೋಬನ ದಾರಿಯನ್ನು ನಿರೀಕ್ಷಿಸುತ್ತ ಕುಳಿತರು.

ಇತ್ತ ರಾಘೋಬನು ಅತ್ತ ಇತ್ತ ಸುಳಿದಾಡಿ ಹೆಬ್ಬಾಗಿಲ ಬಳಿಗೆ ಬಂದನು. ಆದರೆ ಹೆಬ್ಬಾಗಿಲ ಕಾವಲುಗಾರರು ಅವನಿಂದ ಪದ ಕೇಳಲಿಕ್ಕೆ ಉತ್ಸುಕರಾದ್ದರಿಂದ ಅವನನ್ನು ಬೇಗನೆ ಬಿಡಲೊಲ್ಲರು. ತನ್ನ ಮೇಲೆ ಕಾವಲುಗಾರರ ಪ್ರೇಮುವು ಸರ್ವದಾ ಉಳಿಯಬೇಕೆಂದು ರಾಘೋಬನು ಉತ್ತಮೋತ್ತಮವಾದ ಚೀಜುಗಳನ್ನು ಹುಡುಕಿ ಅಂದು ಅವರನ್ನು ಸಂತೋಷಗೊಳಿಸಲಾರಂಭಿಸಿದನು. ಸಾಯಂಕಾಲವಾಗುತ್ತ ಬಂದರೂ ಕಾವಲುಗಾರರು ರಾಘೋಬನಿಗೆ ಆಗ್ರಹ ಮಾಡುತ್ತಲೇ ಇದ್ದರು. ಇತ್ತ ರಾಘೋಬನ ದಾರೀಕಾಯುತ್ತಿದ್ದ ಗಣು, ಸದಾಶಿವ, ಬಾಳಾಜಿ ಈ ಮೂವರು ಬೇಸತ್ತು ಹೊರಟು ನಿಂತರು. ಅಷ್ಟರಲ್ಲಿ ರಾಘೋಬನು ಬರಲು ಆ ನಾಲ್ವರೂ ವಿನೋದ ಮಾಡುತ್ತ ಊರ ಕಡೆಗೆ ಹೊರಟರು. ದಾರಿಯಲ್ಲಿ ಸದಾಶಿವನು ರಾಘೋಬನನ್ನು ಕುರಿತು—ರಾಘಣ್ಣಾ, ನಿನ್ನ ಕೆಲಸವು ನಮ್ಮಕ್ಕಿಂತಲೂ ಬಿಗಿಯಾದದ್ದು, ನಾವು ಪದಾರ್ಥಗಳನ್ನು ಒಯ್ದು ಜನರನ್ನು ಮಾತಾಡಿಸುವೆವು. ನೀನು ಕೇವಲ ಪದ ಹೇಳಿ ಜನರ ಪ್ರೇಮ ಸಂಪಾದನ ಮಾಡಬೇಕಾಗುವದು. ಈ ದಿನ ನಿನ್ನ ಕೆಲಸವೇನೇನಾಯಿತು? ಹೊಸ ಸುದ್ದಿಗಳೇನಾದರೂ ತಿಳಿದವೋ ಎಂದು ಪ್ರಶ್ನೆ ಮಾಡಿದನು. ಆತನ ಮಾತಿಗೆ ರಾಘೋಬನು ನಕ್ಕು—ಸದಾಶಿವಾ, ಎಲ್ಲರ ಕೆಲಸವೂ ಕಠಿಣವಾದದ್ದೇ; ಶತ್ರುಗಳ ಮಧ್ಯದಲ್ಲಿ ಸೇರಿ ಅವರ ಗುಟ್ಟು ತಿಳಕೊಳ್ಳಬೇಕಾದರೆ ಅದಕ್ಕೆ ತಕ್ಕಂತೆ ನಡೆಯದಿದ್ದರೆ ಹ್ಯಾಗೆ? ಗಾನವಿದ್ಯೆಗೆ ಮೆಚ್ಚದ ಪ್ರಾಣಿಗಳೇ ಇಲ್ಲ. ಸಜೀವ ವಸ್ತುಗಳೆಲ್ಲವೂ ನಾದಲುಬ್ಧವಾಗದೆ ಇರಲಾರವೆಂದು ಖಂಡಿತವಾಗಿ ತಿಳಿದಿರುತ್ತೇನೆ. ನಿಮ್ಮ ನಿಮ್ಮ ಸುಖದುಃಖಗಳನ್ನು ಕೇಳುವ ಮೊದಲು ನಾನು ನಿಮಗೆ ಎಲ್ಲ ಸಂಗತಿಗಳನ್ನು ಹೇಳುತ್ತೇನೆ ಕೇಳಿರಿ. ಎಂದು ನುಡಿದು, ತಾನು ದುರ್ಗದೊಳಗೆ ನೋಡಿಬಂದಿರುವ ಎಲ್ಲ ಸಂಗತಿಗಳನ್ನು ಹೇಳಿದನು. ನಿಳೋಜಿ, ಪಂಬ್ರು ಇವರನ್ನು

ನೋಡಿ ಬಂದಿರುವೆನೆಂದು ಹೇಳಿದ್ದನ್ನು ಕೇಳಿ ಆ ಮೂವರಿಗೂ ಸಾನಂದಾಶ್ಚರ್ಯವಾಯಿತು. ಬಾಳಾಜಿಯು ವಿಶೇಷ ಉತ್ಸುಕತೆಯಿಂದ ಆ ವಿಷಯವನ್ನು ಪುನಃ ಪುನಃ ಕೇಳಿ ತಿಳಿದನು. ನಿಳೋಜಿ ಚಂದ್ರೈಯರು ಸುಖರೂಪವಾಗಿರುವರೆಂಬದನ್ನು ತಿಳಿದು ಆ ಬಡ ವೇಷಧಾರಿಯು ತುಂಬಾ ಸಂತೋಷದಿಂದ ನಲಿದಾಡಿದನು. ಇನ್ನೊಂದು ದಿನ ತಾನು ರಾಘಣ್ಣನ ಜೊತೆಗೆ ಆ ಜೇಲಖಾನೆಗೆ ಹೋಗಿ ಅವರನ್ನು ಕಣ್ಣಾರೆ ಕಂಡುಬರಬೇಕೆಂದು ಇಚ್ಛಿಸಿದನು. ರಾಘಣ್ಣನು ಹೇಳತಕ್ಕದ್ದನ್ನು ಹೇಳಿದ ಬಳಿಕ ಉಳಿದವರ ಕೆಲಸವೇನಾಯಿತೆಂಬದನ್ನು ವಿಚಾರಿಸಿದನು. ಆಗ—

ಗಣು—ರಾಘಣ್ಣಾ, ನಿನ್ನಷ್ಟು ಸಾಹಸವು ನಮಗೆ ಬರಲಾರದು. ನಮಗೆ ಹಾಡಲಿಕ್ಕೆ ಬರುವದಿಲ್ಲ. ಹಾಸ್ಯದಿಂದ ಜನರ ಚಿತ್ತಹರಣಮಾಡಲಿಕ್ಕೆ ಬರುವದಿಲ್ಲ. ಒಂದು ಬುಟ್ಟಿಯಲ್ಲಿ ಬಗೆಬಗೆಯ ಕಾಯಿಪಲ್ಯೆ ಕೋಳೀತತ್ತಿ ಮೊದಲಾದವವುಗಳನ್ನು ತುಂಬಿಕೊಂಡು ಫಿರಂಗೀ ಜನರ ಮನೆಗಳಿಗೆ ಹೊರಟೆವು. ಹಾದಿಯಲ್ಲಿ ಒಬ್ಬ ಸಿಪಾಯಿಯು ನಮ್ಮ ಬುಟ್ಟಿಗಳನ್ನು ಶೋಧಮಾಡಿ ನೋಡಿ ಈ ಪದಾರ್ಥಗಳು ಇಲ್ಲಿರುವ ಈ ಮನೆಯುವರಿಗೆ ಅವಶ್ಯವಾಗಿ ಬೇಕಾಗಿವೆ. ನಾಲ್ಕಾರು ದಿನಗಳಿಂದ ಅವರಿಗೆ ಈ ಪದಾರ್ಥಗಳು ಸಿಕ್ಕಿರುವದಿಲ್ಲ. ಎಂದು ಹೇಳಿ ಆ ಮನೆಯನ್ನು ತೋರಿಸಿದನು. ಕೂಡಲೆ ನಾವು ಅಲ್ಲಿಗೆ ಹೋದೆವು. ಆ ಮನೆಯು ಫಿರಂಗೀಜನರ ಒಬ್ಬ ಅಧಿಕಾರಿಯ ಮನೆಯೆಂಬದಾಗಿ ಕಂಡುಬಂದಿತು. ಆ ಮನೆಯುವರು ನಮ್ಮ ಮೂವರು ಬುಟ್ಟಿಗಳಲ್ಲಿಯ ಎಲ್ಲ ಪದಾರ್ಥಗಳನ್ನು ಕೊಂಡುಕೊಂಡು ಆ ಬಗ್ಗೆ ನಮಗೆ ಮೂರು ಮೂರು ರೂಪಾಯಿಗಳನ್ನು ಕೊಟ್ಟರು. ಈ ಫಿರಂಗೀಜನರು ಮಹಾಕೊಳಬಕ್ಕ ಜನರೆಂದು ತೋರುತ್ತದೆ. ಹೊಟ್ಟೆಯುಸಲುವಾಗಿ ಇವರು ಮನಬಂದಂತೆ ಖರ್ಚುಮಾಡುವರು.

ರಾಘಣ್ಣ—ಇರಲಿ, ಮುಂದೆ ಹೇಳು.

ಗಣು—ನಾವು ಮೂವರೂ ಒಟ್ಟಿಗೇ ಹೊರಟಿದ್ದೆವು. ಕಿಲ್ಲೆಯು ತುಂಬೆಲ್ಲ ಅಡ್ಡಾಡಿದೆವು. ಆದರೆ ಮಹತ್ವದ ಸಂಗತಿಗಳೇನೂ ನಮಗೆ ಈ ದಿನ ತಿಳಿಯಲಿಲ್ಲ. ನಾಳಿನಿಂದ ನಾವು ಅಲ್ಲಿಯೇ ಇದ್ದು, ಸಮುದ್ರದ ಕಡೆಯು ಭಾಗವನ್ನು ನೋಡಿ ಅಲ್ಲಿಯ ಮಹತ್ವದ ಸಂಗತಿಗಳನ್ನು ತಿಳಿಯಬೇಕೆನ್ನುತ್ತೇವೆ.

ಈ ಮೇರೆಗೆ ಆ ನಾಲ್ವರು ಮಾತನಾಡುತ್ತಿರಲು ಅವರ ಹಿಂದಿನಿಂದ ಒಬ್ಬ ಹುಚ್ಚನು ಬಂದನು. ಆತನು ಈ ನಾಲ್ವರನ್ನು ಕಂಡು ಗಹಗಹಿಸಿ ನಗುತ್ತ ನಿಂತನು. ನಮ್ಮನ್ನು ನೋಡಿ ನಗುತ್ತಿರುವ ಈ ಹುಚ್ಚನು ಯಾ-ರೆಂಬದು ಆ ನಾಲ್ವರಿಗೂ ತಿಳಿಯದೆ ಹೋಯಿತು. ಪ್ರಿಯ ವಾಚಕರೇ ಈ ಹುಚ್ಚನು ಯಾರಿರಬಹುದು?

## (೭) ಬಪ್ಪರೆ ವಸ್ತಾದಿ!

ಎಲ್ಲ ಪ್ರಾಣಿಗಳು ಪರಮೇಶ್ವರನ ಇಚ್ಛಾಮಾತ್ರದಿಂದಲೇ ನಿರ್ಮಿತ ವಾಗಿದ್ದರೂ, ಒಂದರ ಯೋಗ್ಯತೆಯು ಮತ್ತೊಂದಕ್ಕೆ ಬರುವದಿಲ್ಲ. ಒಂದರ ದೇಹದಾರ್ಢ್ಯವು ಮತ್ತೊಂದಕ್ಕಿರುವದಿಲ್ಲ. ಒಂದರ ಬುದ್ಧಿಶಕ್ತಿಯು ಮ-ತ್ತೊಂದಕ್ಕಿರುವದಿಲ್ಲ. ಎಲ್ಲ ಪ್ರಾಣಿಕೋಟಿಯ ಮಾತೇಕೆ? ಒಂದು ಮನುಷ್ಯವರ್ಗದಲ್ಲಿಯಾದರೂ ಸಮಬಲ-ಸಮಬುದ್ಧಿ ಮೊದಲಾದವುಗಳು ಕಂಡು ಬರುವದಿಲ್ಲ. ಒಬ್ಬನು ನಾಮಾಂಕಿತ ಶೂರನಿದ್ದರೆ ಮತ್ತೊಬ್ಬನು ಅತ್ಯಂತ ಹೇಡಿ ಸ್ವಭಾವದವನಿರುತ್ತಾನೆ. ಒಬ್ಬನಲ್ಲಿ ಆನೆಯಷ್ಟು ಬಲವಿ ದ್ದರೆ ಮತ್ತೊಬ್ಬನಲ್ಲಿ ಕೂತು ಮೇಲಕ್ಕೇಳಲು ತ್ರಾಣವಿರುವದಿಲ್ಲ. ಇದ ರಂತೆ ಬುದ್ಧಿಬಲದ ಸ್ಥಿತಿಯೂ ಇರುತ್ತದೆ. ಹೀಗೆ ವಿಚಿತ್ರ ಸ್ಥಿತಿಯಿರುವದ ರಿಂದಲೇ ಪರಮೇಶ್ವರನ ಸೃಷ್ಟಿಯು ರಮ್ಯವಾಗಿ ತೋರುವದು; ಮತ್ತು ಪ್ರಾಣಿಗಳಲ್ಲಿ ವಿಶೇಷವಾಗಿ ಮೇಲಾಟವು ಕಂಡುಬರುತ್ತದೆ. ಈ ಮೇಲಾ ಟದಿಂದಲೇ ಕೃತ್ರಿಮ ಹೊಸ ಚಲನೆಯುಂಟಾಗುತ್ತಿರುತ್ತದೆ. ಇರಲಿ.

ತುಳಾಜಿಯು ವಸಯಿಾ ಕಿಲ್ಲೆಯಲ್ಲಿಯ ಗುಪ್ತ ಸಂಗತಿಗಳನ್ನು ತಿಳಿ ಯುವದಕ್ಕಾಗಿ ಚಿಮಣಾಜಿ ಅಪ್ಪಾನಿಂದ ಆಜ್ಞಪ್ತನಾಗಿ ಆ ಪ್ರಾಂತಕ್ಕೆ ಬಂದಿದ್ದನಷ್ಟೇ; ಆದರೆ ಅವನು ಒಳ್ಳೇ ಕುಶಲನಾದ್ದರಿಂದ ತನ್ನ ಹಸ್ತಕ ರನ್ನು ಮುಂದೆ ಕಳಿಸಿ ತಾನು ಹುಚ್ಚನ ವೇಷದಿಂದ ಹ್ಯಾಗೆ ಹ್ಯಾಗೋ ಕಿಲ್ಲೆಯನ್ನು ಪ್ರವೇಶಿಸಿದನು. ತಾನು ವೇಷಾಂತರದಿಂದ ದುರ್ಗದಲ್ಲಿ ಬರುವೆನೆಂಬ ಸಂಗತಿಯನ್ನು ಆತನು ತನ್ನ ಹಸ್ತಕರಿಗೆ ಹೇಳಿದ್ದಿಲ್ಲ. ‹‹ನಾನು ಅಲ್ಲಿಗೆ ಬರುವದಿಲ್ಲ, ನೀವೇ ಮಹತ್ವದ ಸಂಗತಿಗಳನ್ನು ತಿಳಿದು ಕೊಂಡು ಬನ್ನಿರಿ ಎಂದು ಅವರಿಗೆ ಹೇಳಿದ್ದನು. - ಆದ್ದರಿಂದ ಆ ಜನರಿಗೆ

ತುಳಾಜಿರಾಯನು ಗುಪ್ತವೇಷದಿಂದ ಬರುವನೆಂಬ ಕಲ್ಪನೆಯು ಕೂಡಾ ಅವರ ಮನಸ್ಸಿನಲ್ಲಿ ಬರುವ ಹಾಗಿದ್ದಿಲ್ಲ. ಆದ್ದರಿಂದ ಅವರು ವೇಷಾಂತರಿಸುವ ಕೆಲಸದಲ್ಲಿ ತಾವೇ ಗಟ್ಟಿಗರೆಂಬ ಹೆಮ್ಮೆಯನ್ನುತಾಳಿ ವೃಥಾ ಪೌರುಷವನ್ನೇ ಕೊಚ್ಚುತ್ತ ಬರುತ್ತಿದ್ದರು. ಆದರೆ ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ತಮ್ಮ ಹಿಂದೆ ಒಬ್ಬ ಹುಚ್ಚನು ಅಕಸ್ಮಾತ್ತಾಗಿ ಬಂದದ್ದರಿಂದ ಅವರ ಮನಸ್ಸಿಗೆ ಸ್ವಲ್ಪ ಹುಳಕಡಿದಂತಾಯಿತು. ಈತನು ಹುಚ್ಚನೇ ಇರಬಹುದೋ ಅಥವಾ ಶತ್ರುಗಳ ಕಡೆಯ ಗುಪ್ತಹೇರನಿರಬಹುದೋ ಎಂಬ ಸಂಶಯವು ಅವರನ್ನು ಬಾಧಿಸಿತು. ಸಂಶಯಪಿಶಾಚಿಯೆಂಬದು ಮಹಾಘೋರವಾದದ್ದು; ಅದು ಬಡಿದುಕೊಂಡ ಮನುಷ್ಯನಿಗೆ ಅದರ ನಿವಾರಣೆಯಾದ ಹೊರತು ಅವನಿಗೆ ಯಾವದಕ್ಕೂ ಮನಸ್ಸಾಗುವದಿಲ್ಲ. ಅದರಂತೆ ಆ ನಾಲ್ವರ ಸ್ಥಿತಿಯೂ ಆಯಿತು. ಅವರು ಆ ಹುಚ್ಚನನ್ನು ಸೂಕ್ಷ್ಮದೃಷ್ಟಿಯಿಂದ ನೋಡಿ ಮಾತನಾಡಿಸಿದರು. ಇವರು ಕೇಳುವದೊಂದು, ಅವನು ಹೇಳುವದೊಂದು, ಹೀಗೆ ಆಗಲಾರಂಭಿಸಿತು. ಈತನು ಹುಚ್ಚನೇ ಎಂದು ಅವರು ನಿರ್ಧರಿಸಿದರು. ಆಗ ಅವರಿಗೆ ಸ್ವಲ್ಪ ಸಮಾಧಾನವಾದಂತಾಯಿತು. ಬಳಿಕ ಅವರು ಅವನಿಗೆ ತಮ್ಮ ಬಳಿಯಲ್ಲುಳಿದ ರೊಟ್ಟೀ-ಬುತ್ತಿಯನ್ನು ಕೊಟ್ಟರು. ಹುಚ್ಚನು ಅದರೊಳಗಿನ ಕೆಲಭಾಗವನ್ನು ಅಲ್ಲಿಯೇ ತಿಂದು ಉಳಿದದ್ದನ್ನು ಚಲ್ಲಿಕೊಟ್ಟುಬಿಟ್ಟನು. ಮತ್ತೆ ಹೊಟ್ಟೆ ಹಸಿದಾಗ ಈ ಅನ್ನವು ಬೇಕೆಂಬದು ತಿಳಿಯದೆ ಚಲ್ಲಿಕೊಟ್ಟದ್ದಕ್ಕಾಗಿ ಅವನ ಹುಚ್ಚತನಕ್ಕಾಗಿ ಆ ನಾಲ್ವರೂ ನಕ್ಕರು. ಬಳಿಕ ಅವರು ಆ ಹುಚ್ಚನೊಡನೆ ವಿನೋದವ ಮಾಡುತ್ತ ತಮ್ಮ ಠಾಣೇಕ್ಕೆ ಬಂದರು. ಆ ಹುಚ್ಚನನ್ನು ತಮ್ಮ ಸಂಗಡ ಠಾಣೇಕ್ಕೆ ಒಯ್ಯಬೇಕೆಂದು ಅವರು ಬಹಳ ಪ್ರಯತ್ನಿಸಿದರು; ಆದರೆ ಆ ಹುಚ್ಚನು ಅವರ ಮಾತನ್ನು ಕಿವಿಯಲ್ಲಿ ಹಾಕಿಕೊಳ್ಳದೆ ತನ್ನ ಉನ್ಮಾದಾವಸ್ಥೆಯಲ್ಲಿಯೇ ತನ್ನ ದಾರೀ ಹಿಡಿದು ಹೊರಟು ಹೋದನು. ಬಳಿಕ ಆ ನಾಲ್ವರು ವಸತಿಗೃಹವನ್ನು ಮುಟ್ಟ ತಮ್ಮ ವೇಷವನ್ನು ತೆಗೆದಿಟ್ಟು ಮೊದಲಿನಂತೆ ಮರಾಠಾ ಸರದಾರರಾಗಿ ತುಳಾಜಿರಾಯನ ಭೆಟ್ಟಿಗೆ ಹೋದರು. ತುಳಾಜಿರಾಯನು ಒಂದು ಕೋಣೆಯಲ್ಲಿ ಪತ್ರ ಬರೆಯುತ್ತ ಕುಳಿತಿದ್ದನು. ಅವನ ಬಳಿಯಲ್ಲಿ ಯಾರೂ ಇರಲಿಲ್ಲ. ಮೊದಲು ರಾಘೋಬನು ವಿನಯದಿಂದ ನಮಸ್ಕರಿಸಿ ಕುಳಿತುಕೊಂಡನು. ಅನಂತರ ಗಣ್ಣು,

ಸದಾಶಿವ, ಬಾಳಾಜಿ ಇವರೆಲ್ಲರೂ ಕ್ರಮವಾಗಿ ನಮಸ್ಕರಿಸಿದರು. ತುಳಾ ಜಿಯು ಪತ್ರ ಬರೆಯುವದನ್ನು ನಿಲ್ಲಿಸಿ ಅವರೆಲ್ಲರನ್ನು ಬಹು ಪ್ರೀತಿಯಿಂದ ಆದರಿಸಿ ಕುಳ್ಳಿರಿಸಿಕೊಂಡನು. ಬಳಿಕ ನಗೆಮೊಗದಿಂದ ಹೋದ ಕೆಲಸ ವೇನಾಯಿತು? ಎಂದು ಕೇಳಿದನು. ರಾಘೋಬನು ಕ್ರಮವಾಗಿ ಎಲ್ಲ ಸಂಗತಿಗಳನ್ನೂ ಹೇಳಿದನು. ತುಳಾಜಿರಾಯನು ಎಲ್ಲ ಸಂಗತಿಗಳನ್ನು ಕೇಳಿ ಸಂತೋಷಬಟ್ಟವನಂತೆ ನಟಿಸಿ, ಇನ್ನೊಂದು ಸಂಗತಿಯನ್ನು ನೀನು ಹೇಳುವದರಲ್ಲಿ ಮರೆತೆಯಲ್ಲ? ಎಂದು ಪ್ರಶ್ನಮಾಡಿದನು. ಆ ಪ್ರಶ್ನೆಯಿಂದ ರಾಘಣ್ಣನು ಸಂಶಯದಲ್ಲಿ ಬಿದ್ದನು. ನಾವು ಇಂಥ ಸಂಗತಿಯನ್ನು ಹೇಳು ವದನ್ನು ಮರೆತೆವೆಂಬದು ಇವರಿಗೆ ಹ್ಯಾಗೆ ಗೊತ್ತಾಗಿರಬಹುದು? ಎಂದು ಯೋಚಿಸಿದನು. ಆ ನಾಲ್ವರಿಗೂ ಈ ಸಂಗತಿಯು ಅಚ್ಚರಿಯಾಗಿ ತೋ ರಿತು. ಅವರು ಒಬ್ಬರ ಮೋರೆಯನ್ನು ಮತ್ತೊಬ್ಬರು ನೋಡಲಾರಂಭಿಸಿ ದರು. ಆಗ ತುಳಾಜಿಯು—ನಿಮಗೆ ದಾರಿಯಲ್ಲಿ ಒಬ್ಬ ಹುಚ್ಚನು ಕೂಡಿ ದ್ದನಲ್ಲವೇ? ಎಂದು ಪ್ರಶ್ನಮಾಡಿದನು. ಈ ಪ್ರಶ್ನೆಯಿಂದಂತೂ ಅವರು ಮತ್ತಿಷ್ಟು ಗೊಂದಲದಲ್ಲಿ ಬಿದ್ದರು. ಈತನಿಗೆ ಕರ್ಣಪಿಶಾಚಿಯಿರಬಹು ದೆಂದು ಅವರು ಗ್ರಹಿಸಿದರು. ಕರ್ಣಪಿಶಾಚಿಯೆಂದರೆ, ಪಿಶಾಚಿಯು ದೇಶ ದಲ್ಲಿ ನಡೆದ ವರ್ತಮಾನವನ್ನು ಕಿವಿಯಲ್ಲಿ ಬಂದು ಹೇಳುವದೆಂಬ ಗ್ರಹಿ ಕೆಯು ಕೆಲಜನರಲ್ಲಿರುತ್ತದೆ. ಅದರಂತೆ ಆ ವೀರಚೌಕಳಿಯೂ ಭಾವಿಸಿತು. ಆದರೆ ಅದರಿಂದ ವಸ್ತುಸ್ಥಿತಿಯನ್ನು ಕಂಡುಹಿಡಿಯಲಿಕ್ಕಾಗಲಿಲ್ಲ. ರಾಘ ಣ್ಣನು—ಹೌದು, ಒಬ್ಬ ಹುಚ್ಚನು ಕೂಡಿದ್ದನು. ಆತನು ಕೂಡಿದ್ದರಿಂದ ನಮಗೆ ಮಾರ್ಗಾಯಾಸವು ಸ್ವಲ್ಪವೂ ಕೂಡಾ ಆಗಲಿಲ್ಲ. ಅವನನ್ನು ನಿಮ್ಮ ಬಳಿಗೆ ಕರೆತರಬೇಕೆಂದು ಮಾಡಿದ್ದೆವು; ಆದರೆ ಆತನು ಹೇಳಿ ಕೇಳಿ ಹುಚ್ಚ ನಾದ್ದರಿಂದ ಅವನು ನಮ್ಮ ವಶಕ್ಕೆ ಬರುವದು ಹ್ಯಾಗೆ? ಅವನು ಎತ್ತ್ಲೋ ಹೋಗಿಬಿಟ್ಟನು. ಆ ಹುಚ್ಚನ ಗೊಡವೆ ನಮಗೇನೆಂದು ನಾವು ಸುಮ್ಮನೆ ಮನೆಗೆ ಬಂದೆವು ಎಂದು ಉತ್ತರ ಕೊಟ್ಟನು.

ಆಗ ತುಳಾಜಿಯು—ಆ ಹುಚ್ಚನು ಯಾರೆಂಬದು ನಿಮಗೆ ಗೊತ್ತಾ ಗಲಿಲ್ಲವೋ? ಸರಿ, ಸರಿ! ಒಳ್ಳೇ ಗುಪ್ತಹೇರರ ಕೆಲಸ ಮಾಡುವಿರಿ! ನಿಮ್ಮ ನಿಕಟ ಸಂಬಂಧವುಳ್ಳ ಜನರ ಗುರುತು ಪರಿಚಯವು ನಿಮಗೆ ಹತ್ತಲಿಲ್ಲ ವೆಂದ ಬಳಿಕ ನೀವು ಅನ್ಯರ ಗುರುತನ್ನು ಹ್ಯಾಗೆ ಹಿಡಿಯುವಿರಿ? ಹುಚ್ಚನ

ನ್ನು ಗುರ್ತು ಹಿಡಿಯದ ನೀವೇ ಹುಚ್ಚರೆಂಬಂತೆ ತೋರುತ್ತದೆ, ಎಂದು ನುಡಿದನು.

ತುಳಾಜಿಯ ಈ ಮಾತಿನಿಂದ ಆ ನಾಲ್ವರಿಗೂ ನಿಜಸ್ಥಿತಿಯು ತಿಳಿಯದಾಯಿತು. ಅವರು ಬಹಳ ಗೊಂದಲದಲ್ಲಿ ಬಿದ್ದರು. ತುಳಾಜಿಯೇ ಹುಚ್ಚನ ವೇಷದಿಂದ ಬಂದಿರಬೇಕೆಂಬದು ಅವರ ಲಕ್ಷದಲ್ಲಿ ಬರಹತ್ತಿತು. ಆಗ ರಾಘಣ್ಣನು—ತುಳಾಜಿರಾಯರೇ, ನಾವು ಮೋಸ ಹೋದೆವು. ನಮ್ಮ ಮೈಸೊಕ್ಕು ನಮ್ಮ ದಡ್ಡತನಕ್ಕೆ ಕಾರಣವಾಯಿತು. ಹುಚ್ಚನ ವೇಷದಿಂದ ನೀವೇ ಬಂದಿದ್ದಿರೆಂಬದು ಈಗೀಗ ನಮ್ಮ ಲಕ್ಷದಲ್ಲಿ ಬರಲಾರಂಭಿಸಿತು. ರಾಯರೇ, ಎಷ್ಟು ಜಾಣತನದಿಂಧ ಸೋಗನ್ನು ಹಾಕಿದ್ದಿರಲ್ಲ? ನಮಗೆ ನಿಮ್ಮ ಪರಿಚಯವು ಸ್ವಲ್ಪ ಮಾತ್ರಕ್ಕೂ ಹತ್ತಲಿಲ್ಲ. ನಾವು ಇಷ್ಟು ದಿವಸ ನಿಮ್ಮ ಬಳಿಯಲ್ಲಿದ್ದರೂ ನಿಮ್ಮ ಈ ಘನತರವಾದ ಕಲೆಯ ಅನುಭವವನ್ನು ನಾವು ಹೊಂದಿದ್ದಿಲ್ಲ. ನಿಮ್ಮ ಈ ಕಸಬಿನ ಮುಂದೆ ನಾವು ಯಾವ ಗಿಡದ ತೊಪ್ಪಲ! ಎಂದನು. ಆದಕ್ಕೆ ತುಳಾಜಿಯು—ನಿಮಗೆ ನಾನು ಹಾದಿಯಲ್ಲಿ ಬುದ್ಧಿಪೂರ್ವಕವಾಗಿ ಭೆಟ್ಟಿಯಾದೆನು. ಕಿಲ್ಲೆಯಲ್ಲಿ ಮಾತ್ರ ನಿಮಗೆ ಕಾಣಿಸಿಕೊಳ್ಳದಂತೆ ಎಚ್ಚರದಿಂದ ನಡೆಯುತ್ತಿದ್ದೆನು. ಮಾತ್ರ ನಿಮ್ಮ ಬೆನ್ನನ್ನು ಬಿಟ್ಟದ್ದಿಲ್ಲ. ನೀವು ನಾಲ್ವರು ಎಲ್ಲೆಲ್ಲಿ ಹೋಗಿದ್ದಿರಿ ಏನೇನು ಮಾಡಿದಿರಿ? ಎಂಬದನ್ನು ನಾನು ನೋಡಿದ್ದಲ್ಲದೆ ನೀವು ನೋಡದಂಥ ಸಂಗತಿಗಳನ್ನು ತಿಳಕೊಂಡು ಬಂದಿರುವೆನು. ಇಂದು ಒಂದೇ ದಿನದ ಅವಕಾಶದಲ್ಲಿ ನಾನು ಆ ದುರ್ಗದ ಆಯಕಟ್ಟಿನ ಸ್ಥಳಗಳನ್ನೆಲ್ಲ ನೋಡಿದ್ದಲ್ಲದೆ ಫಿರಂಗೀಜನರ ಬಲಾಬಲಗಳನ್ನು ಕೂಡ ತಿಳಿದುಕೊಂಡಿರುತ್ತೇನೆ. ಹಾಗೂ ಫಿರಂಗೀ ಅಧಿಕಾರಿಗಳಲ್ಲಿ ಪರಸ್ಪರರಲ್ಲಿ ವೈಮನಸ್ಸು ಇರುತ್ತದೆಂಬದನ್ನಾದರೂ ಕಂಡುಹಿಡಿದಿರುತ್ತೇನೆ. ಇವೆಲ್ಲ ಗುಪ್ತ ಸಂಗತಿಗಳು ನಿಮ್ಮ ಲಕ್ಷದಲ್ಲಿ ಬಂದಿರುವದಿಲ್ಲ. ಇದಲ್ಲದೆ ದುರ್ಗದೊಳಗಿನ ಮುಸಲ್ಮಾನ ಅಧಿಕಾರಿಗಳು ಮಹಾ ವಿಷಯಲಂಪಟರಿರುತ್ತಾರೆ. ಅವರಿಗೆ ಫಿರಂಗೀ ಅಧಿಕಾರಿಗಳ ಸ್ತ್ರೀಯರ ಮೇಲೆ ಅಭಿಲಾಷೆಯುಂಟಾಗಿರುತ್ತದೆ. ಸೆರೆಮನೆಯ ಕಾವಲುಗಾರನಾದ ಗುಲಾಂಕಾದರನಿಗೆ ಸೆರೆಮನೆಯಲ್ಲಿದ್ದ ಓರ್ವ ಸುಂದರ ತರುಣಿಯ ಪ್ರಾಪ್ತಿಯ ಅಭಿಲಾಷೆಯು ವಿಶೇಷವಾಗಿರುವದು. ಇಂಥ ಈ ವಿಷಯಾಂಧರ ಮನಸ್ಸು ಯಾವಾಗಲೂ

ಇಚ್ಛಿತ ಪ್ರಾಪ್ತಿಯ ಕಡೆಗೇ ಇರುತ್ತದಲ್ಲದೆ ದುರ್ಗದ ಹಿತಚಿಂತನದ ಕಡೆಗಿರುವದಿಲ್ಲ; ಶತ್ರುಪಕ್ಷದಲ್ಲಿ ನೋಡಬೇಕಾದ ಸಂಗತಿಗಳಲ್ಲಿ ಇದೊಂದು ನಮಗೆ ಮುಖ್ಯವಾದ ಸಂಗತಿಯು. ಅಧಿಕಾರಿಗಳಲ್ಲಿ ತಾಳ ಇಲ್ಲದಿರೋಣ, ಹಾಗು ಅವರಲ್ಲಿ ವಿಷಯಲಂಪಟತೆಯು ಹೆಚ್ಚಿರೋಣ, ಇವು ನಮಗೆ ಲಾಭಕರ ಸಂಗತಿಗಳು. ಶತ್ರುಗಳ ಬಲದ ನಿರ್ಣಯವನ್ನು ನಾವು ಇದರಿಂದಲೇ ಮಾಡಬಹುದು. ಫಿರಂಗೀ ಜನರು ವಿಷಯಲಂಪಟಗಳಿರುವದಿಲ್ಲ. ಕಾರ್ಯದಕ್ಷರಿರುತ್ತಾರೆ. ದುರ್ಗದ ಸಂರಕ್ಷಣೆಯ ವಿಷಯವಾಗಿ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಹಗಲಿರುಳೂ ಕಷ್ಟಪಡತಕ್ಕವರಾಗಿರುತ್ತಾರೆ. ಮರಾಟರು ತಮ್ಮ ಮೇಲೆ ದಂಡೆತ್ತಿ ಬರುವರೆಂಬದು ಅವರಿಗೆ ಗೊತ್ತಾಗಿಹೋಗಿದೆ. ಅವರು ಯುದ್ಧದ ಸೌರಣೆಯನ್ನು ಭರದಿಂದ ನಡಿಸಿರುತ್ತಾರೆ. ಮಾತ್ರ ಭಯದ ಲಕ್ಷಣಗಳು ಅವರಲ್ಲಿ ಅಲ್ಪ ಸ್ವಲ್ಪ ದೃಗ್ಗೋಚರವಾಗುತ್ತವೆ. ಚಿಮಣಾಜಿಅಪ್ಪಾಜಿಯವರು ಸೈನ್ಯದೊಡನೆ ಬರುವದೊಂದೇ ತಡ; ಈ ಜನರು ಒಪ್ಪಂದಕ್ಕೆ ಬರುವರೆಂಬದು ನನಗೆ ಹೊಳೆದುಹೋಯಿತು. ಆದರೆ ದುರಭಿಮಾನಿಗಳಾದ ಈ ಫಿರಂಗಿಗಳು ನಮ್ಮ ಕರಾರುಗಳಿಗೆ ಒಪ್ಪಿಕೊಳ್ಳುವ ಸಂಭವವಿಲ್ಲ. ಎಂದು ನುಡಿದನು.

ತುಳಾಜಿರಾಯನು ಈ ಮೇರೆಗೆ ನುಡಿಯಲು, ಆ ನಾಲ್ವರಿಗೂ ಬಹಳ ಆಶ್ಚರ್ಯವೆನಿಸಿತು. ರಾಘೋಬನಂತೂ ತುಳಾಜಿಯ ಕುಶಲತನಕ್ಕೆ ತಲೆದೂಗಿ ರಾಯರೇ, ಇಂಥ ಮಹತ್ವದ ಸಂಗತಿಗಳನ್ನು ನೀವು ಒಂದೇದಿನದ ಅವಧಿಯಲ್ಲಿ ಹ್ಯಾಗೆ ಕಂಡುಹಿಡಿದಿರಿ? ಎನಲು, ತುಳಾಜಿಯು—ರಾಘಣ್ಣಾ, ಇದಕ್ಕೆ ಬಹುದಿವಸಗಳ ಅಭ್ಯಾಸವೇ ಕಾರಣವು; ಸತತ ಅಭ್ಯಾಸದಿಂದ ಯಾವ ಪ್ರಸಂಗದಲ್ಲಿ ಯಾವ ಸಂಗತಿಗಳ ಕಡೆಗೆ ಲಕ್ಷಕೊಡಬೇಕೆಂಬದು ಮನುಷ್ಯನಿಗೆ ಮನದಟ್ಟಾಗಿ ಹೋಗುತ್ತದೆ. ಹೀಗೆ ಮನದಟ್ಟಾದ ಮನುಷ್ಯನು ಅಂಥ ಸಂಗತಿಗಳ ಕಡೆಗೇ ಲಕ್ಷಗೊಡುವನು. ನಿಮಗಿನ್ನೂ ವಿಶೇಷ ಅನುಭವವಿರದ್ದರಿಂದ ಒಮ್ಮೆಲೆ ಅಂಥ ಸಂಗತಿಗಳು ನಿಮ್ಮ ಲಕ್ಷದಲ್ಲಿ ಬರಲಾರವು. ಇದು ನಿಮ್ಮ ದೋಷವಲ್ಲ. ಕೆಲ ದಿನಗಳ ಅಭ್ಯಾಸದಿಂದ ನೀವೂ ಈ ವಿಷಯದಲ್ಲಿ ಪ್ರಾವೀಣ್ಯತೆಯನ್ನು ಪಡೆಯಬಹುದು. ಈ ದಿನ ನಾನು ನಿಮ್ಮ ಪರೀಕ್ಷಾರ್ಥವಾಗಿಯೇ ಬಂದಿದ್ದೆನು. ನಿಮ್ಮಲ್ಲಿ ಗುಪ್ತಹೇರರಿಗೆ ಬೇಕಾಗುವ ಗುಣಗಳು ವಿಶೇಷ ವಿಕಾಸ ಹೊಂದದಿದ್ದರೂ, ಸಂಪೂರ್ಣ

ವಾಗಿ ಇವೆ. ನಿಮ್ಮಿಂದ ಈ ಯುದ್ಧದಲ್ಲಿ ಆಗೆತಕ್ಕಷ್ಟು ಪ್ರಯೋಜನವು ನಮಗೆ ಆಗುವದೆಂದು ಮನಗಂಡೆನು. ಪ್ರತ್ಯಕ್ಷ ಒಮ್ಮೆಯಾದರೂ ದುರ್ಗವನ್ನು ನೋಡಿ ಬರುವದು ನನಗೆ ಅವಶ್ಯವಿದ್ದದರಿಂದ ಇಂದೇ ಆ ಕೆಲಸವನ್ನು ತೀರಿಸಿದೆನು. ನೀವು ಇನ್ನುಮುಂದೆ ಇದಕ್ಕೂ ಜಾಣತನದಿಂದ ಕೆಲಸಮಾಡಬೇಕು. ನಮ್ಮ ಸೈನ್ಯವು ದುರ್ಗದಬಳಿ ತಳವೂರಿತೆಂದರೆ ನಿಮಗೆ ದುರ್ಗದ ಒಳಕ್ಕೆ ಪ್ರವೇಶ ಮಾಡುವದು ಅಶಕ್ಯವಾಗುವದು. ಬಳಿಯಲ್ಲಿ ಶತ್ರುಗಳುಳಿದಾಗ ಹಳ್ಳಿಯಿಂದ ಕಾಯಿ-ಪಲ್ಲೆಗಳನ್ನು ಮಾರಲಿಕ್ಕೆ ಯಾರೂ ಬರಲಾರರೆಂಬದು ಧೂರ್ತ ಫಿರಂಗೀಜನರ ಲಕ್ಷದಲ್ಲಿ ಬರದೆ ಇರಲಾರದು. ಆದ್ದರಿಂದ ಅವರು ನಿಮ್ಮನ್ನು ಶತ್ರುಪಕ್ಷದ ಗುಪ್ತಹೇರರೆಂದು ನಿರ್ಧರಿಸಿ ನಿಮಗೆ ವಿಚಿತ್ರ ಹಿಂಸೆ ಕೊಡಬಹುದು. ಆದ್ದರಿಂದ ಆ ಕಾಲಕ್ಕೆ ನಿಮ್ಮೀವೇಷವು ತಡೆಯಲಾರದು. ಆದ್ದರಿಂದ ನೀವು ಈಗಲೇ ಯತ್ನಮಾಡಿ ಹಲವು ವೇಷಗಳಿಂದ ಫಿರಂಗೀ ಜನರ ಬಳಿಯಲ್ಲಿ ಯಾವದೊಂದು ನೌಕರಿಯನ್ನು ಹಿಡಿಯಿರಿ. ಆ ನೌಕರಿಯ ನಿಮಿತ್ತದಿಂದ ನೀವು ಅಲ್ಲಿ ಸರ್ವದಾ ಇದ್ದುಕೊಂಡು ಗುಪ್ತ ಸಂಗತಿಗಳನ್ನು ಹುಡುಕಿ ತೆಗೆದು ನಮಗೆ ಪರ್ಯಾಯದಿಂದ ತಿಳಿಸುತ್ತಿರಬೇಕು. ಆ ಸಂಗತಿಗಳನ್ನು ನಮಗೆ ಹ್ಯಾಗೆ ತಿಳಿಸಬೇಕೆಂಬ ಹಂಚಿಕೆಯು ನಿಮಗೆ ಪರಿಸ್ಥಿತಿಯುಂಟಾದಂತೆ ತಾನೇ ಹೊಳೆಯುತ್ತ ಹೋಗುವದು. ಈ ದಿನ ನೀವು ಹಾದಿಯಲ್ಲಿ ಹರಟೆಹೊಡೆಯುತ್ತ ಬಂದಂತೆ ದುರ್ಗದಲ್ಲಿ ಮಾತ್ರ ಹರಟೆಹೊಡೆಯಕೂಡದು. ಯಾರು ಎಷ್ಟು ಸಂಶಯದಿಂದ ನಿಮ್ಮನ್ನು ನೋಡಿದರೂ ನೀವು ಧೈರ್ಯಬಿಡದೆ ಇದ್ದರೆ, ನಿಮ್ಮ ವೇಷವು ಮೋಸಗಾರಿಕೆಯದೆಂದು ಯಾರಿಗೂ ತಿಳಿಯಲಾರದು. ಈಗ ಬಹಳ ಹೊತ್ತಾಯಿತು; ಊಟಮಾಡಿ ಮಲಗಿಕೊಳ್ಳಿರಿ; ಎಂದು ನುಡಿದು ಸುಮ್ಮನಾದನು

ತುಳಾಜಿರಾಯನು ಈ ಮೇರೆಗೆ ಮಾತನಾಡಿದ್ದನ್ನು ಕೇಳಿ ಆ ನಾಲ್ವರಿಗೂ ಪರಮಾವಧಿಯಾದ ಸಂತೋಷವಾಯಿತು. ಅವರು ತುಳಾಜಿರಾಯನ ಜಾಣ್ಮೆಗೆ ಬೆರಗಾದರು. ಆತನು ಒಂದೇ ದಿನದಲ್ಲಿ ತಿಳಿದುಕೊಂಡು ಬಂದ ಸಂಗತಿಗಳಿಂದಂತೂ ಅವರು ವಿಶೇಷ ಅಚ್ಚರಿಗೊಂಡು ಆತನಲ್ಲಿ ಮತ್ತಿಷ್ಟು ಪ್ರೇಮವನ್ನು ತಾಳಿದರು. ಹಾಗು ತಮ್ಮ ಮೇಲೆ ತುಳಾಜಿರಾಯನ ಅಥವಾ ಚಿಮಣಾಜಿಅಪ್ಪಾಜಿಯ ಪ್ರೇಮವು ಬೆಳೆಯಬೇಕಾದರೆ

ತಮ್ಮಲ್ಲಿ ಕರ್ತೃತ್ವಶಕ್ತಿಯುಂಟಾಗಬೇಕೆಂಬದನ್ನು ಅರಿತುಕೊಂಡರು. ಈ ಅರಿಕೆಯಿಂದ ಅವರಲ್ಲಿ ನವಚೈತನ್ಯವು ಸುಳಿದಾಡಿತು. ಬುದ್ಧಿವೈಭವದ ಮೇಲಾಟವು ಬೆಳೆಯಿತು. ಇದರಿಂದ ಅವರಿಗೆ ಈ ಪ್ರಕರಣದ ಪ್ರಾರಂಭದಲ್ಲಿ ಹೇಳಿದಂತೆ ಹೊಸಸೃಷ್ಟಿಯಲ್ಲಿಯೇ ನಲಿದಾಡುತ್ತಿರುವಂತೆ ಭಾಸವಾಯಿತು. ಬಳಿಕ ಅವರು ತುಳಾಜಿಯ ಅಪ್ಪಣೆ ಹೊಂದಿ ಆತನನ್ನು ಮನದಲ್ಲಿಯೇ "ಭಪ್ಪರೆ ಪಸ್ತಾದಿ"ಯೆಂದು ಕೊಂಡಾಡುತ್ತ ಊಟದ ಸ್ಥಳಕ್ಕೆ ನಡೆದರು.

---

## (೮) ನಿಳೋಜಿಯ ಕ್ಷಾತ್ರತೇಜ.

ಮಧ್ಯರಾತ್ರಿಯ ಸಮಯವು; ಸರ್ವತ್ರದಲ್ಲೂ ಶಾಂತತೆಯು ನೆಲೆಗೊಂಡಿತ್ತು. ಹಗಲೆಲ್ಲ ದುಡಿದ ಪ್ರಾಣಿಮಾತ್ರರು ಈಗ ಸುಖವಾಗಿ ವಿಶ್ರಾಂತಿಯನ್ನು ಹೊಂದುತ್ತಿದ್ದರು. ಸಂಪೂರ್ಣ ಜಗತ್ತು ನಿದ್ರಾಂಗನೆಯ ಮೋಹನಾಸ್ತ್ರಕ್ಕೆ ಒಳಗಾದಂತೆ ಭಾಸವಾಗುತ್ತಿತ್ತು. ವಸಯಿ ದುರ್ಗದಲ್ಲಿಯಂತೂ ಈ ಪ್ರಶಾಂತತೆಯು ಬಹು ಗಂಭೀರವಾಗಿತ್ತು. ದುರ್ಗವು ಅಭೇದ್ಯವಾದ್ದರಿಂದ ದುರ್ಗದೊಳಗಿನ ಫಿರಂಗಿಗಳೆಲ್ಲರೂ ನಿಶ್ಚಿಂತೆಯಿಂದ ನಿದ್ರಾಸಕ್ತರಾಗಿದ್ದರು. ಕಾವಲುಗಾರರುಸಹ ಯಾವ ಭೀತಿಯೂ ಇಲ್ಲದೆ ಮಲಗಿಕೊಂಡಿದ್ದರು. ಮನುಷ್ಯನಿಗೆ ಯಾವದೊಂದು ಚಿಂತೆಯಿಲ್ಲದಾಯಿತೆಂದರೆ ಗಡದ್ದು ನಿದ್ದೆ ಹತ್ತುವದು; ಆದರೆ ಚಿಂತಾಯುಕ್ತ ಮನುಷ್ಯನ ಸ್ಥಿತಿಯು ಇದಕ್ಕೆ ವಿರುದ್ಧವಾಗಿರುವದು.

ವಸಯಿ ದುರ್ಗದಲ್ಲಿ ಎಲ್ಲರೂ ನಿದ್ರಾದೇವಿಯ ಅನುಗ್ರಹಕ್ಕೆ ಪಾತ್ರರಾಗಿ ಬಾಹ್ಯ ವ್ಯಾಪಾರಗಳನ್ನೆಲ್ಲ ಮರೆತು ನಿದ್ರಾಸುಖಮಗ್ನರಾಗಿದ್ದರೂ, ಜೇಲಖಾನೆಯ ಮುಖ್ಯ ಕಾವಲುಗಾರನೊಬ್ಬನು ಇನ್ನೂ ಎಚ್ಚರವಾಗಿದ್ದನು. ವಾಸ್ತವವಾಗಿ ನೋಡಿದರೆ ಆ ಕಾವಲುಗಾರನಿಗೆ ಎಚ್ಚತ್ತಿರುವ ಕಾರಣವಿರಲಿಲ್ಲ. ಯಾಕಂದರೆ ಬಹು ಭದ್ರವಾದ ಜೇಲಖಾನೆಯು; ಅದರಲ್ಲಿ ಕೈದಿಗಳೆಲ್ಲರೂ ಕಬ್ಬಿಣ ಗೆಜಗಳಿಂದ ಭದ್ರವಾದ ಕೋಣೆಗಳಲ್ಲಿ ಪ್ರತಿಬಂಧಿಸಲ್ಪಟ್ಟಿದ್ದರು. ಜೇಲಖಾನೆಯನ್ನು ಶತ್ರುಗಳು ಮುತ್ತುವ ಅಂಜಿಕೆ

ಯಾಗಲಿ ಅಥವಾ ಕೈದಿಗಳು ಓಡಿಹೋಗುವ ಅಂಜಿಕೆಯಾಗಲಿ ಇರಲಿಲ್ಲ. ಹೀಗಿದ್ದರೂ ಆ ಕಾವಲುಗಾರನು ಎಚ್ಚತ್ತಿರುವ ಕಾರಣವೇನು?

ಇದಕ್ಕೆ ಕಾರಣವನ್ನೇನು ಹೇಳೋಣ? ದುರ್ಗಕ್ಕೆ ಶತ್ರುಗಳ ಮುತ್ತಿಗೆಯಿರದಿದ್ದರೂ, ಆ ಕಾವಲುಗಾರನ ಹೃದಯಕ್ಕೆ ಶತ್ರುಗಳ ಬಲವಾದ ಮುತ್ತಿಗೆಯು ಬಿದ್ದಿತ್ತು. ಆ ಶತ್ರುಗಳ ಮುತ್ತಿಗೆಯಿಂದ ಪಾರಾಗುವದು ಅವನಿಗೆ ಕೇವಲ ಅಶಕ್ಯವಾಗಿತ್ತು. ಹೃದಯದಲ್ಲಿ ಸರ್ವದಾ ವಾಸ ಮಾಡಿಕೊಂಡಿರುವ ಆರು ಜನ ಶತ್ರುಗಳಲ್ಲಿ ಮಹಾಪ್ರಬಲನೂ, ವರಿಷ್ಠನೂ ಆದ ಕಾಮನೆಂಬ ಶತ್ರುವು ಅವನನ್ನು ನುಗ್ಗುಮಾಡಲಾರಂಭಿಸಿದ್ದನು. ಆ ಶತ್ರುವಿನ ಬಾಧೆಯಿಂದ ಆ ಕಾವಲುಗಾರನ ನಿದ್ದೆಯು ಹೇಳಹೆಸರಿಲ್ಲದೆ ಹೋಗಿತ್ತು. ಅವನು ಹಾಸಿಗೆಯ ಮೇಲೆ ಬಿದ್ದು ಆ ಮಗ್ಗಲಿನಿಂದ ಈ ಮಗ್ಗಲಿಗೆ-ಈ ಮಗ್ಗಲಿನಿಂದ ಆ ಮಗ್ಗಲಿಗೆ ಹೀಗೆ ಒಂದೇಸವನೆ ಹೊರಳಾಡುತ್ತಿದ್ದನು. ಆ ಶತ್ರುವಿನ ಸಮಾಧಾನ ಮಾಡುವದಕ್ಕೆ ಅವನು ಸಮಯವನ್ನು ನಿರೀಕ್ಷಿಸುತ್ತಿದ್ದನು.

ಆ ಕಾವಲುಗಾರನು ಜಾತ್ಯಾ ನೀಚನಾಗಿದ್ದನು. ಆತನಿಗೆ ವಿಷಯಸುಖದ ಹಂಬಲ ಬಹಳ; ಅದರಲ್ಲಿ ಜೇಲಖಾನೆಯ ಒಡೆತನವು ಸಿಕ್ಕಬಳಿಕಂತೂ ಅವನ ಆ ವಿಷಯಸುಖೇಚ್ಛೆಯು ಮುಂದಡಿಯಿಟ್ಟಿತ್ತು. ಜೇಲಖಾನೆಯಲ್ಲಿ ಕೈದಿಗಳಾಗಿರುವ ಸುಂದರ ಯುವತಿಯರ ಮೇಲೆ ಸ್ವಾರೀಮಾಡುವದಕ್ಕಾಗಿ ಅವನು ಯಾವಾಗಲೂ ಹಾತೊರೆಯುತ್ತಿದ್ದನು; ಆದರೆ ಅನುಕೂಲ ಸಂಧಿಯು ಸಿಗದ್ದರಿಂದ ಅವನು ಮನಸ್ಸಿನಲ್ಲಿಯೇ ತಳಮಳಿಸುತ್ತಿದ್ದನು. ಹೀಗಿರಲು ಸಿಂಹಳಗ್ರಾಮದ ಕೈದಿಗಳಲ್ಲಿ ಪುರುಷವೇಷದ ಓರ್ವ ಸುಂದರ ತರುಣಿಯಿರುವಳೆಂಬದು ಅವನಿಗೆ ಗೊತ್ತಾಯಿತು. ಆ ಧೂರ್ತನು ಬಹು ವಿಧವಾಗಿ ಪರೀಕ್ಷಿಸಿ ಆ ಚಂದ್ರಾ ತರುಣಿಯನ್ನು ಮನಸ್ಸಿನಿಂದ ಪ್ರೀತಿಸಲಾರಂಭಿಸಿದನು. ಬರಬರುತ್ತ ಚಂದ್ರೆಯ ಮೇಲಿನ ಅವನ ಪ್ರೇಮವು ಅನಿವಾರವಾಯಿತು. ಆಕೆಯ ಚಂದ್ರವದನವು, ಹರಿಣಾಕ್ಷಿಗಳು, ತಿದ್ದಿದಂತಿರುವ ಕುಡಿಹುಬ್ಬುಗಳು, ಮಧುರವಾಗಿ ತೋರುವ ಅಧರೋಷ್ಠವು ಅವನ ಮನಸ್ಸನ್ನು ಮತ್ತಷ್ಟು ಆಕರ್ಷಿಸಿದವು. ಚಂದ್ರೆಯು ಪುರುಷವೇಷದಲ್ಲಿರುವಾಗಲೇ ಇಷ್ಟು ಮನಮೋಹಕಳಾಗಿ ತೋರುತ್ತಿರುವಾಗ ಆಕೆಗೆ ಪ್ರತ್ಯಕ್ಷ ಸ್ತ್ರೀಯ ಉಡುಪುಗಳನ್ನು ಉಡಿಸಿದರೆ ಆಕೆಯು

ಇನ್ನೆಷ್ಟು ಮನೋಹರಳಾಗಿ ತೋರುವಳೋ ಎಂಬ ಕಲ್ಪನೆಯು ಅವನ ಧೈರ್ಯವನ್ನು ಹೊಡೆದೋಡಿಸಿತು. ಅವನ ಮನಸ್ಸು ಆಕೆಯ ವದನಾಬ್ಜದಲ್ಲಿ ಭೃಂಗಸ್ವರೂಪವನ್ನು ಹೊಂದಿತು. ಜೇಲಖಾನೆಯಲ್ಲಿ ಆಡ್ಡಾಡುವಾಗ ಚಂದ್ರಿಯ ಮೇಲೆಯೇ ಅವನ ದೃಷ್ಟಿಯು ಸಂಪೂರ್ಣವಾಗಿ ಇರಲಾರಂಭಿಸಿತು. ಹೀಗೆ ಚಂದ್ರಿಯ ಸುರೂಪವು ಸಂಪೂರ್ಣವಾಗಿ ಮನಸ್ಸನ್ನಾಕರ್ಷಿಸಿದ್ದರಿಂದ ಅವನು ಆ ಜೇಲಖಾನೆಯಲ್ಲಿರುವ ಬೇರೆ ತರುಣಿಯರಗೊಡವೆಯನ್ನು ಬಿಟ್ಟು ಕೇವಲ ಚಂದ್ರೆಯೊಬ್ಬಳೇ ತನ್ನ ಸುಖಸರ್ವಸ್ವವೆಂದು ಭಾವಿಸಿದ್ದನು.

ಮನುಷ್ಯನ ಮನಸ್ಸು ಒಮ್ಮೆ ಆಡ್ಡದಾರೀ ತುಳಿಯಹತ್ತಿತೆಂದರೆ ಅದರಲ್ಲಿರುವ ಕಂಟಕಗಳನ್ನು ತಿಳಿಯದೆ ಅದೇ ರಾಜಮಾರ್ಗವೆಂದು ನಡೆಯುಹತ್ತುವದು. ಇಂಥ ಅಡ್ಡದಾರೀ ತುಳಿಯುವ ಮನಸ್ಸಿಗೆ ಕಡಿವಾಣವಿಲ್ಲದ ಕಟವಾಳಿ ಕುದುರೆಯ ಉಪಮೆಯನ್ನು ಕೊಡಬಹುದು. ಇಲ್ಲವೆ ಸುರಾಪಾನಮಾಡಿದ ಮರ್ಕಟನ ಉಪಮೆಯನ್ನು ಕೊಡಬಹುದು. ವಿವೇಕವನ್ನು ಕಳೆದುಕೊಂಡ ಮನಸ್ಸಿನ ಸಮಾಧಾನ ಮಾಡುವದು ಕೇವಲ ಅಶಕ್ಯವೇ ಸರಿ! ಸೆರೆಮನೆಯ ಕಾವಲುಗಾರನಾದ ಗುಲಾಂಕಾದರನು ಹೀಗೆ ವಿವೇಕಹೀನನಾದ್ದರಿಂದ ಅವನು ಹುಚ್ಚೆದ್ದು ಹರಿಯಲಾರಂಭಿಸಿದ್ದನು. ರಾತ್ರಿಯು ಹೆಚ್ಚು ಹೆಚ್ಚಾದಂತೆ ಅವನ ಕಾಮಾಂಧತೆಯು ವೃದ್ಧಿಂಗತವಾಗತೊಡಗಿತು. ಈ ದಿನ ರಾತ್ರಿಯಲ್ಲಿ ತನ್ನ ಬಯಕೆಯನ್ನು ಕೈಗೂಡಿಸಿಕೊಳ್ಳಬೇಕೆಂಬ ದುರಿಚ್ಛೆಯು ಆದಿನ ಮುಂಜಾವಿನಲ್ಲಿಯೇ ಅವನಿಗುಂಟಾದ್ದರಿಂದ ಅವನು ಆ ಇಚ್ಛಾತೃಪ್ತಿಗೆ ಬೇಕಾದ ಅನುಕೂಲತೆಯನ್ನು ಮೊ-ದಲೇ ಸಿದ್ಧಪಡಿಸಿಟ್ಟುಕೊಂಡಿದ್ದನು. ಅವನ ಈ ಕಾರಸ್ಥಾನವು ಜೇಲಖಾನೆಯಲ್ಲಿಯ ಯಾರ ಲಕ್ಷದಲ್ಲಿಯೂ ಬಂದಿರಲಿಲ್ಲ. ಚಂದ್ರಾ ತರುಣಿಯೋರ್ವಳನ್ನು ಪಿಂಪಳಗಾಂವದ ಕೈದಿಗಳ ಕೋಣೆಯಿಂದ ಅಗಲಿಸಿ ಬೇರೊಂದು ಕೋಣೆಯಲ್ಲಿರಿಸಿದ್ದನು. ಆ ಕೋಣೆಯಲ್ಲಿ ಮರಾಠಾಜಾತಿಯ ಬೇರೆ ಇಬ್ಬರು ತರುಣಿಯರಿದ್ದರು. ಅವರು ತಮ್ಮ ಕೋಣೆಯಲ್ಲಿರಲು ಬಂದ ಈ ಹೊಸ ತರುಣನನ್ನು ನೋಡಿ ದಿಗಿಲುಗೊಂಡರು. ಅವರು ಗುಲಾಂಕಾದರನ ಈ ಕೃತಿಯನ್ನು ನಿಷೇಧಿಸಿದರು. ಆದರೆ ಅವರಿಗೆ ಆ ಕಾಮಾಂಧನು "ಪುರುಷವೇಷವನ್ನು ನೋಡಿ ಅಂಜಬೇಡಿರಿ. ಈಕೆಯು ನಿಜವಾಗಿಯೂ

ಸ್ತ್ರೀಯಿರುವಳು'' ಎಂದು ಸ್ಪಷ್ಟವಾಗಿ ಹೇಳಿದನು. ಈ ಸಂಗತಿಯನ್ನು ಕೇಳಿ ಆ ಕೋಣೆಯಲ್ಲಿದ್ದ ಸ್ತ್ರೀಯರು ಚಂದ್ರಾತರುಣಿಯನ್ನು ಆಶ್ಚರ್ಯದಿಂದ ನೋಡಲಾರಂಭಿಸಿದರು.

ಗುಲಾಂಕಾದರನ ಈ ಮಾತುಗಳು ಚಂದ್ರಾತರುಣಿಯ ಹೃದಯದಲ್ಲಿ ಬರ್ಚಿಯನ್ನು ಚುಚ್ಚಿದಷ್ಟು ವ್ಯಥೆಯನ್ನುಂಟುಮಾಡಿದವು. ಈತನು ತನ್ನ ನಿಜರೂಪವನ್ನು ಕಂಡುಹಿಡಿದು ತನ್ನಮೇಲೆ ಪಾಪಬುದ್ಧಿಯನ್ನು ತಾಳಿರುವನೆಂಬದು ಚಕ್ಕನೆ ಅವಳಿಗೆ ಹೊಳೆಯಿತು. ಆಗೆ ಆ ಸ್ವಾಭಿಮಾನಿಯಾದ ತರುಣಿಯಲ್ಲಿ ಆತನ ವಿಷಯವಾಗಿ ಅತ್ಯಂತ ತಿರಸ್ಕಾರವುಂಟಾಯಿತು. ಅವಳ ಸುಕುಮಾರ ರೂಪವು ನೋಡನೋಡುವಷ್ಟರಲ್ಲಿ ಅತ್ಯುಗ್ರವಾಯಿತು. ಆಗೆ ಅಲ್ಲಿದ್ದ ತರುಣಿಯರು ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸಿ ಆ ಆಗಂತುಕ ತರುಣನು ತರುಣನಾಗಿರದೆ ತರುಣಿಯಾಗಿರುವಳೆಂಬದನ್ನು ನಂಬಿಕೆಮಾಡಿಕೊಂಡು ನುಡಿದರೇನಂದರೆ:—

''ನೀನು ಹೀಗೆ ಪುರುಷ ವೇಷವನ್ನು ಧರಿಸಲು ಕಾರಣವೇನು? ಈ ಗುಲಾಂ ಕಾದರನು ನಿನ್ನನ್ನು ಇಲ್ಲಿಗೇಕೆ ಕರೆತಂದನು?''

''ಸಹೋದರಿಯರೇ, ನನ್ನ ಹಾಗೆ ನೀವೂ ಸೆರೆಯಾಳಾಗಿರುವಿರೆಂದ ಬಳಿಕ ಈ ಬಗ್ಗೆ ನಿಮಗೆ ಬಾಯಿಬಿಚ್ಚಿ ಹೇಳುವ ಕಾರಣವೇ ಇಲ್ಲ. ನಮ್ಮ ಗ್ರಾಮಕ್ಕೆ ಈ ನೀಚ ಫಿರಂಗಿಗಳು ಮುತ್ತಿಗೆಯನ್ನಿಕ್ಕಿದಾಗ ನಾನು ಪುರುಷ ವೇಷದಿಂದ ಅವರೊಡನೆ ಕಾದಾಡಲು ಹೊರಟಿದ್ದೆನು. ಆದರೆ ದುರ್ದೈವದಿಂದ ನಮ್ಮವರಿಗೆ ಅಪಜಯವಾದ್ದರಿಂದ ನಾವು ಇಲ್ಲಿ ಸೆರೆಯಲ್ಲಿ ಕೊಳೆಯುತ್ತ ಬೀಳಬೇಕಾಯಿತು. ಆಗೆ ಧರಿಸಿದ ನನ್ನ ಪುರುಷವೇಷವು ಈಗಲೂ ಇರುವದು. ನಾನು ಯಾವ ಹೆದರಿಕೆಯಿಂದ ಪುರುಷ ವೇಷವನ್ನಳವಡಿಸಿಕೊಂಡಿದ್ದೆನೋ ಅದು ನನಗೆ ಈ ವೇಷದಲ್ಲಿಯೂ ತಪ್ಪಲಿಲ್ಲ. ದುರ್ಜನನಾದ ಈ ಕಾವಲುಗಾರನು ನಾನು ಪುರುಷ ವೇಷದಲ್ಲಿದ್ದರೂ ಸ್ತ್ರೀಯೆಂಬದನ್ನು ಹ್ಯಾಗೆ ಹ್ಯಾಗೋ ಕಂಡುಕೊಂಡಿರುವನು. ಪರಸ್ತ್ರೀಯರೆಂದರೆ ದುರ್ಜನರ ಬಾಯಿಗೆ ನೀರು ಬರುವದು ಸ್ವಾಭಾವಿಕವು; ಅದರಂತೆ ಈ ದುರ್ಜನನಾದರೂ ನನ್ನಮೇಲೆ ಪಾಪವಾಸನೆಯನ್ನು ತಾಳಿರಬಹುದಾಗಿ ತೋರುತ್ತದೆ ಆದರೆ ಈ ಮೂರ್ಖನಿಗೆ ಮರಾಠಾ ಸ್ತ್ರೀಯರ ಸತ್ಯಶೀಲ ಪ್ರಭಾವವು ಗೊತ್ತಿಲ್ಲವೆಂಬಂತೆ ತೋರುತ್ತದೆ. ನಾನು

ಮರಾಠಾ ತರುಣಿಯಿದ್ದು, ವೀರಕನ್ಯೆಯಿದ್ದೇನೆ. ಹಿರಿಯರ ಪುಣ್ಯದಿಂದ ಯುದ್ಧಕಲೆಯ ಪರಿಚಯವೂ ನನಗಿರುತ್ತದೆ. ನಾನು ಅಬಲೆಯೆಂದು ಅವನು ನನ್ನ ಮೇಲೆ ಬಲಾತ್ಕಾರ ಮಾಡಬರಬಹುದು; ಆದರೆ ಪರಿಣಾಮದಲ್ಲಿ ನಾನು ಅಬಲೆಯೋ ಸಬಲೆಯೋ ಎಂಬದು ಅವನಿಗೇ ತಿಳಿದುಬರುವದು. (ಅವಡುಗಚ್ಚಿ) ಎಲೋ ದುಷ್ಟಾ! ಪರಸ್ತ್ರೀಯರ ಮೇಲೆ ಪಾಪವಾಸನೆಯನ್ನು ತಾಳುವಿಯಾ? ಪಾಪವಾಸನೆಯನ್ನು ತೃಪ್ತಿಗೊಳಿಸುವದಕ್ಕೋಸ್ಕರ ನನ್ನನ್ನು ನಮ್ಮವರಿಂದ ಅಗಲಿಸಿ ಇಲ್ಲಿ ತಂದಿಟ್ಟಿರುವೆಯಾ? ನೀಚಾ! ನಿನ್ನ ನೀಚಬುದ್ಧಿಗೆ ಧಿಃಕಾರವಿರಲಿ! ಮರಾಠಾ ಸ್ತ್ರೀಯರ ಸತ್ವಶಾಲಿತ್ವವು ಎಂಥದಿರುತ್ತದೆಂಬದನ್ನು ನೋಡು.''

ಈ ಮೇರೆಗೆ ಆ ತರುಣಿಯು ಮಾತಾಡುವಾಗ ಅವಳು ಈಗಲೇ ಆ ನೀಚ ಕಾಮಾಂಧನನ್ನು ಯಮಸದನಕ್ಕಟ್ಟುವಳೋ ಎಂಬ ಹಾಗೆ ತೋರುತ್ತಿದ್ದಳು. ಆಕೆಯ ಈ ಉಜ್ವಲ ತೇಜಸ್ಸನ್ನು ನೋಡಿ ಆ ಕೋಣೆಯಲ್ಲಿದ್ದ ತರುಣಿಯರು ದಂಗುಬಡಿದರು. ವಸ್ತುತಃ ಆ ತರುಣಿಯರಲ್ಲಿ ಚಂದ್ರಾತರುಣಿಯಂಥ ತೇಜಸ್ವಿತೆಯು ಇದ್ದಿಲ್ಲ. ಸ್ತ್ರೀಯರಲ್ಲಿರುವ ಸ್ವಾಭಾವಿಕ ಕೋಮಲತೆಯು ಅವರಲ್ಲಿತ್ತು. ಆದರೆ ಸತೀತ್ವವನ್ನು ಕಾಯ್ದುಕೊಳ್ಳುವದರಲ್ಲಿ ಸತ್ವಶಾಲಿಗಳಾಗಿದ್ದರು. ತಮ್ಮ ವಿಟಂಬನೆಯ ಪ್ರಸಂಗವು ಬಂದರೆ ಆ ಕೂಡಲೆ ಪ್ರಾಣಕೊಡಲಿಕ್ಕೆಂದು ಅವರು ಬಳಿಯಲ್ಲಿ ಯಾವಾಗಲೂ ಜಾಜ್ವಲ್ಯವಾದ ಒಂದು ಔಷಧಿಯನ್ನು ಸಂಗ್ರಹಿಸಿಕೊಂಡಿದ್ದರು. ಆ ಔಷಧಿಯು ಯಾರೊಬ್ಬರ ನಾಲಿಗೆಗೆ ಸ್ಪರ್ಶವಾದ ಕೂಡಲೆ ತಾತ್ಕಾಲಕ್ಕೇ ಅವರ ಪ್ರಾಣವು ಹೊರಟು ಹೋಗುತ್ತಿತ್ತು. ಇರಲಿ. ಆಗ ಆ ತರುಣಿಯರು ಕಾಮಾಂಧನಾದ ಗುಲಾಂಕಾದರನನ್ನು ಶಪಿಸಿ ನಾವು ಮೂವರೂ ಈ ಕೋಣೆಯಲ್ಲಿರುವದರಿಂದ ಆ ಕಾಮಾಂಧನ ಅತ್ಯಾಚಾರವು ನಡೆಯಲಾರದೆಂದು ಚಂದ್ರಾತರುಣಿಯನ್ನು ಸಮಾಧಾನಗೊಳಿಸಿದರು. ಆ ದಿನ ಚಂದ್ರಾತರುಣಿಯು ಊಟವನ್ನು ಕೂಡ ಮಾಡಲಿಲ್ಲ. ಆ ದುರ್ಜನನ ಶಾಸನ ಮಾಡಿದ ಹೊರತು ಊಟ ಮಾಡಬಾರದೆಂದು ಆ ಖಂಬೀರಳು ನಿಶ್ಚಯಿಸಿದಂತೆ ತೋರಿತು. ಜತೆಯಲ್ಲಿದ್ದ ತರುಣಿಯರು ಆಗ್ರಹಪಟ್ಟರೂ ಅವಳು ಕೇಳಲಿಲ್ಲ.

ಮಧ್ಯಾಹ್ನವು ಗತಿಸಿತು. ಹೊತ್ತು ಹಾಹಾ ಅನ್ನುವಷ್ಟರಲ್ಲಿ ಕೆಳಗಿಳಿಯಿತು ಸಂಧ್ಯಾಸಮಯದ ಸೂಚಕವಾದ ಸಂಧ್ಯಾರಾಗವು ಪಡುವಣದಿಗ್ಭಾಗವನ್ನಲಂಕರಿಸಿತು. ಕಾಮಾಂಧನಾದ ಗುಲಾಂಕಾದರನ ಸಂತೋಷವು ಹೆಚ್ಚತೊಡಗಿತು; ಅವನು ಮನಸ್ಸಿನಲ್ಲಿ ಏನೇನೋ ಆಲೋಚಿಸಿ ಚಂದ್ರಾತರುಣಿಯ ಜೊತೆಗಿದ್ದ ಬೇರೆ ಇಬ್ಬರು ತರುಣಿಯರನ್ನು ಅಲ್ಲಿಂದ ಅಗಲಿಸಿದನು. ಚಂದ್ರಾತರುಣಿಯು ಒಬ್ಬಳೇ ಆ ಕೋಣೆಯಲ್ಲುಳಿದಳು. ಆಗಂತೂ ಅವಳಿಗೆ ಆ ಕಾಮಾಂಧನ ಕಾರಸ್ಥಾನವು ಸ್ಪಷ್ಟವಾಗಿ ಗೊತ್ತಾಯಿತು. ಅವಳು ಅಚ್ಚ ಮರಾಟರಕ್ತದ ತರುಣಿಯಾದ್ದರಿಂದ ಸ್ವಲ್ಪವೂ ಬೆದರಲಿಲ್ಲ. ಸ್ವಮರ್ಯಾದೆಯನ್ನು ಕಾಯ್ದುಕೊಂಡೇನೆಂಬ ಆತ್ಮವಿಶ್ವಾಸವು ಅವಳಿಗೆ ಚನ್ನಾಗಿತ್ತು. ಕತ್ತಲು ಬಿದ್ದಿತು. ಕೈದಖಾನೆಯಲ್ಲಿರುವ ಸೆರೆಯಾಳುಗಳಿಗೆ ಸಂಜೆಯ ಆಹಾರವು ಕೊಡಲ್ಪಟ್ಟಿತು. ಚಂದ್ರಾತರುಣಿಯು ಆಗಲೂ ಆಹಾರ ಮುಟ್ಟಲಿಲ್ಲ. ಆ ನರಾಧಮನ ವಧಮಾಡಿಯೇ ತೀರಬೇಕೆಂದು ನಿಶ್ಚಯಿಸಿದ್ದಳು.

ಬರಬರುತ್ತ ರಾತ್ರಿಯು ಹೆಚ್ಚುತ್ತ ಮಧ್ಯರಾತ್ರಿಯವರೆಗೆ ಬಂದಿತು. ಸೆರೆಯಾಳುಗಳೆಲ್ಲರಿಗೂ ಗಡದ್ದು ನಿದ್ದೆಹತ್ತಿದ್ದನ್ನು ತಿಳಿದು, ಮೇಲೆ ಹೇಳಿದಂತೆ ಎಚ್ಚತ್ತಿದ್ದ ಗುಲಾಂಕಾದರನು ತನ್ನ ಇಚ್ಛಾತೃಪ್ತಿಯ ಸಮಯವು ಬಂದಿತೆಂದು ಹಿಗ್ಗಿ, ಮೆಲ್ಲಗೆ ತನ್ನ ಕೋಣೆಯಿಂದ ಹೊರಬಿದ್ದನು. ಅವನು ಆ ಕತ್ತಲೆಯಲ್ಲಿ ಹಾಗೇ ಮುಂದಕ್ಕೆ ಸಾಗಿ ಚಂದ್ರಾತರುಣಿಯಿದ್ದ ಕೋಣೆಗೆ ಹೋದನು ಮತ್ತು ಮೆಲ್ಲಗೆ ಕೀಲಿಯನ್ನು ತೆಗೆದು ಒಳಹೊಕ್ಕನು. ಆಗ ಒಂದು ಮೂಲೆಯಲ್ಲಿ ಚಂದ್ರಾತರುಣಿಯು ನಾಗರಹಾವಿನಂತೆ ಭುಸುಗುಡುತ್ತ ಕುಳಿತಿರುವಳೆಂಬದು ಅವನಿಗೆ ಕಂಡುಬಂದಿತು. ಆ ಕತ್ತಲಲ್ಲಿ ಆಕೆಯ ಉಗ್ರರೂಪವು ಆ ಕಾಮಾಂಧನಿಗೆ ಗೋಚರವಾಗಲಿಲ್ಲ. ಅವನು ಮೆಲ್ಲಗೆ ಆಕೆಯ ಸಮೀಪಕ್ಕೆ ಹೋಗಿ, 'ಪ್ರಿಯೇ ಚಂದ್ರಾ' ಎಂದು ಒದರಿದನು. ಆಕೂಡಲೆ ಆ ತರುಣಿಯು ಅತ್ಯಂತ ಸಂತಪ್ತಳಾಗಿ "ಮೂರ್ಖಾ, ಪರಸ್ತ್ರೀಗೆ ಪ್ರಿಯೇ ಎಂದು ಸಂಬೋಧಿಸಲಿಕ್ಕೆ ನಿನಗೆ ನಾಚಿಕೆ ಬರುವದಿಲ್ಲವೇ? ಒಂದು ಹೆಜ್ಜೆ ಮುಂದಕ್ಕಿಟ್ಟೆಯೆಂದರೆ ಕೂಡಲೆ ನಿನ್ನನ್ನು ಯಮಸದನಕ್ಕಟ್ಟುವೆನು. ಇಕೋ ನೋಡು, ನಿನ್ನ ಗಂಟಲು ಸೀಳಿ ರಕ್ತಪಾನ ಮಾಡಲು ನನ್ನ ಖಡ್ಗವು ಹಾತೊರೆಯುತ್ತಿರುವದು" ಎಂದು ನುಡಿದು

ಮುಸುಕಿನಲ್ಲಿದ್ದ ಒಂದು ಸಣ್ಣ ಖಡ್ಗವನ್ನು ತೋರಿಸಿದಳು. ಆ ಖಡ್ಗವು ಕತ್ತಲಲ್ಲಿ ಮಿಂಚಿನಂತೆ ಹೊಳೆಯಲು, ಆ ಕಾಮಾಂಧನ ಕೈಕಾಲುಗಳು ತಣ್ಣಗಾದವು. ಪರಸ್ತ್ರೀಕಾಮುಕರು ಅರ್ಥಾತ್ ವಿಷಯಲಂಪಟರು ಬಹುತರವಾಗಿ ಭ್ಯಾಡ ಸ್ವಭಾವದವರಿರುತ್ತಾರೆ. ಅವರಲ್ಲಿ ಪುಕ್ಕತನವು ಸ್ವಾಭಾವಿಕವಾಗಿ ಮನೆಮಾಡಿಕೊಂಡಿರುತ್ತದೆ. ಅದರಂತೆ ಗುಲಾಂಕಾದರನ ಸ್ಥಿತಿಯಾಗಿತ್ತು. ಅವನು ಜಾತ್ಯಾ ಪುಕ್ಕನು. ಹ್ಯಾಗೆ ಹ್ಯಾಗೋ ಅಧಿಕಾರಿಗಳ ಮರ್ಜಿಯನ್ನು ಸಂಪಾದಿಸಿ ಜೇಲಖಾನೆಯ ಮುಖ್ಯ ಕಾವಲುಗಾರನಾಗಿದ್ದನು. ಅವನಲ್ಲಿ ಪೌರುಷವಾಗಲಿ, ಪ್ರಸಂಗಬಿದ್ದರೆ ಬಂದದ್ದನ್ನು ನೋಡೇನೆಂಬ ಧೈರ್ಯವಾಗಲಿ ಇದ್ದಿಲ್ಲ. ಅವನು ಚಂದ್ರಾತರುಣಿಯ ರೌದ್ರತೆಯನ್ನು ನೋಡಿ ಅಂಜಿದನು. ಆ ಕೋಣೆಯಲ್ಲಿ ನಿಲ್ಲಲಿಕ್ಕೆ ಕೂಡ ಅವನಿಗೆ ಧೈರ್ಯವಾಗಲಿಲ್ಲ. ಕೂಡಲೆ ಅವನು ಅಲ್ಲಿಂದ ಕಾಲ್ದೆಗೆದು ಹೊರಗೆ ಬಂದು ಮೊದಲಿನಂತೆ ಕೋಣೆಗೆ ಕೀಲೀ ಹಾಕಿದನು. ಆಗೆ ಅವನ ಎದೆಯು ಡಡ ಡಡ ಹಾರುತ್ತಿತ್ತು. ಕೈ-ಕಾಲುಗಳು ಥರಗುಟ್ಟಿ ನಡುಗುತ್ತಿದ್ದವು. ಚಂದ್ರಾತರುಣಿಯ ಆಶೆಯನ್ನೇ ಬಿಡಬೇಕೆಂದು ಅವನ ಮನಸ್ಸಿನಲ್ಲಿ ಬಂದಿತು. ಆದರೆ ಸ್ತ್ರೀಕಾಮವು ಬಹಳ ಕೆಟ್ಟದು. ಎಷ್ಟು ಅವಮಾನವಾದರೂ ಅದರ ವ್ಯಸನವು ತಪ್ಪದು. ಉತ್ತರಕ್ಷಣದಲ್ಲಿಯೇ ಆ ಕಾಮಾಂಧನಿಗೆ ಮತ್ತೊಂದು ಹಂಚಿಕೆಯು ತೋಚಿತು. ನಿರ್ಲಜ್ಜರಾದವರು ಏನು ಮಾಡಲಿಕ್ಕೂ ನಾಚದವರಾಗುತ್ತಾರೆ. ಆ ಕಾಮಾಂಧನು ತನ್ನ ನಂಬಿಗಸ್ತರಾದ ಇಬ್ಬರು ಸೇವಕರನ್ನು ಕರೆತಂದು ಆ ಉದ್ಧಟ ಸ್ತ್ರೀಯಳ ಕೈ-ಕಾಲು ಕಟ್ಟಿಸಿ ಚಲ್ಲಬೇಕೆಂದು ಯೋಚಿಸಿದನು. ಹೀಗೆ ಮಾಡುವದರಿಂದ ಆಕೆಯು ತನ್ನ ದರ್ಪಕ್ಕೆ ಅಂಜಬಹುದೆಂದು ತಿಳಿದನು. ಬಳಿಕ ಅವನು ಆ ಸೇವಕರು ಮಲಗಿದಲ್ಲಿಗೆ ಹೋಗಿ ಅವರನ್ನು ಮೆಲ್ಲಗೆ ಎಬ್ಬಿಸಿದನು; ಮತ್ತು ತಾನು ಹೇಳತಕ್ಕದ್ದನ್ನು ಗುಪ್ತವಾಗಿ ಹೇಳಿದನು.

ಸ್ತ್ರೀವಿಷಯವೆಂದರೆ ದುರ್ಜನರ ಕಿವಿಗಳು ವಿಸ್ತೃತವಾಗುವವು. ಸಜ್ಜನರು ಪಾಪಭೀರುತೆಯಿಂದ ಕಿವಿಯಮೇಲೆ ಕೈಯನ್ನಿಟ್ಟುಕೊಳ್ಳುವರು. ಗುಲಾಂಕಾದರನ ಆ ಹಸ್ತಕರು ಹೇಳಿಕೇಳಿ ಕ್ಷುದ್ರಬುದ್ಧಿಯವರಾದ್ದರಿಂದ ಅವರಿಗೆ ಆತನು ಹೇಳಿದಂತೆ ಮಾಡಲು ಹಳ್ಳೇ ಹುರುಪು ಬಂದಿತು. ಕೂಡಲೆ ಅವರು ಗುಲಾಂಕಾದರನೊಡನೆ ಚಂದ್ರಾತರುಣಿಯ ಕೋಣೆಯ

ಕಡೆಗೆ ಹೋದರು. ಗುಲಾಂ ಕಾದರನು ಅಂಜಿ ಬಾಗಿಲಹಾಕಿಕೊಂಡು ಹೋದದ್ದರಿಂದ ಆ ತರುಣಿಯು ಸ್ವಲ್ಪ ಸಮಾಧಾನವ ತಾಳಿ ಇನ್ನು ಆ ದುಷ್ಟನು ತನ್ನ ಸನಿಯಕ್ಕೆ ಬರಲಾರನೆಂದು ತಿಳಿದು ಸ್ವಸ್ಥವಾಗಿ ಮಲಗಿ ಕೊಂಡಿದ್ದಳು. ಅಷ್ಟರಲ್ಲಿ ಮತ್ತೆ ಮೂವರು ದೈತ್ಯರು ತನ್ನ ಬಳಿಗೆ ಬರಲು ಆಕೆಯು ಖತಿಗೊಂಡು ಎದ್ದು ಕುಳಿತಳು. ಮೂವರು ಗಂಡಸರು ಬಂದದ್ದನ್ನು ನೋಡಿ ಆ ತರುಣಿಯು ಸ್ವಲ್ಪ ಅಂಜಿದಳು. ಗುಲಾಂಕಾದ ರನು ತನ್ನ ಪಾರುಪತ್ಯ ಮಾಡುವದಕ್ಕಾಗಿಯೇ ಬೇರೆ ಇಬ್ಬರನ್ನು ಸಹಾ ಯಕ್ಕೆ ಕರೆತಂದಿರುವನೆಂದು ತಿಳಿದಳು. ಇನ್ನು ಕೈಕಾಲಗೆಟ್ಟರೆ ಪ್ರಯೋ ಜನವಿಲ್ಲೆಂದು ಅವಳು ಮನಸ್ಸಿನಲ್ಲಿ ಭಗವಂತನನ್ನು ಸ್ಮರಿಸುತ್ತ ಕೈಖಡ್ಗ ವನ್ನು ಗಟ್ಟಿಯಾಗಿ ಧರಿಸಿ ಒಂದು ಮೂಲೆಯಲ್ಲಿ ನಿಂತುಕೊಂಡಳು. ಎದು ರಿಗೆ ಯಾವನು ಬಂದರೂ ಅವನ ಕೈ ಕತ್ತರಿಸಿ ಚಲ್ಲಬೇಕೆಂದು ಅವಳು ನಿರ್ಧರಿಸಿದಳು.

ಗುಲಾಂ ಕಾದರನು ಮತ್ತೆ ಕೋಣೆಯ ಬಾಗಿಲ ತೆರೆದು ಸಂಗಡಿಗ ರೊಡನೆ ಒಳಸೇರಿದನು. ಕೋಣೆಯಲ್ಲಿ ದೀಪವನ್ನು ಹಚ್ಚಿದರೆ ನಮ್ಮ ಪಾಪಕೃತ್ಯವು ಎಲ್ಲರಿಗೂ ಗೊತ್ತಾಗುವದೆಂದು ಅಂಜಿ ಆ ಸಾಹಸಕ್ಕೆ ಹೋಗಲಿಲ್ಲ. ಆ ಕತ್ತಲಲ್ಲಿಯೇ ಆ ಸ್ತ್ರೀಯನ್ನು ಹಿಡಿದು ಕೈಕಾಲು ಕಟ್ಟಿ ಚಲ್ಲಬೇಕೆಂದು ಗುಲಾಂ ಕಾದರನು ಅಪ್ಪಣೆಮಾಡಿದನು. ಹೀಗೆ ಅಪ್ಪಣೆ ಮಾಡಿ ಅವನು ಕೋಣೆಯ ಬಾಗಿಲ ಬಳಿಯಲ್ಲಿಯೇ ನಿಂತುಕೊಂಡಿದ್ದನು. ಮುಂದಕ್ಕೆ ಹೆಜ್ಜೆಯಿಡುವ ಧೈರ್ಯವು ಅವನಿಗಾಗಿದ್ದಿಲ್ಲ. ಅವನ ಹಸ್ತಕ ರಲ್ಲಿ ಒಬ್ಬನು ಮುಂದರಿದು ಬಂದು ಆ ಸ್ತ್ರೀಯ ಕೈಹಿಡಿಯ ಹೋದನು. ಮೊದಲೇ ಹೊಂಚುಹಾಕಿ ನಿಂತಿದ್ದ ಆಕೆಯು ಖಡ್ಗದ ಒಂದು ಪೆಟ್ಟನ್ನು ಹಾಕಿದಳು. ಆದರೆ ಕತ್ತಲಲ್ಲಿ ಕಡತವು ತಪ್ಪಿ ಅವನ ಒಂದು ಬೆರಳಿಗೆ ಗಾಯಮಾಡಿತು ಮಾತ್ರ. ಕಡತವು ತಪ್ಪದಿದ್ದರೆ ಮುಂದೆ ಬಂದ ಆ ನರಾಧಮನ ಕೈಯು ತುಂಡಾಗದೆ ಇರುತ್ತಿರಲಿಲ್ಲ.

ಬೆರಳಿಗೆ ಖಡ್ಗದ ಪೆಟ್ಟು ತಗಲಲು ಆತನು ಎಚ್ಚತ್ತು ದೂರಸರಿದು ನಿಂತನು. ಈ ತರುಣಿಯನ್ನು ಯುಕ್ತಿಯಿಂದ ಹಿಡಿಯಬೇಕಲ್ಲದೆ ಹಾಗೇ ಇವಳು ಕೈವಶಳಾಗಳೆಂಬದು ಆತನಿಗೆ ಹೊಳೆದು ಹೋಯಿತು. ಆಗ

ಅವನು ತನ್ನ ಸಂಗಡಿಗನನ್ನು ಕುರಿತು ಯಾವ ಹಂಚಿಕೆಮಾಡಬೇಕೆಂದು ಹಂಚಿಕೆ ಹಾಕಲಾರಂಭಿಸಿದನು.

ಹೀಗೆ ಚಂದ್ರಾತರುಣಿಯನ್ನು ಮುಸುಗೆ ಕಟ್ಟುವದಕ್ಕಾಗಿ ಆ ಮೂವರೂ ಹಂಚಿಕೆ ಹಾಕುತ್ತಿರಲು ಇತ್ತ ಪಿಂಪಳಗಾಂವದ ಸೆರೆಯಾಳು ಗಳಿದ್ದ ಕೋಣೆಯಲ್ಲಿ ನಿಳೋಜಿಯು ತನ್ನ ತಂಗಿಯನ್ನು ತನ್ನ ಕೋಣೆ ಯಿಂದ ಅಗಲಿಸಿದ್ದಕ್ಕೆ ಒಂದೇ ಸವನೇ ಚಡಪಡಿಸುತ್ತಿದ್ದನು. ಗುಲಾಂ ಕಾದರನು ತನ್ನ ತಂಗಿಯ ವಿಷಯವಾಗಿ ಪಾಪಬುದ್ಧಿಯನ್ನು ತಾಳಿರುವ ನಾದ್ದರಿಂದಲೇ ಅವನು ಆಕೆಯನ್ನು ಇಲ್ಲಿಂದ ಹೊರ ಹೊರಡಿಸಿರುವ ನೆಂಬದುಅವನಿಗೆ ಮನವರಿಕೆಯಾಗಿತ್ತು. ಈ ದಿನ ರಾತ್ರಿಯಲ್ಲಿ ಆ ದುಷ್ಟನು ತನ್ನ ತಂಗಿಯ ವಿಟಂಬನೆಯನ್ನು ಮಾಡದೆ ಬಿಡನೆಂದು ಅವನು ಖಂಡಿತ ತಿಳಿದಿದ್ದನು. ಆದ್ದರಿಂದ ಆ ಸ್ವಾಭಿಮಾನಿಯು ಒಳ್ಳೇ ರೊಚ್ಚಿಗೆ ದ್ದಿದ್ದನು. ಹ್ಯಾಗಾದರೂ ಮಾಡಿ ಸೆರೆಯಿಂದ ಮುಕ್ತನಾಗಿ ಆ ನೀಚನ ಪಾರುಪತ್ಯ ಮಾಡಬೇಕೆಂದು ಅವನು ನಿರ್ಧರಿಸಿದ್ದನು. ಹೊತ್ತು ಮುಣು ಗಿದ ಹಾಗೆ ಅವನ ರೊಚ್ಚು ಹೆಚ್ಚಾಗುತ್ತ ಹೋಯಿತು. ಮನುಷ್ಯನಿಗೆ ಒಳ್ಳೇ ಸಿಟ್ಟಿನ ವೇಳೆಯಲ್ಲಿ ಶಕ್ತಿಯು ವೃದ್ಧಿಂಗತವಾಗುತ್ತದೆ. ಅವನಿಗೆ ತಾನು ಯಾರೆಂಬ ಪ್ರಜ್ಞೆಯೇ ತಪ್ಪುತ್ತದೆ. ನಿಳೋಜಿಯು ತನ್ನ ತಂಗಿಯ ವಿಟಂಬನೆಯ ಕಲ್ಪನೆಯಿಂದ ಅತ್ಯಂತ ಸಂತಪ್ತನಾಗಿದ್ದನು. ಅವನು ಆಗಿನ ಕಾಲದಲ್ಲಿ ಜೀವದ ಹಂಗನ್ನು ಕೂಡಾ ಹಿಡಿದಿರಲಿಲ್ಲ. ಜಾತ್ಯಾ ವೀರನಾದ ಅವನು ಇಂಥ ಪ್ರಸಂಗದಲ್ಲಿ ಹೀಗೆ ವಿಲಕ್ಷಣ ಆವೇಶವನ್ನು ತಾಳಿದ್ದು ಅಸ್ವಾಭಾವಿಕವಲ್ಲ. ರಾತ್ರಿಯಾದ ಬಳಿಕ ಕೈಬೇಡಿಯನ್ನು ಮುರಿಯಲು ಪ್ರಯತ್ನ ನಡಿಸಿದನು. ಅವನಿಗೆ ಅದರಲ್ಲಿ ಕೆಲಹೊತ್ತಿನ ಮೇಲೆ ಯಶಸ್ಸು ಸಿಕ್ಕಿತು. ಬೇಡಿಯು ಎರಡು ತುಂಡಾಗಿ ಅವನ ಕೈಗಳು ತಂಗಿಯ ಸಹಾ ಯಕ್ಕೆ ಮುಕ್ತವಾದವು. ಕೈಬೇಡಿಯನ್ನು ಮುರಿದೊಡನೆಯೇ ಕೋಣೆಯ ಕಟಾಂಜನವನ್ನು ಮುರಿಯುವ ಚಿಂತೆಯು ಅವನೆದುರಿಗೆ ನಿಂತುಕೊಂಡಿತು. ಅಷ್ಟರಲ್ಲಿ ಜೇಲಖಾನೆಯ ಅವಾರದಲ್ಲಿ ಜನರ ಸುಳಿದಾಟದ ಸುಳವು ಹತ್ತಿ ದ್ದರಿಂದ ಆ ನರಾಧಮನು ತನ್ನ ತಂಗಿಯ ವಿಟಂಬನೆಗಾಗಿ ಹೊರಟಿರು ವನೋ ಎಂಬ ಸಂಶಯವು ಅವನಿಗೆ ಬಂದಿತು. ಆದ್ದರಿಂದ ಅವನು ಅತ್ಯಂತ ರೊಚ್ಚಿನಿಂದ ಕಟಾಂಜನದ ಗೆಜಗಳನ್ನು ಮುರಿಯುವ ಸಾಹಸಕ್ಕೆ ತೊಡಗಿದನು.

ನಿಳೋಜಿಯು ಇದ್ದ ಕೋಣೆಗೆ ಸುತ್ತಲೂ ಭದ್ರವಾದ ಗೋಡೆಯಿದ್ದು, ಬಾಗಿಲಕ್ಕೆ ಮಾತ್ರ ಕಬ್ಬಿಣದ ಗಜಗಳನ್ನು ಹಚ್ಚಿದ್ದರು. ಅವು ಬಹು ಭದ್ರವಾಗಿದ್ದವು. ಅವನ್ನೇ ಮುರಿದು ಹೊರಹೊರಡುವದಕ್ಕೆ ನಿಳೋಜಿಯ ಪ್ರಯತ್ನವು. ಆತನು ಬಲಶಾಲಿಯಾಗಿದ್ದನು. ಅವನಷ್ಟು ಬಲವಂತರು ಪಿಂಪಳಗಾಂವದ ಕೈದಿಗಳಲ್ಲಿ ಯಾರೂ ಇರಲಿಲ್ಲ. ಆದ್ದರಿಂದ ಆ ಸ್ವಾಭಿಮಾನಿಯು ತನ್ನ ನೆರವಿಗೆ ಯಾರನ್ನೂ ಕರೆಯುವ ಗೊಡವೆಗೆ ಹೋಗಲಿಲ್ಲ. ಒಂದುವೇಳೆ ನಾಕೇಳು ನೀಕೇಳು ಎಂದು ಸುದ್ದಿಯಾದರೆ ಗದ್ದಲವಾಗಿ ಕಾವಲುಗಾರರು ಎಚ್ಚತ್ತು ಎಲ್ಲಿ ಕೆಲಸ ಕೆಡುವದೋ ಎಂಬ ಯೋಚನೆ ಬೇರೆ. ಆದ್ದರಿಂದ ಅವನು ಒಬ್ಬನೇ ಆ ಕೆಲಸಕ್ಕೆ ಅಣಿಯಾದನು. ಮೊದಲು ಅವನು ಒಂದು ಗಜವನ್ನು ಹಿಡಿದು ಕಸುವಿನಿಂದ ಜಗ್ಗಿದನು. ಆತನ ಸಾಮರ್ಥ್ಯಕ್ಕೆ ಅದು ಸ್ವಲ್ಪಮಟ್ಟಿಗೆ ಮಣಿಯಿತು ಮಾತ್ರ; ಗಜವು ಮಣಿದದ್ದರಿಂದ ನಿಳೋಜಿಗೆ ಒಳ್ಳೇ ಹುರುಪು ಬಂದಿತು. ಅವನು ನಾಲ್ಕೆಂಟುಸಾರೆ ಒಳ್ಳೇ ಕಸುವಿನಿಂದ ಜಗ್ಗಿ ಜಗ್ಗಿ ಆ ಗಜವನ್ನು ಮುರಿದು ಚಲ್ಲಿದನು. ಇನ್ನೊಂದು ಗಜವನ್ನು ಮುರಿದರೆ ಅವನಿಗೆ ಆ ಕಟಾಂಜನದೊಳಗಿಂದ ಪಾರಾಗಲಿಕ್ಕೆ ಮಾರ್ಗವಾಗುತ್ತಿತ್ತು. ಅಷ್ಟರಲ್ಲಿ ಜೇಲಖಾನೆಯ ಒಂದು ಮೂಲೆಯಲ್ಲಿ ಆರ್ತಸ್ವರವು ಕೇಳಬಂದಿತು. ಅವನ ಎದೆಯು ಧಸ್ಸೆಂದಿತು. ಅವನು ಆ ಆರ್ತಸ್ವರವನ್ನು ಲಾಲಿಸಿ ಕೇಳಿದನು. ಅದು ಸ್ತ್ರೀಕಂಠದಿಂದ ಹೊರಡುವ ಸ್ವರವಾಗಿದ್ದು, ತನ್ನ ತಂಗಿಯದೇ ಇರಬಹುದೆಂಬ ನಂಬಿಗೆಯಾಯಿತು. ಆಗ ಅವನ ಮೈಮೇಲಿನ ಪ್ರಜ್ಞೆಯೇ ತಪ್ಪಿತು. ಮೈಯಲ್ಲಿ ಕಸುವು ಎಲ್ಲಿತ್ತೋ ಏನೋ ಒಮ್ಮೆ ಗಜಕ್ಕೆ ಕೈನೀಡಿ ರಭಸದಿಂದ ಕೊಡವಿದನು. ಒಂದೇಸರತಿಗೆ ಗಜವು ಮುರಿದು ಕೈಯಲ್ಲಿ ಬಂದಿತು. ಬಳಿಕ ಅವನು ಆ ಆರ್ತಸ್ವರವು ಕೇಳಬರುವಲ್ಲಿಗೆ ವಾಯುವೇಗದಿಂದ ಸಾಗಿದನು.

ಇತ್ತ ಚಂದ್ರಾತರುಣಿಯನ್ನು ಆ ಮೂವರೂ ಕೂಡಿ ನೆಲಕ್ಕೆ ಕೆಡವಿದ್ದರು. ಒಬ್ಬನು ಆಕೆಯ ಎರಡೂ ಕೈಗಳನ್ನು ಗಟ್ಟಿಯಾಗಿ ಹಿಡಿದಿದ್ದನು. ಇನ್ನೊಬ್ಬನು ಕಾಲುಗಳನ್ನು ಹಿಡಿದಿದ್ದನು. ಅಂಜಗುಳಿಯಾದ ಗುಲಾಂಕಾದರನು ಒಂದು ಹಗ್ಗದಿಂದ ಆಕೆಯ ಕಾಲುಗಳನ್ನು ಕಟ್ಟುವ ಪ್ರಯತ್ನ ನಡಿಸಿದ್ದನು. ಅಷ್ಟರಲ್ಲಿ ನಿಳೋಜಿಯು ಅಲ್ಲಿಗೆಬಂದು ಮೊದಲು ಕಾಮಾಂಧ

ನಾದ ಗುಲಾಂಕಾದರನ ಬೆನ್ನ ಮೇಲೆ ಒಳ್ಳೇ ಕಸುವಿನಿಂದ ಗುದ್ದಿದನು. ಆ ಹೊಡತವನ್ನು ತಾಳಲಾರದೆ ಅವನು ಸತ್ತೆನು ಸತ್ತೆನು ಎಂದು ಚೀರಿ ಕೈಯೊಳಗಿನ ಹಗ್ಗವನ್ನು ಚಲ್ಲಿ ನೆಲದ ಮೇಲೆ ಹೊರಳಾಡಲಾರಂಭಿಸಿದನು. ಬಳಿಕ ನಿಳೋಜಿಯು ಉಳಿದಿಬ್ಬರ ಸಮಾಚಾರಕ್ಕಾಗಿ ತೊಡಗಿದನು. ಆ ಕಾವಲುಗಾರರಿಬ್ಬರೂ ಸ್ವಲ್ಪ ಬಲಿಷ್ಠರಿದ್ದರು. ಗುಲಾಂಕಾದರನಷ್ಟು ಅಳ್ಳೆದೆಯವರಿದ್ದಿಲ್ಲ. ಅವರು ನಿಳೋಜಿಯ ಮೈಮೇಲೇರಿ ಬಂದರು. ಇತ್ತ ಚಂದ್ರಾತರುಣಿಯು ಸಾವರಿಸಿಕೊಂಡೆದ್ದು ಆಯುತಸಮಯಕ್ಕೆ ಒದಗಿ, ಯಾವ ಪುಣ್ಯವಂತನು ತನ್ನ ಮಾನವನ್ನುಳಿಸಿದನು? ಎಂದು ನೋಡ ಲಾರಂಭಿಸಿದಳು. ಅಲ್ಲಿ ಕಗ್ಗತ್ತಲು ಬಿದ್ದಿದ್ದರೂ ನಿಳೋಜಿಯು ಉಚ್ಚರಿಸಿದ ಒಂದೆರಡು ಶಬ್ದಗಳಿಂದ ದನಿಯು ಗುರುತು ಹಿಡಿದು ಅಣ್ಣಾ ಎಂದು ಒದರಿ ದಳು. ಆಗ ನಿಳೋಜಿಯು ತಂಗೀ ಅಂಜಬೇಡ ಎಂಬವಿಷ್ಟೇ ಶಬ್ದಗಳ ನ್ನು ನುಡಿದು ತನ್ನೊಡನೆ ಬಡಿದಾಡ ಬಂದ ಆ ಕಾವಲುಗಾರರಲ್ಲಿ ಒಬ್ಬನಿಗೆ ಒಂದು ಏಟು ಕೊಟ್ಟನು. ಆ ಹೊಡತದಿಂದ ಅವನ ಮೊಳಕೈ ಮುರಿದು ಹೋಯಿತು. ಅವನು ಭಯಂಕರವಾಗಿ ಒದರುತ್ತ ಅಲ್ಲಿಂದ ಓಡಿ ಹೋ ದನು. ಚಂದ್ರಾತರುಣಿಯು ತನ್ನ ಕೈಖಡ್ಗವನ್ನು ಹುಡುಕಿ ತಕ್ಕೊಂಡು ತನ್ನ ಅಣ್ಣನಿಗೆ ನೆರವಾಗ ಬೇಕೆನ್ನುವಷ್ಟರಲ್ಲಿ ಆ ಮೂರನೆಯವನೂ ಪಲಾ ಯನ ಹೇಳಿಸಿದನು. ಗುಲಾಂಕಾದರನಂತೂ ಯಾವಾಗೋ ಓಡಿಹೋಗಿ ಬೇರೆ ಕಾವಲುಗಾರರನ್ನು ಎಬ್ಬಿಸುವ ಎತ್ತುಗಡೆ ನಡಿಸಿದ್ದನು.

ಹೀಗೆ ನಿಳೋಜಿಯು ತಂಗಿಯ ಮೇಲೆ ಬಂದಿದ್ದ ಮಹಾ ಸಂಕಟ ವನ್ನು ನಿವಾರಣ ಮಾಡಿ ಆಕೆಯೊಡನೆ ಆ ಕೋಣೆಯಿಂದ ಹೊರಬಿದ್ದು, ಹೆಬ್ಬಾಗಿಲ ಬಳಿಗೆ ಬಂದನು. ಬಾಗಿಲವು ಬಂದು ಮಾಡಲ್ಪಟ್ಟಿತ್ತು. ಅಲ್ಲಿ ಯೇ ಮೂರು ನಾಲ್ಕು ಜನ ಕಾವಲುಗಾರರು ಮಲಗಿದ್ದು ಗುಲಾಂಕಾದ ರನು ಅವರನ್ನು ಎಬ್ಬಿಸುತ್ತಿದ್ದನು. ನಿಳೋಜಿಯು ಅಲ್ಲಿಗೆ ಬರಲು ಆ ಪುಕ್ಕ ಕಾವಲುಗಾರನು ಅಂಜಿ ಬೇರೆ ಕಡೆಗೆ ಓಡಿದನು. ನಿಳೋಜಿಯು ನಿರಾತಂಕವಾಗಿ ಹೆಬ್ಬಾಗಿಲದ ಕಿರಿಬಾಗಿಲ ತೆರೆದು ತಂಗಿಯೊಡನೆ ಆ ಜೇಲಖಾನೆಯಿಂದ ಹೊರನುಗ್ಗಿದನು.

---

# (೯) ಹೊಸಸಂಕಟ!



ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ನಿಳೋಜಿಯು ಅಂದಿನ ರಾತ್ರಿಯಲ್ಲಿ ಕೈದಖಾನೆಯಲ್ಲಿ ಕ್ಷಾತ್ರತೇಜವನ್ನು ವ್ಯಕ್ತಗೊಳಿಸಿ ತಂಗಿಯೊಡನೆ ಹೊರಬಿದ್ದವನು ಅಲ್ಲಿಂದ ಕೆಲವು ಅಂತರದ ವರೆಗೆ ಬಂದ ಬಳಿಕ ಮುಂದೆ ಎಲ್ಲಿಗೆ ಹೋಗಬೇಕು? ಎಂಬ ವಿಚಾರಗಳು ಅವನೆದುರಿಗೆ ನಿಂತುಕೊಂಡವು. ಆವನು ಒಂದು ಗಿಡದಡಿಯಲ್ಲಿ ಕುಳಿತುಕೊಂಡು ಯೋಚಿಸಲಾರಂಭಿಸಿದನು. ದುರ್ಗವು ಅವನಿಗೆ ಕೇವಲ ಅಪರಿಚಿತವಾದದ್ದು, ಅದರಲ್ಲೂ ಕಗ್ಗತ್ತಲೆಯು; ಹೆಬ್ಬಾಗಿಲದ ಹೊರತು ಎಲ್ಲಿಯೂ ದುರ್ಗದಿಂದ ಹೊರಗೆ ಹೋಗಲು ಮಾರ್ಗವಿಲ್ಲೆಂಬದು ಅವನಿಗೆ ಗೊತ್ತಿತ್ತು. ಜೇಲಖಾನೆಯಿಂದ ಪಾರಾಗಿ ಬಂದರೂ ಮುಂದೆ ಪಾರಾಗುವದಕ್ಕೆ ಮಾರ್ಗವಿಲ್ಲದ್ದರಿಂದ ಅವನು ಒಳ್ಳೇ ಪೇಚಿಗೆಬಿದ್ದನು. ಬೆಳಗಾದಕೂಡಲೆ ಫಿರಂಗೀಅಧಿಕಾರಿಗಳು ತನ್ನನ್ನು ಕೈದು ಮಾಡಿ ಕಾವಲುಗಾರರನ್ನು ಹೊಡೆದು ಜೇಲಖಾನೆಯನ್ನು ಮುರಿದು ಓಡಿ ಬಂದದ್ದಕ್ಕೆ ತನಗೆ ಚಿತ್ರಹಿಂಸೆ ಕೊಡುವರೆಂಬ ಕಲ್ಪನೆಯು ಅವನ ಕಣ್ಣ ಮುಂದೆ ಕಟ್ಟಿತು. ತನ್ನ ಅವಸ್ಥೆಯು ಹ್ಯಾಗಾದರೂ ಚಿಂತೆಯಿಲ್ಲ. ತನ್ನ ತಂಗಿಯ ವಿಟಂಬನೆಯಾಗಬಾರದೆಂದು ಅವನು ಬಯಸುತ್ತಿದ್ದನು. ಇಂಥ ನಿರಾಧಾರ ಸ್ಥಿತಿಯಲ್ಲಿ ನಿಂತುಕೊಂಡು ಪುನಃ ಶತ್ರುಗಳ ಕೈಯಲ್ಲಿ ಸಿಕ್ಕು ತಂಗಿಯ ವಿಟಂಬನೆ ಮಾಡಿಸುವದಕ್ಕಿಂತ ಕೈ ಖಡ್ಗದಿಂದ ಈಗಲೇ ಆಕೆಯ ಶಿರಚ್ಛೇದನ ಮಾಡಿ ಬಿಡಬೇಕೆಂಬ ವಿಚಾರವು ಅವನಲ್ಲುಂಟಾಯಿತು. ಕ್ಷಾತ್ರವೃತ್ತಿಯ ಜನರು ಯಾವದೊಂದು ವಿಷಯವನ್ನು ಬಹಳ ಹೊತ್ತಿನ ವರೆಗೆ ಯೋಚಿಸುತ್ತ ಕೂಡ್ರುವದಿಲ್ಲ. ಒಂದು ಕಡತ ಎರಡು ತುಂಡು ಎಂಬಂತೆ ಅವರ ವಿಚಾರಸರಣಿಯಿರುತ್ತದೆ. ಆದರೆ ಕೈಲಾಗದವರು ಮಾತ್ರ ಪಿಷ್ಟಪೇಷಣದಂತೆ ಸುಮ್ಮನೆ ವಿಚಾರದಲ್ಲಿ ಕೊಳೆಯುತ್ತ ಬೀಳುವರು. ನಿಳೋಜಿಯು ಕೈಲಾಗದವನಿದ್ದಿಲ್ಲ. ಅವನಲ್ಲಿ ಮೇಲಾದ ಕ್ಷಾತ್ರವೃತ್ತಿಯಿತ್ತು. ತಾನು ಜೀವದಿಂದಿರುವಾಗ ತನ್ನ ತಂಗಿಯ ವಿಟಂಬನೆಯಾಗುವದೆಂದರೆ ಇದಕ್ಕೂ ಹೆಚ್ಚಿನ ಹೇಡಿತನವು ಇನ್ನಾವುದೂ ಇಲ್ಲವೆಂದು ಅವನು ಖಂಡಿತವಾಗಿ ತಿಳಿದಿದ್ದನು. ಅದ್ದರಿಂದ ಅವನು

ಚಂದ್ರಾತ್ರತರುಣಿಯನ್ನು ಕುರಿತು—ನಿನಗೆ ಜೀವಬೇಕೋ ಮರ್ಯಾದೆಯು ಬೇಕೋ ಎಂದು ಪ್ರಶ್ನೆ ಮಾಡಿದನು. ಕೂಡಲೆ ಆ ವೀರಸ್ತ್ರೀಯು—ಅಣ್ಣಾ ಇದನ್ನೇನು ಕೇಳುವೆ; ಮರ್ಯಾದೆಗಿಂತಲೂ ಅಧಿಕ ಪ್ರಿಯವಾದದ್ದು ಇನ್ನಾವುದಿರುವದು? ಎಂದು ಉತ್ತರ ಕೊಟ್ಟಳು. ನಿಳೋಜಿಗೆ ತುಂಬಾ ಸಮಾಧಾನವಾಯಿತು. ಅವನು ತನ್ನ ಮನಸ್ಸಿನಲ್ಲುಂಟಾದ ವಿಚಾರವನ್ನು ತಂಗಿಗೆ ತಿಳಿಸಿದನು. ಅಣ್ಣನ ವಿಚಾರಕ್ಕೆ ಆಕೆಯು ಆನಂದದಿಂದ ಒಪ್ಪಿಕೊಂಡಳು.

ತಂಗಿಯು ಒಪ್ಪಿಕೊಂಡದ್ದೊಂದೇ ತಡ; ನಿಳೋಜಿಯು ತಂಗಿಯ ಬಳಿಯಲ್ಲಿದ್ದ ಪುಟ್ಟ ಖಡ್ಗವನ್ನು ತಕ್ಕೊಂಡು ಅದಕ್ಕೆ ಆಕೆಯ ಶಿರಸ್ಸನ್ನು ಆಹುತಿಕೊಡಬೇಕೆಂದು ಕೈ ಎತ್ತಿದನು. ಇನ್ನು ಅವನು ಆ ಖಡ್ಗವನ್ನು ಆಕೆಯ ಕೋಮಲವಾದ ಶಿರಸ್ಸಿನ ಮೇಲೆ ಒಳ್ಳೇ ಕಸುವಿನಿಂದ ಹೊಡೆಯ ತಕ್ಕವನು. ಅಷ್ಟರಲ್ಲಿ ಹಿಂದಿನಿಂದ ಯಾರೋ ಆತನ ಕೈ ಹಿಡಿದರು. ನಿಳೋಜಿಯು ಬೆಚ್ಚಿಬಿದ್ದು ತಿರುಗಿ ನೋಡಿದನು. ಕತ್ತಲೆಯ ಸಮಯ; ಒಬ್ಬರ ಮೋರೆ ಮತ್ತೊಬ್ಬರಿಗೆ ಸ್ಪಷ್ಟವಾಗಿ ಕಾಣಿಸುತ್ತಿರಲಿಲ್ಲ. ಆದ್ದರಿಂದ ಆತನಿಗೆ ಆ ವ್ಯಕ್ತಿಯ ಗುರುತು ಹತ್ತಲಿಲ್ಲ. ತನ್ನ ಕೈ ಹಿಡಿದವನು ಯಾವನೋ ಒಬ್ಬ ಪುರುಷವ್ಯಕ್ತಿ ಇರುವನೆಂಬದನ್ನು ಮಾತ್ರ ನಿಶ್ಚಯಿಸಿಕೊಂಡನು. ಆ ನಿಶ್ಚಯದ ಜೊತೆಗೆ ಅವನಲ್ಲಿ ಆ ವ್ಯಕ್ತಿಯ ವಿಷಯವಾಗಿ ತ್ವೇಷವೂ ಉತ್ಪನ್ನವಾಯಿತು. ಯಾಕಂದರೆ ಇಂಥ ಅಪರರಾತ್ರಿಯಲ್ಲಿ ತಿರುಗಾಡುವ ಈತನು ಫಿರಂಗೀಜನರ ಗಸ್ತಿಯವನಾಗಿರಬೇಕು. ಇವನು ನಮ್ಮನ್ನು ಹಿಡಿದು ಫಿರಂಗಿಗಳಿಗೆ ಒಪ್ಪಿಸಬಹುದು. ಆದ್ದರಿಂದ ಇವನನ್ನು ಹೀಗೆಯೇ ಬಿಡಕೂಡದು. ಇವನ ಸಮಾಚಾರ ತಕ್ಕೊಂಡೇ ತೀರಬೇಕೆಂಬ ಭಾವನೆ ಹುಟ್ಟಿತು. ಈ ಭಾವನೆಯಿಂದ ಅವನ ತ್ವೇಷವು ಹೆಚ್ಚಲು ಒಳ್ಳೇ ಕಸುವಿನಿಂದ ಅವನಿಂದ ಕೈಕೊಸರಿಕೊಂಡು ಅವನ ಮೇಲೆ ಖಡ್ಗಪ್ರಯೋಗ ಮಾಡಲು ಯತ್ನಿಸಿದನು. ಆಗ ಅವನ ಹವಣಿಕೆ ತಿಳಿದು ಕೈಹಿಡಿದ ಆ ವ್ಯಕ್ತಿಯು ಗಹಗಹಿಸಿ ನಕ್ಕು ಯಾಕೆ ನಿಳೋಜೀ, ನನ್ನ ಗುರುತು ಹತ್ತಲಿಲ್ಲೇನು? ಎಂದು ನುಡಿದನು. ನಿಳೋಜಿಯು ದನಿಯ ಗುರುತು ಹಿಡಿದು—ಎಲಾ ಬಾಳಾಜೀ ಇಲ್ಲಿ ಹ್ಯಾಗೆ ಬಂದೆ? ಎನಲು ಇಲ್ಲಿ ಮಾತಾಡುತ್ತ ನಿಲ್ಲುವ ಸಮಯವಿದಲ್ಲ. ನಡೆ ನಿಮ್ಮನ್ನು ಮೊದಲು

ಗುಪ್ತವಾದ ಸ್ಥಳಕ್ಕೆ ಕರೆದೊಯ್ಯುತ್ತೇನೆ ಆ ಮೇಲೆ ನನ್ನ ಸಂಗತಿ ಹೇಳಿ ನಿನ್ನ ಸಂಗತಿ ತಿಳಿದುಕೊಳ್ಳುವೆನು. ಎಂದು ನುಡಿದು ಅವನೊಡನೆ ಒಂದು ಗುಪ್ತ ಸ್ಥಳಕ್ಕೆ ನಡೆದನು.

ಪ್ರಿಯವಾಚಕರೇ, ನಿಳೋಜಿಗೆ ಬಾಳಾಜಿಯ ಆಕಸ್ಮಿಕ ಭೆಟ್ಟಿಯಿಂದ ಅದೂ ಮಹತ್ವದ ಪ್ರಸಂಗದಲ್ಲಾದ ಭೆಟ್ಟಿಯಿಂದ ಆಶ್ಚರ್ಯವಾದಂತೆ ನಿಮಗೂ ಆಶ್ಚರ್ಯವಾಗಿರಬಹುದು. ಆದರೆ ನಿಳೋಜಿಯಂತೆ ನೀವು ಆಶ್ಚರ್ಯ ಪಡುವ ಕಾರಣವಿಲ್ಲ. ಯಾಕಂದರೆ ಬಾಳಾಜಿಯು ಗುಪ್ತಹೇರನಾಗಿ ವಸಯಿದುರ್ಗವನ್ನು ಪ್ರವೇಶಿಸಿದ್ದನೆಂಬದು ನಿಮಗೆ ಗೊತ್ತಿದ್ದ ಸಂಗತಿಯಾಗಿರುತ್ತವೆ. ಇರಲಿ. ಈಗ ಬಾಳಾಜಿಯು ಗುಪ್ತಹೇರನಾಗಿ ತಮ್ಮ ಸ್ವಾಮಿಕಾರ್ಯವನ್ನು ಸಾಧಿಸುವದಕ್ಕಾಗಿ ಒಬ್ಬ ಫೋರ್ತುಗೀಜ ಅಧಿಕಾರಿಯಲ್ಲಿ ನೌಕರಿಯನ್ನು ಹಿಡಿದಿದ್ದನು. ಅವನ ಕಡೆಗೆ ಇನ್ನೂ ಮಹತ್ವದ ಕೆಲಸವನ್ನು ಒಪ್ಪಿಸಿದ್ದಿಲ್ಲ. ಅವನು ಅವರಲ್ಲಿಯೇ ಯಾವಾಗಲೂ ಇರುತ್ತಿದ್ದನು. ಈ ದಿನ ರಾತ್ರಿಯಲ್ಲಿ ಸದಾಶಿವ ಹಾಗು ರಾಘೋಬನ ಭೆಟ್ಟಿಯಾಗುವದಕ್ಕಾಗಿ ಗುಪ್ತಸ್ಥಳಕ್ಕೆ ಹೊರಟಿದ್ದನು. ಸದಾಶಿವ ರಾಘೋಬ ಇವರೂ ಒಬ್ಬೊಬ್ಬ ಫಿರಂಗೀ ಅಧಿಕಾರಿಗಳಲ್ಲಿ ನೌಕರಿಯನ್ನು ಹಿಡಿದಿದ್ದರು. ಆದರೆ ಎರಡೆರಡು ಮೂರು ಮೂರು ದಿನಕ್ಕೆ ರಾತ್ರಿಯಲ್ಲಿ ಇಂಥ ಸ್ಥಳದಲ್ಲಿ ಎಲ್ಲರೂ ಒಟ್ಟುಗೂಡಬೇಕೆಂದು ಅವರು ಸಂಜ್ಞೆ ಮಾಡಿಕೊಂಡಿದ್ದರು. ಆ ಪ್ರಕಾರ ಬಾಳಾಜಿಯು ಈ ದಿನ ಅವರ ಭೆಟ್ಟಿಗೆ ಹೋಗುವ ಸರತಿಯೆಂದು ತಿಳಿದಿದ್ದನು

ಹೀಗೆ ಅವನು ಹೊರಟಿರಲು ಮಾರ್ಗದಲ್ಲಿ ಇಬ್ಬರು ಮಾತಾಡುತ್ತ ಕುಳಿತದ್ದು ಗೊತ್ತಾಯಿತು. ಕತ್ತಲಲ್ಲಿ ಕುಳಿತವರು ಇಂಥವರೇ ಎಂಬದು ಅವನಿಗೆ ಗೊತ್ತಾಗದ್ದರಿಂದ ಕಳವಿನಿಂದ ಹೊರಟ ತಾನು ಬೇರೊಬ್ಬರ ಕೈಗೆ ಸಿಗಬಾರದೆಂದು ದೂರದಲ್ಲಿಯೇ ನಿಂತುಕೊಂಡನು. ಆದರೆ ಅವರಿಬ್ಬರ ಮಾತುಗಳು ಅವನಿಗೆ ಕೇಳಿಸುತ್ತಿದ್ದದರಿಂದ ಅವನು ಅವನ್ನು ಕೇಳುತ್ತ ನಿಂತುಕೊಂಡನು. ಅವರ ಮಾತು ಕೇಳಿ ಕೇಳಿದಂತೆ ಕುಳಿತ ವ್ಯಕ್ತಿಗಳು ಬೇರೆ ಯಾರೂ ಇರದೆ ತಮ್ಮ ಗ್ರಾಮದ ನಿಳೋಜಿ-ಹಾಗು ಚಂದ್ರಾ ತರುಣಿ ಇವರಿಬ್ಬರಿರುವರೆಂದು ತಿಳಿಯಿತು. ಸಂಭಾಷಣದ ಅಂತ್ಯದಲ್ಲಿ ನಿಳೋಜಿಯು ಚಂದ್ರೆಯ ಶಿರಚ್ಛೇದ ಮಾಡುವನೆಂಬದೂ ಗೊತ್ತಾಯಿತು.

ಆದರೆ ಯಾಕೆ ಶಿರಚ್ಛೇದನ ಮಾಡುವನೆಂಬದರ ಕಾರಣವು ಅವನಿಗೆ ಗೊತ್ತಾಗಲಿಲ್ಲ. ಯಾಕಂದರೆ ಅವರ ಭಾಷಣಗಳು ಕೇವಲ ಸಂಧಿಗ್ಧವಾಗಿದ್ದವು. ಆದ್ದರಿಂದ ಬಾಳಾಜಿಯು ಗೊಂದಲದಲ್ಲಿ ಬಿದ್ದು, ಏನೇ ಇರಲಿ, ಈ ಕಾಲಕ್ಕೆ ಆ ತರುಣಿಯು ಕೊಲೆ ಮಾಡಗೊಡಬಾರದೆಂದು ಮೆಲ್ಲನೆ ಹೋಗಿ ಮೇಲೆ ಹೇಳಿದಂತೆ ಆಯುತ ಸಮಯಕ್ಕೆ ಆತನ ಕೈ ಹಿಡಿದನು. ಇರಲಿ.

ಬಾಳಾಜಿಯು ಗುಪ್ತ ಸ್ಥಳಕ್ಕೆ ಹೋದನು. ಆದರೆ ಅಲ್ಲಿಗೆ ಇನ್ನೂ ಯಾರೂ ಬಂದಿದ್ದಿಲ್ಲ. ಈಗ ಬರಬಹುದೆಂದು ನಿಳೋಜಿ-ಚಂದ್ರಾತರುಣಿಯರೊಡನೆ ಮಾತಾಡುತ್ತ ಕುಳಿತುಕೊಂಡನು. ಆಗ ನಿಳೋಜಿಯು ತನ್ನ ಸಂಗತಿಯನ್ನೆಲ್ಲ ಹೇಳಿದನು. ಆಗ ಬಾಳಾಜಿಗೆ ನಿಳೋಜಿಯು ತಂಗಿಯ ಕೊಲೆ ಯಾಕೆ ಮಾಡುತ್ತಿದ್ದನೆಂಬದು ಗೊತ್ತಾಯಿತು. ಬಳಿಕ ಅವನು— ನಿಳೋಜೀ, ನೀನು ಚಂದ್ರಾತರುಣಿಯ ಕೊಲೆಮಾಡಿದ್ದರೆ ಬಹಳ ಅನರ್ಥವಾಗುತ್ತಿತ್ತು. ಈಕೆಯು ಆಯುಸ್ಸೂತ್ರವು ಗಟ್ಟಿಮುಟ್ಟಿಯಾಗಿರುವದೆಂತಲೇ ನಾನು ಆಯುತಸಮಯಕ್ಕೆ ಬಂದು ಕೊಲೆಯ ಅನರ್ಥವನ್ನು ತಪ್ಪಿಸಿದೆನು. ಇನ್ನು ಮುಂದೆ ನೀನು ಅಂಜಬೇಡ; ಈ ಸ್ಥಳವು ಬಹು ಗುಪ್ತವಾದದ್ದು; ಇಲ್ಲಿ ನೀನು ಈಕೆಯೊಡನೆ ಮೂರು ನಾಲ್ಕು ದಿನಕಾಲ ಕಳೆಯ ಬಹುದು. ಅಷ್ಟರಲ್ಲಿ ದೇಶಾಂತರದಿಂದ ನಿನ್ನನ್ನೂ ಈಕೆಯನ್ನೂ ಪಾರು ಮಾಡುವೆವು. ನಿಮ್ಮಿಬ್ಬರ ಬಿಡುಗಡೆಯ ವಿಷಯವಾಗಿ ಸೂರ್ಯಾಜಿರಾಯರಿಗೆ ತುಂಬಾ ವ್ಯಸನವುಂಟಾಗಿದೆ. ಮನೆತನಕ್ಕೆ ಯಾವ ಬಗೆಯ ಕುಂದೂ ಬರಬಾರದೆಂದು ಅವರು ಹಗಲಿರುಳೂ ಚಿಂತಿಸುತ್ತಾರೆ. ಎಂದು ನುಡಿದು ತಾವು ಇಲ್ಲಿ ಯಾರು ಯಾರು ಇರುತ್ತೇವೆಂಬ ಎಲ್ಲ ಸಂಗತಿಯನ್ನು ಹೇಳಿದನು. ಆತನ ಮಾತು ಕೇಳಿ ನಿಳೋಜಿಗೂ ಚಂದ್ರಾತರುಣಿಗೂ ಒಂದು ಬಗೆಯಿಂದ ಸಮಾಧಾನವಾಯಿತು. ಆದರೆ ತಮ್ಮ ವಿಷಯವಾಗಿ ಸೂರ್ಯಾಜಿಯು ವ್ಯಸನ ಪಡುತ್ತಿರುವನೆಂಬದನ್ನು ಕೇಳಿ ಅವರಿಗೆ ಕಿಂಚಿತ್ ಅಸಮಾಧಾನವಾಯಿತು.

ಈಮೇರೆಗೆ ಅವರಲ್ಲಿ ಸಂಭಾಷಣಗಳು ನಡೆದಿರಲು, ಉಷಃಕಾಲವು ಸಮೀಪಿಸಿತು. ಸದಾಶಿವನಾಗಲಿ, ರಾಘೋಬನಾಗಲಿ ಅಲ್ಲಿಗೆ ಬರಲಿಲ್ಲ. ಅವರು ಬರುವ ಸರ್ರತ್ತಿಯು ಆ ದಿವಸ ಇರದ್ದರಿಂದ ಅವರಿಗೆ ಬರಲಿಕ್ಕೆ

ಕಾರಣ ಬೀಳಲಿಲ್ಲ. ಆದರೆ ಬಾಳಾಜಿಯೇ ವಿಸ್ಮೃತಿಯಿಂದ ಆ ದಿವಸ ಅಲ್ಲಿಗೆ ಬಂದಿದ್ದನು. ಅವನಿಗೆ ಹೀಗೆ ವಿಸ್ಮೃತಿಯಾದದ್ದು, ಚಂದ್ರಾತರುಣಿಯ ಪ್ರಾಣರಕ್ಷಣೆಗೆ ಕಾರಣವಾಯಿತು. ಇರಲಿ. ಬಾಳಾಜಿಯು ದುರ್ಗದಿಂದ ಪಾರಾಗಿ ಹೋಗುವ ಪ್ರಸಂಗ ಸಾಧಿಸುವವರೆಗೆ ಆ ಗುಪ್ತಸ್ಥಳದಲ್ಲಿಯೇ ಇರಬೇಕೆಂದು ನಿಳೋಜಿಗೂ, ಚಂದ್ರಾತರುಣಿಗೂ ಹೇಳಿ ಬೆಳಕು ಹರಿಯುವದರೊಳಗೆ ತನ್ನ ಅಧಿಕಾರಿಯ ಮನೆಯನ್ನು ಸೇರಬೇಕೆಂದು ಅವಸರದಿಂದ ಹೊರಟುಹೋದನು. ಇತ್ತ ಆ ಗುಪ್ತಸ್ಥಳದಲ್ಲಿ ಆ ಅಣ್ಣ-ತಂಗಿಯರಿಬ್ಬರು ಭವಿತವ್ಯವನ್ನು ಸ್ಮರಿಸುತ್ತ ಕುಳಿತುಕೊಂಡರು.

ಅವರಿದ್ದ ಆ ಗುಪ್ತಸ್ಥಳವು ಒಂದು ಹಾಳು ಮನೆಯಾಗಿತ್ತು. ಅದು ಕಿಲ್ಲೆಯ ಒಂದು ಮೂಲೆಯಲ್ಲಿತ್ತು. ಆ ಭಾಗಕ್ಕೆ ಸಮುದ್ರವು ಹತ್ತಿದ್ದರಿಂದ ಅಲ್ಲಿ ಕಾವಲುಗಾರರ ಸುಳಿದಾಟವು ಇರುತ್ತಿದ್ದಿಲ್ಲ. ಒಂದುವೇಳೆ ಕಾವಲುಗಾರರು ಕೋಟೆಯ ಗೋಡೆಯ ಮೇಲೆ ಪಹರೆ ಮಾಡುತ್ತಿದ್ದರೂ ಆ ಮನೆಯು ಅವರಿಗೆ ಕಾಣಿಸುತ್ತಿರಲಿಲ್ಲ. ಪೂರ್ವದಲ್ಲಿ ಆ ಮನೆಯನ್ನು ಮದ್ದು-ಗುಂಡು ಇಡುವ ಕೆಲಸಕ್ಕೆ ಉಪಯೋಗಿಸುತ್ತಿದ್ದದರಿಂದ ಅದು ಒಂದು ವಿಸ್ತೀರ್ಣವಾದ ಗುಹೆಯಂತಿತ್ತು. ಆದರೆ ಈಗ ಅದು ಮುರುಕಳಿಗೆ ಬಂದದ್ದರಿಂದ ಅದರ ಸನಿಯಕ್ಕೆ ಯಾರೂ ಹೋಗುತ್ತಿದ್ದಿಲ್ಲ. ಇಂಥ ನಿರ್ಜನವಾದ ಆ ಸ್ಥಳವೇ ಆ ಅಣ್ಣ-ತಂಗಿಯರಿಗೆ ಆಶ್ರಯಸ್ಥಾನವಾಯಿತು. ಅವರು ಈ ಮುರುಕ ಮನೆಯಲ್ಲಿ ನಿರ್ಭಯದಿಂದ ವಾಸಮಾಡಬಹುದೆಂದು ತಿಳಿದರು. ಚಿಮಣಾಜಿಅಪ್ಪಾನ ಸೇವಕರಾದ ರಾಘೋಬಾ ಸದಾಶಿವ ಗಣೂ ಮೊದಲಾದವರು ಬಂದಬಳಿಕ ಯಾವದೊಂದು ಯುಕ್ತಿಯಿಂದ ಪಾರಾಗಲಿಕ್ಕೆ ಮಾರ್ಗವಾಗುತ್ತದೆಂದು ನಿಳೋಜಿಯು ನೆನಿಸುತ್ತಿದ್ದನು. ಆತನ ಮನಸ್ಸಿನಲ್ಲಿ ತಂಗಿಯನ್ನು ಸುರಕ್ಷಿತವಾಗಿ ಊರಿಗೆಮುಟ್ಟಿಸಿ ತಾನು ಬಾಳಾಜಿಯುವರೊಡನೆ ಇಲ್ಲಿಯೇ ಗುಪ್ತಹೇರನಾಗಿರಬೇಕೆಂಬ ಹುರುಪು ಹುಟ್ಟಿತು. ಹೀಗೆ ಅವನು ತಂಗಿಯೊಡನೆ ಅನೇಕ ಬಗೆಯ ಮನೋರಾಜ್ಯಗಳಲ್ಲಿ ಅಂದು ಆ ಗುಹೆಯಲ್ಲಿ ಕಾಲಕಳೆದನು. ಹಗಲ ಹೊತ್ತಿನಲ್ಲಿ ಆ ಮನೆಯ ಸಮೀಪಕ್ಕೆ ತಮ್ಮವರು ಯಾರೂ ಬರುವಹಾಗಿಲ್ಲವಾದ್ದರಿಂದ ಆ ದಿನ ಆ ಅಣ್ಣ-ತಂಗಿಯರಿಗೆ ನಿರಶನವಾಯಿತು. ಆದಿನ ರಾತ್ರಿಯೇ ತಮ್ಮ ಪರಿವಾರವೆಲ್ಲ ಕೂಡುವದೆಂದು ಅವನು ಬಾಳಾಜಿಯ ಮಾತಿನ ಮೇಲಿಂದ ಹಾರೈ

ಸುತ್ತ ಸಂಜೆಯಾಗುವ ಹಾರಿಯನ್ನೇ ಕಾಯುತ್ತಿದ್ದನು. ಸಂಜೆ ಯಾವಾಗ ಆಗುವದೋ ತಾನು ಆ ಮರಾಟಾವೀರರ ಪರಿಚಯವನ್ನು ಯಾವಾಗ ಮಾಡಿಕೊಂಡೇನೋ ಎಂಬ ಚಿಂತೆಯು ಅವನನ್ನು ಬಾಧಿಸುತ್ತಿತ್ತು.

ಹೀಗೆ ನಿಳೋಜಿಯು ಆ ಹಾಳು ಮನೆಯಲ್ಲಿ ಚಡಪಡಿಸುತ್ತಿರಲು ಇತ್ತ ಜೇಲಖಾನೆಯಲ್ಲಿ ಬಹು ಅನರ್ಥವು ನಡೆದಿತ್ತು. ಕಾವಲುಗಾರರ ದುರ್ಲಕ್ಷದಿಂದ ಜೇಲಖಾನೆಯೊಳಗಿನ ಇಬ್ಬರು ಕೈದಿಗಳು ಕಬ್ಬಿಣದ ಗಜ ಗಳನ್ನು ಕಿತ್ತಿ ಓಡಿ ಹೋಗಿರುವರೆಂಬ ಸುದ್ದಿಯು ಕಿಲ್ಲೇದಾರನಿಗೆ ಹತ್ತಿ ತು. ಈ ಭಯಂಕರ ಅಪರಾಧವನ್ನು ಕೇಳಿ ಆ ಫಿರಂಗೀ ಕಿಲ್ಲೇದಾರನು ತಪ್ತನಾದನು. ಅವನು ಪೋರ್ತುಗೀಜ ಸಿಪಾಯಿಗಳೊಡನೆ ಜೇಲಖಾನೆಗೆ ಬಂದು ವಿದ್ಯಮಾನ ಪರಿಸ್ಥಿತಿಯನ್ನು ತಿಳಿದು ಮುಖ್ಯ ಕಾವಲುಗಾರನಾದ ಗುಲಾಂಕಾದರನನ್ನು ಅಮಾನುಷ ರೀತಿಯಿಂದ ಶಿಕ್ಷಿಸತೊಡಗಿದನು. ಆ ಕೋಟೆಯ ಕಿಲ್ಲೇದಾರನು ಫಿರಂಗೀ ಮನುಷ್ಯನಾಗಿರದೆ ಬೇರೊಬ್ಬ ವಿಷ ಯಾಂಧನಾಗಿದ್ದರೆ ಅವನಿಗೆ ಇಷ್ಟು ಬೇಗನೆ ಸುದ್ದಿ ಹತ್ತುತ್ತಿರಲಿಲ್ಲ. ಹತ್ತಿ ದರೂ ಅವನು ಆ ಬಗ್ಗೆ ಇಷ್ಟೊಂದು ದಕ್ಷತೆಯನ್ನು ವಹಿಸುತ್ತಿರಲಿಲ್ಲ. ಆದರೆ ಫಿರಂಗೀಕಿಲ್ಲೇದಾರನು ಇಂಥ ಮೈಮರೆಯುವ ಮಡ್ಡನಿದ್ದಿಲ್ಲ ವೋ ಲಾಗಿ ಶತ್ರುಗಳು ದುರ್ಗವನ್ನು ಮುತ್ತತಕ್ಕವರಿದ್ದದರಿಂದ ಅವನು ಬಹು ದಕ್ಷತೆಯಿಂದ ವರ್ತಿಸುತ್ತಿದ್ದನು. ಅವನ ದಕ್ಷತೆಯ ವ್ಯವಸ್ಥೆಯಿಂದ ಆ ರಾತಿಯಲ್ಲಿಯೇ ಈ ಸುದ್ದಿಯು ಕಿಲ್ಲೇದಾರನಿಗೆ ಹತ್ತಬೇಕಾಗಿತ್ತು. ಆದರೆ ಆ ದಿನ ನಿಳೋಜಿ-ಚಂದ್ರಾತರುಣಿಯರ ಸುದೈವದಿಂದಲೇ ಆತನಿಗೆ ಸುದ್ದಿ ಹತ್ತಲಿಲ್ಲವೆಂದು ಹೇಳಬಹುದು.

ಕಿಲ್ಲೇದಾರನಿಗೆ ಆಶ್ಚರ್ಯವಾಯಿತು. ಕೈದಿಗಳು ಕೈಬೇಡಿಯನ್ನು ಮುರಿದು ಬಾಗಿಲದ ಕಬ್ಬಿಣದ ಗಜಗಳನ್ನು ಮುರಿದು ಹೋಗಬೇಕಾದರೆ ಅವರ ಸಾಮರ್ಥ್ಯವು ಎಷ್ಟಿರಬಹುದು? ಎಂಬದೇ ಅವನ ಆಶ್ಚರ್ಯಕ್ಕೆ ಕಾರ ಣವಾಯಿತು. ಕಾವಲುಗಾರನಿಂದ ಕೈದಿಗಳಿಗೆ ಯಾವದೊಂದು ಬಗೆಯ ತ್ರಾಸವಾದ ಹೊರತು ಅವರು ಹೀಗೆ ಸಾಹಸ ಮಾಡಲಾರರೆಂಬ ವಿಚಾರವು ಕಿಲ್ಲೇದಾರನ ಮನಸ್ಸಿನಲ್ಲಿ ಬಂದಿತು. ಆಗ ಅವನು ಯಾವ ಕೋಣೆ ಯಿಂದ ಕೈದಿಗಳು ಓಡಿ ಹೋಗಿದ್ದರೋ ಆ ಕೋಣೆಗೆ ಹೋಗಿ ಮುರಿದ ಗಜಗಳನ್ನು ಕಣ್ಣುಟ್ಟಿ ನೋಡಿ ಅಲ್ಲಿದ್ದ ಬೇರೆ ಕೈದಿಗಳನ್ನು ಕುರಿತು ಹಳ್ಳೀ

ಅಂತಃಕರಣದ ಶಬ್ದಗಳಿಂದ ಅವರಿಗೆ ಪ್ರಶ್ನ ಮಾಡಿದನು. ಫಿರಂಗಿಗಳು ಮಾತಿನಲ್ಲಿ ಚಾಣರು; ಬರಿಯ ಒಣ ಮಾತಿನಿಂದ ಮಂದಿಯ ಹೊಟ್ಟೆಯೊಳಗಿನ ಹರಳು ಕರಗಿಸುವರೆಂಬದು ಪಾಪ! ಆ ಪಿಂಪಳಗ್ರಾಮದ ಹುಂಬ ಜನರಿಗೇನು ಗೊತ್ತು? ಅವರು ಕಿಲ್ಲೇದಾರನ ಅಂತಃಕರಣದ ಮಾತುಗಳು ನಿಜವೆಂದು ನಂಬಿದರು ಮತ್ತು ಕಾವಲುಗಾರನು ಚಂದ್ರಾತರುಣಿಯ ಮೇಲೆ ಪಾಪಬುದ್ಧಿಯನ್ನು ತಾಳಿದ್ದೂ ಅವನು ಆಕೆಯನ್ನು ಬೇರೆ ಕೋಣೆಯಲ್ಲಿ ಒಯ್ದಿಟ್ಟದ್ದೂ ಇವೇ ಮೊದಲಾದ ಸಮಸ್ತ ಸಂಗತಿಗಳನ್ನು ಹೇಳಿದರು. ಮತ್ತು ಈ ಕಾರಣದಿಂದಲೇ ನಮ್ಮೊಳಗಿನ ವೀರನಾದ ನಿಳೋಜಿಯು ತಂಗಿಯ ಬಂಧವಿಮೋಚನೆಗಾಗಿ ಈ ಸಾಹಸ ಮಾಡಿದನೆಂದು ಹೇಳಿದರು. ಇದರಿಂದ ನಡೆದ ವಿದ್ಯಮಾನವೆಲ್ಲ ಕಿಲ್ಲೇದಾರನ ಲಕ್ಷದಲ್ಲಿ ಬಂದಿತು ಕಾವಲುಗಾರನ ಉಪಟಳಕ್ಕೆ ಬೇಸತ್ತು ಒಬ್ಬ ತರುಣನೂ ಒಬ್ಬ ತರುಣಿಯೂ ಓಡಿ ಹೋಗಿರುವರೆಂದು ತಿಳಿದು ಓಡಿ ಹೋದವರಲ್ಲಿ ಹೆಂಗಸು ಇರುವಳೆಂದ ಬಳಿಕ ಅವರು ಎಲ್ಲಿಯಾದರೂ ಹಾಳು ಮನೆ ಗಿಡದ ಹೊದರು ಇಲ್ಲವೆ ಪೆಳೆ ಮೊದಲಾದವುಗಳಲ್ಲಿ ಅವರು ಅಡಗಿಕೊಂಡಿರ ಬಹುದೆಂಬ ವಿಚಾರವು ಅವನಿಗೆ ಹೊಳೆಯದೇ ಇರಲಿಲ್ಲ. ಬಳಿಕ ಅವನು ಕಾವಲುಗಾರನನ್ನು ಪ್ರತಿಬಂಧಿಸಿ ಜೇಲಖಾನೆಯ ರಕ್ಷಣೆಗೆ ಬೇರೆ ಚತುರ ಕಾವಲುಗಾರರನ್ನು ನೇಮಿಸಿ ಒಳ್ಳೇ ಕುಶಲರಾದ ದೂತರನ್ನು ಓಡಿಹೋದವರ ಸಂಶೋಧನೆಗೆ ಕಳಿಸಿಕೊಟ್ಟನು.

ಹೀಗೆ ಕಿಲ್ಲೇದಾರನಿಂದ ಆಜ್ಞಪ್ತರಾದ ದೂತರು ಆ ದುರ್ಗದೊಳಗೆ ಜನವಸತಿಗೆ ತ್ಯಾಜ್ಯವಾದ ಸ್ಥಳಗಳನ್ನೆಲ್ಲ ಕ್ರಮವಾಗಿ ನೋಡತೊಡಗಿದರು. ಹಾಳುಮರಗಳ ಹೊದರುಗಳು, ಕೋಟೆ ಕೊತ್ತಲಗಳ ಪೊದರುಗಳು ಹಾಳುಮನೆಗಳು ಇವನ್ನೆಲ್ಲ ಅವರು ನೋಡುತ್ತಿರಲು ಹೊತ್ತು ಮುಳುಗಿತು. ಆದರೂ ಆ ದೂತರಿಗೆ ಓಡಿಹೋದವರು ಸಿಕ್ಕಲಿಲ್ಲ. ನೋಡತಕ್ಕ ಸ್ಥಳಗಳೆಲ್ಲವೂ ಆದವು. ಅವರು ನಿರಾಶರಾದರು. ಓಡಿ ಹೋದ ಕೈದಿಗಳು ಸಮುದ್ರದಲ್ಲಿ ಹಾರಿ ಪ್ರಾಣಕೊಟ್ಟಿರಬಹುದೆಂಬ ಕಲ್ಪನೆಯು ಅವರಲ್ಲುತ್ಪನ್ನವಾಯಿತು. ಹೀಗೆಯೇ ಆಗಿರುವುದೆಂದು ಅವರು ನಿರ್ಧರಿಸಿಯೂ ಬಿಟ್ಟರು. ಕಿಲ್ಲೇದಾರನಿಗೆ ಇದೇ ಮೇರೆಗೆ ಮಾಹಿತಿಯನ್ನು ಹೇಳಬೇಕೆಂದೂ ನಿರ್ಧರಿಸಿದರು. ಆದರೆ ನಿಳೋಜಿ ಚಂದ್ರಾತರುಣಿಯರ ದೈವ

ದುರ್ವಿಪಾಕವು ಇನ್ನೂ ಮುಗಿದಿದ್ದಿಲ್ಲ ಶತ್ರುಗಳ ಕೈಗೆ ಸಿಕ್ಕು ಬನ್ನಬಡುವ ಯೋಗವು ಇನ್ನೂ ಇದ್ದಿತು. ಆದ್ದರಿಂದಲೇ ಆ ಕಾವಲುಗಾರರ ಬುದ್ಧಿಯು ಮತ್ತೆ ತಿರುಗಿತು. ಇದೊಂದು ಮೂಲೆಯಲ್ಲಿ ಹಳೇ ಮದ್ದಿನ ಹಾಳು ಖಜಾನೆ ಇರುವದೆಂಬದು ಅವರ ಲಕ್ಷದಲ್ಲಿ ಬಂದಿತು. ಅಲ್ಲಿಯುಷ್ಟು ನೋಡದೆ ಮನಬಂದಂತೆ ಕಿಲ್ಲೇದಾರನ ಮುಂದೆ ಹೇಳಬಾರದೆಂದು ಮತ್ತೆ ನಿರ್ಧರಿಸಿದರು. ಕಿಲ್ಲೇದಾರನು ಚತುರನೂ ನ್ಯಾಯ ನಿಷ್ಠುರನೂ ಇದ್ದದರಿಂದ ಕೆಲಸದಲ್ಲಿ ತಪ್ಪು ಕಂಡು ಬಂದರೆ ತಮ್ಮನ್ನು ತೋಫಿನ ಬಾಯಿಗೆ ನಿಲ್ಲಿಸದೆ ಬಿಡನೆಂಬದು ಅವರಿಗೆ ಗೊತ್ತಿತ್ತು. ಆದ್ದರಿಂದ ಅವರು ಪೂರ್ಣ ಶೋಧ ಮಾಡದೆ ಹುಡುಕುವದನ್ನು ನಿಲ್ಲಿಸಲು ಅಂಜಿದರು. ಅವರು ಮಬ್ಬುಗೆತ್ತಲಾಗಿದ್ದರೂ ತಾವು ನೋಡಬೇಕೆಂದು ನೆನಪಿಗೆ ತಂದುಕೊಂಡ ಸ್ಥಳವನ್ನು ನೋಡುವದಕ್ಕೆ ಹೊರಟರು.

ಇತ್ತ ಆ ಜೀರ್ಣಮಂದಿರದಲ್ಲಿ ನಿಳೋಜಿ-ಚಂದ್ರಾತರುಣಿಯರು ಇಂದು ಒಂದು ದಿನದ ಕುತ್ತನ್ನು ಪಾರಾದೆವೆಂದು ಮಾತನಾಡುತ್ತ ಕುಳಿತಿದ್ದರು. ಅವರ ಲಕ್ಷವೆಲ್ಲ ಹೊರಗೇ ಇದ್ದಿತು. ಮರಾಠಾವೀರರು ಯಾವಾಗ ಬರುವರೋ ಎಂಬ ಆತುರತೆಯು ಅವರಲ್ಲುತ್ಪನ್ನವಾಗಿತ್ತು. ಮನುಷ್ಯನಿಗೆ ಯಾವ ಕಾಲಕ್ಕೆ ಯಾವ ಸಂಕಟ ಬರುತ್ತದೆಂಬದು ತಿಳಿಯುವದಿಲ್ಲ. ಅವನು ಇಚ್ಛಿಸುವದು ಒಂದು, ದೈವಚಿಂತನೆಯು ಬೇರೊಂದು ಆಗಿ ಅವನ ಮನೋಭೀಷ್ಟವು ಅಪೂರ್ಣವಾಗುವದು ಹೀಗೆ ಆದಾಗ ಅವನಿಗೆ ಎಷ್ಟು ವ್ಯಥೆಯಾಗುತ್ತಿದೆಯೆಂಬದನ್ನು ಯಥಾರ್ಥವಾಗಿ ವರ್ಣಿಸಲು ಶಬ್ದಗಳಲ್ಲಿ ಶಕ್ತಿ ಸಾಲದು. ಪ್ರಸ್ತುತದಲ್ಲಿ ನಿಳೋಜಿ-ಚಂದ್ರಾತರುಣಿಯರ ಸ್ಥಿತಿಯು ಹೀಗೆಯೇ ಆಯಿತು. ಅವರು ಮರಾಟಾವೀರರು ಬರುವರೆಂದು ಕುತೂಹಲ ಉಳ್ಳವರಾಗಿರಲು, ಅವರೆದುರಿಗೆ ಫಿರಂಗೀ ದೂತರು ಒಮ್ಮಿಂದೊಮ್ಮೆ ಬಂದು ನಿಂತರು.

ಬಂದ ದೂತರು ಇಬ್ಬರೇ ಇದ್ದುದರಿಂದ ನಿಳೋಜಿಗೆ ಇವರಾರೆಂಬದು ತಿಳಿಯದಾಯಿತು. ಸಂಗಡ ಬಾಳಾಜಿಯು ಇಲ್ಲದ್ದರಿಂದ ಇವರನ್ನು ಮರಾಠಾ ವೀರರೆಂದು ತಿಳಿಯಬೇಕೋ ಅಥವಾ ನಮ್ಮ ಸಂಶೋಧನೆಗೆ ಹೊರಟ ಫಿರಂಗೀದೂತರೆಂದು 'ತಿಳಿಯಬೇಕೋ ಎಂಬದನ್ನು ಅವನು ನಿರ್ಧರಿಸಲಾರದವನಾದನು. ಅಷ್ಟರಲ್ಲಿ ಆ ದೂತರು ಗಹಗಹಿಸಿ ನಕ್ಕು

ಕೃತಕೃತ್ಯವನ್ನು ವ್ಯಕ್ತಗೊಳಿಸಿದರು. ಅವರ ನಗೆಯಲ್ಲಿ ಭಯಂಕರ ಕ್ರೌರ್ಯಭಾವವು ವ್ಯಕ್ತವಾಗಲು ಇವರು ಶತ್ರುಗಳ ದೂತರಾದ್ದರಿಂದ ಮತ್ತೆ ಹೊಸ ಸಂಕಟ ಪ್ರಾಪ್ತವಾಯಿತೆಂದು ನಿಳೋಜಿಯು ಉಸಿರ್ಗರೆದನು.

## (೧೦) ಧರ್ಮದ ಹುಚ್ಚು.



ನಿಳೋಜಿಯು ಶೋಧಮಾಡಿ ಬೇಸತ್ತಿದ್ದ ಆ ದೂತರು ಕೃತಕೃತ್ಯರಾಗಿ ಒಳ್ಳೇ ಅಬ್ಬರದಿಂದ ನಿಳೋಜಿಯನ್ನು ಪ್ರತಿಬಂಧಿಸಹೋದರು. ನಿಳೋಜಿಯ ಸಾಮರ್ಥ್ಯದ ಕಲ್ಪನೆಯು ಅವರಿಗಿರಲಿಲ್ಲ. ಅವರು ಸ್ವಾಭಾವಿಕವಾಗಿ ಬೇರೆ ಕೈದಿಯನ್ನು ಹಿಡಿದಂತೆ ನಿಳೋಜಿಯನ್ನು ಹಿಡಿಯಹೋದರು; ಆದರೆ ನಿಳೋಜಿಯು ಅಪ್ರತಿಮ ವೀರನು. ಅವನ ಮನಸ್ಸಿನಲ್ಲಿ ಈ ದೂತರನ್ನು ಯಮಸದನಕ್ಕಟ್ಟಿ ಇಲ್ಲಿಂದ ಪಲಾಯನ ಹೇಳಿಸಬೇಕೆಂಬ ವಿಚಾರ ಬಂದಿತು. ಆ ಕೂಡಲೆ ಅವನು ತನ್ನನ್ನು ಮುಸುಗೆ ಕಟ್ಟಬಂದ ದೂತರಲ್ಲಿ ಒಬ್ಬನಿಗೆ ಅಯಕಟ್ಟು ನೋಡಿ ಝಾಡಿಸಿ ಒದ್ದನು. ಪೆಟ್ಟು ಬಲವಾಗಿ ಹತ್ತಿದ್ದರಿಂದ ಆ ದೂತನು ನೆಲಕ್ಕುರುಳಿದನು. ಆ ಕೂಡಲೆ ಇನ್ನೊಬ್ಬನು ಪಲಾಯನ ಮಾಡುವ ಹವಣಿಕೆಯಲ್ಲಿರಲು, ಆತನು ಹೊರ ಹೊರಡುವಷ್ಟರಲ್ಲಿಯೇ ನಿಳೋಜಿಯು ಬಳಿಯಲ್ಲಿದ್ದ ಕೈಖಡ್ಗದಿಂದ ಹೊಡೆದನು. ಅದರಿಂದ ಅವನದೊಂದು ಕಾಲು ಕತ್ತರಿಸಿಬಿದ್ದಿತು. ಈ ಅಸಹ್ಯ ವೇದನೆಯಿಂದ ಅವನು ಭಯಂಕರವಾಗಿ ಚೀರಿದನು. ಆತನ ಈ ಆರ್ತಧ್ವನಿಯು ಕೋಟೆಯ ಗೋಡೆಯಮೇಲೆ ಪಹರೆಮಾಡುತ್ತಿದ್ದವರಿಗೆ ಕೇಳಿಸಲು, ಅವರು ಈ ಮನೆಯಲ್ಲಿ ಏನೋ ಅನಾಹುತವು ನಡೆದಿರುವದೆಂದು ಧಾವಿಸಿ ಬಂದರು. ಸಿಪಾಯಿಯು ಕಡತದಿಂದ ನೆಲಕ್ಕುರುಳಲು, ನಿಳೋಜಿಯು ತಂಗಿಯೊಡನೆ ಓಡಿಹೋಗುವ ಎತ್ತುಗಡೆ ನಡಿಸಿದನು. ಆತನು ಆ ಮನೆ ಬಿಟ್ಟು ಹೊರಬೀಳುವದಕ್ಕೂ, ಕೋಟೆಯ ಮೇಲಿನ ಎಂಟು ಹತ್ತು ಜನ ದೂತರು ಧಾವಿಸಿ ಬರುವದಕ್ಕೂ ಮೇಳುಬಿದ್ದಿತು. ಅವರು ಅತಿ ಶೀಘ್ರವಾಗಿ ನಿಳೋಜಿಯನ್ನೂ, ಚಂದ್ರಾತರುಣಿಯನ್ನೂ ಕೈದುಮಾಡಿ

ನೆಲಕ್ಕುರುಳಿದ ತಮ್ಮವರ ಯೋಗಕ್ಷೇಮಕ್ಕಾಗಿ ತೊಡಗಿದರು.

ನಿಳೋಜಿಯಿಂದ ಒದಿಸಿಕೊಂಡವನು ದೇಹಯಾತ್ರೆಯನ್ನೇ ಮುಗಿಸಿದ್ದನು; ಆದರೆ ಕಾಲು ಕಡಿಸಿಕೊಂಡವನ ಪ್ರಾಣಮಾತ್ರ ಹೋಗಿರಲಿಲ್ಲ. ಅವನು ತಮ್ಮವರನ್ನು ಕಂಡು ಭಯಂಕರವಾಗಿ ರೋದನ ಮಾಡುತ್ತ ನಡೆದ ಎಲ್ಲ ಪ್ರಕಾರವನ್ನು ವಿಸ್ತರಿಸಿ ಹೇಳಿದನು. ಆತನು ಹೇಳುವಾಗ ನಿಳೋಜಿಗೆ ಈಗಲೇ ಚಿತ್ರಹಿಂಸೆ ಕೊಡಬೇಕೆಂಬ ಸಿಟ್ಟು ಆ ಎಲ್ಲ ಕಾವಲುಗಾರರಿಗೆ ಬಂದಿತು. ಆದರೆ ಹೀಗೆ ಚಿತ್ರಹಿಂಸೆ ಕೊಡುವಾಗ ಈತನ ದೇಹಾವಸಾನವಾದರೆ ಕಿಲ್ಲೇದಾರನೆದುರಿಗೆ ಜವಾಬು ಕೊಡುವದು ಕಠಿಣವಾದೀತೆಂದು ಅವರು ಆ ವಿಚಾರವನ್ನು ಬಿಟ್ಟುಬಿಟ್ಟರು. ಬಳಿಕ ಅವರು ಆ ಪ್ರೇತಸಂರಕ್ಷಣೆಗೆ ಇಬ್ಬರನ್ನಿರಿಸಿ, ಉಳಿದವರು ಕೈದಿಗಳನ್ನೂ, ಆ ಕುಂಟ ಸಿಪಾಯಿಯನ್ನೂ ಕರೆದುಕೊಂಡು ಕಿಲ್ಲೇದಾರನಬಳಿಗೆ ಹೋದರು. ಕಿಲ್ಲೇದಾರನು ನಡೆದ ಪ್ರಕಾರವನ್ನೆಲ್ಲ ದೂತರ ಮುಖದಿಂದ ಕೇಳಿ, ಒಮ್ಮೆ ನಿಳೋಜಿಯ ಕಡೆಗೆ ದಿಟ್ಟಿಸಿ ನೋಡಿದನು. ಆತನ ಗಟ್ಟಿಮುಟ್ಟಿಯಾದ ದೇಹಾವಲೋಕನೆಯಿಂದ ಆ ಕಿಲ್ಲೇದಾರನಲ್ಲಿ ಯಾವದೋ ಒಂದುಬಗೆಯ ಆಶೆಯು ಉತ್ಪನ್ನವಾಯಿತು. ನಿಜವಾಗಿ ನೋಡಿದರೆ ಇಂಥ ಅಪರಾಧಿಯನ್ನು ಆತನು ಆಗಲೇ ಮರಣದಂಡನೆಗೆ ಗುರಿಮಾಡಿಬಿಡಬೇಕಾಗಿತ್ತು. ಆದರೆ ದುರಾಶೆಯು ಹಾಗೆ ಮಾಡಗೊಡಲಿಲ್ಲ. ಇಂಥ ಬಲಶಾಲಿಯಾದ ಈ ಮರಾಟನನ್ನು ಕ್ರಿಸ್ತೀಧರ್ಮಾನುಯಾಯಿಯನ್ನಾಗಿ ಮಾಡಿಕೊಂಡರೆ, ಈತನಿಂದ ನಮಗೆ ಬಹಳ ಪ್ರಯೋಜನವಾಗಬಹುದೆಂಬದೇ ಆ ಕಿಲ್ಲೇದಾರನ ದುರಾಶೆಯು. ಈ ದುರಾಶೆಯಿಂದ ಅವನು ಆ ದಿನ ನಿಳೋಜಿಗೆ ಯಾವ ಬಗೆಯ ಶಿಕ್ಷೆಯನ್ನೂ ವಿಧಿಸಲಿಲ್ಲ. ಆ ಅಣ್ಣ-ತಂಗಿಯರನ್ನು ಬೇರೆಯೊಂದು ಭದ್ರವಾದ ತುರಂಗದಲ್ಲಿಡಲು ಆಜ್ಞಾಪಿಸಿದನು. ಇಂಥ ಭಯಂಕರ ಅಪರಾಧಿಗೆ ಮರಣದಂಡನೆಯೇ ಯೋಗ್ಯ ಶಿಕ್ಷೆಯಾಗಿದ್ದು, ಕಿಲ್ಲೇದಾರನು ಹೀಗೆ ದಯತೋರಿದ್ದನ್ನು ನೋಡಿ ಎಲ್ಲ ಕಾವಲುಗಾರರಿಗೆ ಆಶ್ಚರ್ಯವಾಯಿತು. ಆದರೆ ಮಾಡುವದೇನು? ಕಿಲ್ಲೇದಾರನ ಅಪ್ಪಣೆಯಂತೆ ಆ ಕುಂಟ ಸಿಪಾಯಿಯನ್ನು ದವಾಖಾನೆಯಲ್ಲಿ ಮಲಗಿಸಿ, ತಮ್ಮ ಕೆಲಸಕ್ಕಾಗಿ ಹೊರಟುಹೋದರು.

ಇತ್ತ ಕಿಲ್ಲೇದಾರನು ಮನಸ್ಸಿನಲ್ಲಿ ಯೋಚಿಸತೊಡಗಿದನು. ಹಿಂದೂ ಜನರ ಧರ್ಮದ ಹುಚ್ಚು ಬಹು ದೃಢತರವಾದದ್ದು. ನಮ್ಮ ಉಪದೇಶ ದಿಂದ ಅವರ ಹುಚ್ಚು ಸ್ವಲ್ಪಮಾತ್ರಕ್ಕೂ ಇಳಿಯುವದಿಲ್ಲ. ನಮ್ಮ ಧರ್ಮ ದಲ್ಲಿ ಎಷ್ಟು ಸುಖವಿದೆಯೆಂಬದು ಅವರಿಗೆ ತಿಳಿಯದ್ದರಿಂದಲೇ ಅವರು ಹೀಗೆ ಮಾಡುತ್ತಾರೆ. ಪ್ರಕೃತದಲ್ಲಿ ಜೇಲಖಾನೆಯಲ್ಲಿರಿಸಿದ ಮರಾಟಾ ವೀರನು ಸಂಗ್ರಾಹ್ಯಮನುಷ್ಯನಾಗಿರುವನು. ಅವನಷ್ಟು ಬಲಶಾಲಿಗಳು ನಮ್ಮ ಜನರಲ್ಲಿ ಕ್ವಚಿತ್ತಾಗಿ ಸಿಗುವರು. ಇಂಥ ಬಲಾಢ್ಯ ಮನುಷ್ಯನು ಧರ್ಮಾಂತರ ಮಾಡಲಿಕ್ಕೆ ಒಪ್ಪಿಕೊಂಡರೆ ನಮ್ಮ ಧರ್ಮದ ಮೇಲ್ಮೆಗೆ ಬಹುಮಟ್ಟಿಗೆ ಸಹಾಯವಾಗುವದು. ಜೀವದ ಹೆದರಿಕೆಯನ್ನು ಹಾಕಿ ದರೆ ಅವನು ಧರ್ಮಾಂತರಕ್ಕೆ ಒಪ್ಪಬಹುದು. ಒಪ್ಪಲೇಬೇಕು. ಜೀವವು ಯಾರಿಗೆ ಬೇಡ? ಜೀವವು ಬೆಲ್ಲಕ್ಕಿಂತಲೂ ಸವಿ. ಅವನನ್ನು ನಾಳೆಗೇ ಕರಿಸಿ ವಿಚಾರಿಸಬೇಕು.

ಈ ಮೇರೆಗೆ ಆ ಫಿರಂಗೀಕಿಲ್ಲೇದಾರನು ಬಹುವಿಧವಾಗಿ ಯೋಚಿಸಿ ಬೆಳಗಾದಕೂಡಲೆ ನಾಲ್ವರುದೂತರನ್ನು ಕರೆದು ಕೈದಖಾನೆಯಲ್ಲಿದ್ದ ನಿಳೋಜಿ ಯನ್ನು ಕರೆತರಲು ಆಜ್ಞಾಪಿಸಿದನು. ಅಪ್ಪಣೆಯಂತೆ ದೂತರು ಅವನನ್ನು ಕರೆತಂದು ನಿಲ್ಲಿಸಿದರು. ಆಗ ನಿಳೋಜಿಯ ಕಾಲುಗಳಲ್ಲಿ ಬಲವಾದ ಬೇಡಿ ಗಳನ್ನು ಹಾಕಿದ್ದರು. ಅವನ ಮೈಮೇಲೆ ವಿಶೇಷ ಅರಿವೆಗಳಿದ್ದಿಲ್ಲ. ಅವನ ತೇಜಃಪುಂಜವಾದ ಮುಖವು ಬಾಡಿ ಹೋಗಿತ್ತು.

ಕಿಲ್ಲೇದಾರನು ನಿಳೋಜಿಯನ್ನು ಕುರಿತು—ಏ ಮರಾಟಾವೀರನೇ, ನಿನಗೆ ಕಲ್ಯಾಣದ ಮಾರ್ಗವನ್ನು ಹೇಳುತ್ತೇನೆ ಕೇಳು. ಎಂದು ನುಡಿದು ಆತನ ಮನವೊಲಿಸುವದಕ್ಕೆ ಕ್ರಿಸ್ತಪುರಾಣವನ್ನು ಬಿಚ್ಚಿದನು. ನಿಳೋಜಿಯು ಸುಮ್ಮನೆ ನಿಂತು ಕೇಳುತ್ತಿದ್ದನು. ಕಿಲ್ಲೇದಾರನು ಕಾಷ್ಠಾಸನದ ಮೇಲೆ ಕುಳಿತು ಹೇಳುತ್ತಿದ್ದನು. ಅವನು ಹೇಳಿದ್ದೇನಂದರೆ—

"ಉದಾತ್ತ ಧ್ಯೇಯವುಳ್ಳ ನಮ್ಮ ಕ್ರಿಸ್ತೀಧರ್ಮದ ಮುಂದೆ ನಿಮ್ಮ ಹಿಂದೂಧರ್ಮವು ಕೇವಲ ತುಚ್ಛವಾದದ್ದು; ಕ್ರಿಸ್ತೀಧರ್ಮವು ದೇವರಿಗೆ ಪ್ರಿಯವಾದದ್ದಿರುವದು. ಆ ಧರ್ಮವನ್ನು ಅನುಸರಿಸುವವನು ಬಹುಕಾಲ ಸುಖದಿಂದ ಬಾಳಿ ಸತ್ತನಂತರ ದೇವರ ಸನ್ನಿಧಿಯಲ್ಲಿ ಹೋಗಿ ಕೂಡ್ರುವನು. ಅದ್ದರಿಂದ ಸಮಸ್ತರೂ ಈ ಧರ್ಮವನ್ನೇ ಅಂಗೀಕರಿಸ

ಬೇಕೆಂದು ದೇವರ ಆಜ್ಞೆಯಿರುವದು. ದೇವರ ಆಜ್ಞೆಯನ್ನು ಮೀರಿ ನಡೆ ದವರಿಗೆ ಆತನು ಶಿಕ್ಷೆಮಾಡದಿರಲಾರನು. ಆದ್ದರಿಂದ ನೀನು ದೇವರಿಂದ ಶಿಕ್ಷಿತನಾಗದೆ ರಕ್ಷಿತನಾಗು; ನೀನು ಹುಟ್ಟಿದ ಕಾಡುಧರ್ಮವನ್ನು ಬಿಸುಟಿ ನಮ್ಮ ಕ್ರಿಸ್ತೀಧರ್ಮವನ್ನು ಸ್ವೀಕರಿಸು; ಕ್ರಿಸ್ತೀಧರ್ಮಗುರುವು ಈಗಲೇ ನಿನ್ನನ್ನು ಪವಿತ್ರನನ್ನಾಗೆ ಮಾಡಿ ತನ್ನ ಪವಿತ್ರಧರ್ಮದಲ್ಲಿ ಕೂಡಿಸಿಕೊ ಳ್ಳುವನು. ಯಾಕೆ ಮಾತನಾಡು; ನಿನಗೆ ನಾವು ಒಂದು ದೊಡ್ಡ ಕೆಲಸ ವನ್ನು ಕೊಡುವೆವು ನಮ್ಮ ದಂಡಿನಲ್ಲಿ ನಿನಗೆ ನಿನ್ನ ಪರಾಕ್ರಮಕ್ಕೆ ತಕ್ಕ ಸ್ಥಳವನ್ನು ಕೊಡುವೆವು. ಒಂದು ವೇಳೆ ನೀನು ನಿನ್ನ ಹಿಂದೂಮತವನ್ನು ಬಿಡಲಿಕ್ಕೆ ಒಪ್ಪದಿದ್ದರೆ ಈಗಲೇ ನಿನ್ನ ಶಿರಚ್ಛೇದವಾಗುವದು. ಯಾಕಂದರೆ ನಿನ್ನ ಅಪರಾಧವೇ ಅಂಥ ಭಯಂಕರವಾಗಿರುವದು. ನೀನು ಜೇಲಖಾನೆಯ ಕಾವಲುಗಾರರನ್ನು ಹೊಡೆದು ಓಡಿ ಹೋದದ್ದಲ್ಲದೆ ಓಡಿ ಹೋದಾಗೆ ಹಿಡಿಯ ಬಂದ ನಮ್ಮ ಕಾವಲುಗಾರರನ್ನು ಕೂಡಾ ಕೊಂದು ಬಿಟ್ಟಿರುತ್ತೀ; ನಿನ್ನಂಥವನನ್ನು ಜೀವದಿಂದಿಡುವದರಲ್ಲಿ ನಮಗೆ ಪ್ರಯೋಜನವಿಲ್ಲ. ಆದರೂ ನಿನ್ನ ಮೇಲೆ ದಯತೋರಿ ನಿನಗೆ ನಮ್ಮ ಧರ್ಮದ ಪವಿತ್ರತೆ ಯನ್ನು ತೋರಿಸಿಕೊಟ್ಟಿರುತ್ತೇನೆ. ನೀನು ಕ್ರಿಸ್ತಧರ್ಮಾನುಯಾಯಿಯಾ ದರೆ ನಿನ್ನ ಮೇಲೆ ದೇವರು ಪ್ರೀತನಾಗುವನು; ನೀನು ಎಲ್ಲ ಪಾಪಗಳಿಂದ ಅಂದರೆ ಕಷ್ಟಗಳಿಂದ ಮುಕ್ತನಾಗುತ್ತೀ; ನಿನ್ನ ಮೇಲೆ ದೇವರು ಸಿಟ್ಟಾದ್ದ ರಿಂದಲೇ ಈಗ ನೀನು ನಮ್ಮ ಕೈದಿನಲ್ಲಿ ಬಿದ್ದು ಪರಿಪರಿ ಕಷ್ಟಗಳನ್ನನುಭ ವಿಸುತ್ತೀ ಇದನ್ನೆಲ್ಲ ವಿಚಾರ ಮಾಡಿ ನಿನಗೆ ಸುಖಬೇಕಾಗಿದ್ದರೆ ನಾನು ಹೇಳಿದ್ದನ್ನು ಒಪ್ಪಿಕೊಳ್ಳು!''

ಈ ಮೇರೆಗೆ ಕಿಲ್ಲೇದಾರನು ಮಾತನಾಡಲು ನಿಳೋಜಿಯು ತಪ್ತ ನಾದನು. ಆತನು ಸಿಟ್ಟಿನಿಂದ ಘೂತ್ಕಾರ ಮಾಡುತ್ತ—ಏ ಫಿರಂಗೀ, ಎಚ್ಚರಿಕೆ! ಹಿಂದೂಧರ್ಮವನ್ನು ಇನ್ನೊಮ್ಮೆ ನನ್ನೆದುರಿಗೆ ನಿಂದಿಸಿದೆ ಯೆಂದರೆ ಈ ಕೈಬೇಡಿಗಳಿಂದಲೇ ನಿನ್ನ ತಲೆಯೊಡೆದು ಬಿಟ್ಟೇನು. ಮೂರ್ಖಾ, ನಾನು ನಿನ್ನ ಕೈಯಲ್ಲಿ ಸಿಕ್ಕಿರುವೆನೆಂದು ಹೀಗೆ ಮಾತಾಡುತ್ತೀ ಏನು? ಯಾವನೊಬ್ಬನ ಪ್ರಾಚೀನ ಕರ್ಮಗಳಂತೆ ಅವನಿಗೆ ಸುಖ ದುಃಖ ಗಳೊದಗುತ್ತವಲ್ಲದೆ ಧರ್ಮತತ್ವಗಳಿಂದಲ್ಲ. ಇಷ್ಟು ಸಾಮಾನ್ಯ ಸಂಗತಿ ಗಳು ನಿನಗೆ ತಿಳಿಯುವದಿಲ್ಲೆಂದ ಬಳಿಕ ನಿನ್ನ ಧರ್ಮವು ಎಂತಹದೆಂಬದು

ಒಡೆದು ಕಾಣುತ್ತದೆ. ಏನೇ ಇರಲಿ; ನಾವು ಹಿಂದುಗಳು ಪರಧರ್ಮ ವನ್ನು ಹಳಿಯುವದಿಲ್ಲ. ಸ್ವಧರ್ಮವನ್ನು ಬಿಡುವದಿಲ್ಲ. ಮುಂದಿಗೆ ನಮ್ಮ ಧರ್ಮ ಸ್ವೀಕರಿಸಿರೆಂದು ಒತ್ತಾಯ ಮಾಡುವದಿಲ್ಲ. ಒಂದು ಧರ್ಮದಲ್ಲಿ ದ್ದವನನ್ನು ಆ ಧರ್ಮದಿಂದ ಬಿಡಿಸಿ ಮತ್ತೊಂದು ಧರ್ಮದಲ್ಲಿ ಸೇರಿಸು ವದೇ ಮೂಲತಃ ಪಾಪದ ಕೆಲಸವಾಗಿರುತ್ತದೆ. ನಮ್ಮ ತಂದೆಯು ಒಬ್ಬರ ಧರ್ಮಕೆಡಿಸುವ ನೀಚರನ್ನು ಶಾಸನ ಮಾಡಲು ಟೊಂಕ ಕಟ್ಟಿರು ತ್ತಾನೆ. ನಾನು ಆತನ ಮಗನೆಂದ ಬಳಿಕ ನನಗೇ ಸ್ವತಃ ಧರ್ಮಾಂತರ ಮಾಡೆಂದು ಹೇಳಬರುವಿಯಾ? ಈ ಮಾತು ತ್ರಿಕಾಲದಲ್ಲಿಯೂ ಆಗದು. ಹಿಂದುಗಳಾದ ನಾವು ಧರ್ಮಪಾಲನೆಯಲ್ಲಿ ಮರಣಕ್ಕೆ ಅಂಜುವದಿಲ್ಲ. ಈ ದೇಹವನ್ನು ನೀನು ಇಂದು ನಾಶಗೊಳಿಸಿದರೆ ದೇವರು ನನಗೆ ಮತ್ತೊಂದು ಸುಂದರ ದೇಹವನ್ನು ಕೊಡುವನು. ಎಂದು ನುಡಿದನು.

ನಿಳೋಜಿಯ ಈ ಮಾತುಗಳಲ್ಲಿ ಕೆಲವು ಕಿಲ್ಲೇದಾರನಿಗೆ ಸಮಂಜಸ ವಾಗಿ ತಿಳಿದವು; ಕೆಲವು ತಿಳಿಯಲಿಲ್ಲ. ಯಾಕಂದರೆ ಅವನ ಲಕ್ಷವು ಆಗ ಬೇರೆ ಕಡೆಗೆ ಹೋಗಿತ್ತು. ನಿಳೋಜಿಯು ತಮ್ಮ ಧರ್ಮದಲ್ಲಿ ಸೇರಿದರೆ ಮುಂದೆ ಹ್ಯಾಗಾಗುವದೆಂಬ ಮನೋರಾಜ್ಯವು ಅವನ ಮನಸ್ಸಿನಲ್ಲಿ ವಿಸ್ತೃತವಾಗಿ ಹಬ್ಬಿತ್ತು. ಈ ಮನೋರಾಜ್ಯದ ಸುಖದಲ್ಲಿಯೇ ಅವನ ಮನಸ್ಸು ತಲ್ಲೀನವಾದ್ದರಿಂದ ಅವನು ಮತ್ತೆ ಉಪದೇಶವನ್ನು ನಡಿಸಿದನು. ಆತನ ಆ ಬಾಷ್ಕಲತನದ ಮಾತು ಕೇಳಿ ಕೇಳಿ ನಿಳೋಜಿಗೆ ಬೇಸರಬಂದಿತು. ಅವನು ಆಗ ಸಂತಾಪದಿಂದ—ನೀವು ಏನು ಹೇಳಿದರೂ ನಿಮ್ಮ ಮಾತುಗೆ ಳನ್ನೆಲ್ಲ ನಾನು ಕಿವಿಯಮೇಲೆ ಹಾಕಿಕೊಳ್ಳುವದಿಲ್ಲ. ನಿಮ್ಮಂಥ ನೀಚ ಧರ್ಮದದುರಭಿಮಾನಿಗಳ ಮಾತನ್ನು ಲಾಲಿಸಿದರೂ ನನಗೆ ಪಾಪವು ತಟ್ಟು ವದು; ಎಂದು ನುಡಿದನು. ಆತನ ಈ ನಿರ್ಭತ್ಸನೆಯಿಂದ ಕಿಲ್ಲೇದಾರನಿಗೆ ಅನಿವಾರವಾದ ಸಿಟ್ಟುಬಂದಿತು. ಇವನನ್ನು ಈಗಲೇ ಒಯ್ದು ಸಮುದ್ರ ದಲ್ಲಿ ಚಲ್ಲುವಂತೆ ಅಪ್ಪಣೆ ಮಾಡಬೇಕೆಂದು ಅವನ ಮನಸ್ಸಿನಲ್ಲಿ ಬಂದಿತು; ಆದರೆ ಮತ್ತೆ ಏನು ಯೋಚಿಸಿಕೊಂಡನೋ ತಿಳಿಯದು. ಕೊಡಲೆ ಅವನು ದೂತರಿಗೆ ಮೊದಲಿನಂತೆ ಕಾರಾಗೃಹದಲ್ಲಿರಿಸಲು ಅಪ್ಪಣೆ ಮಾಡಿದನು. ತನ್ನ ಮಾತಿನಿಂದ ತನಗೆ ಮರಣದಂಡನೆಯೊದಗಬಹುದೆಂದು ನಿಳೋಜಿ

ಯು ತಿಳಿದಿದ್ದನು; ಆದರೆ ಪರಿಣಾಮದಲ್ಲಿ ಹಾಗೆ ಅನುಭವಕ್ಕೆ ಬಾರದ್ದ ರಿಂದ ದೂತರ ಸಂಗಡ ಕಾರಾಗೃಹಕ್ಕೆ ಹೊರಟುಹೋದನು.

ನಿಳೋಜಿಯ ಮನಸ್ಸನ್ನು ಒಡಂಬಡಿಸಲು ತಾನು ಅಸಮರ್ಥನಾದ್ದ ರಿಂದ ಈ ಕೆಲಸಕ್ಕೆ ಧರ್ಮಾಧಿಕಾರಿಯನ್ನೇ ತೊಡಗಿಸಬೇಕೆಂದು ಅವನು ಯೋಚಿಸಿದನು. ಓಂಸಳಗ್ರಾಮದಿಂದ ಒಡಿದುತಂದ ಜನರಿಗೆ ಇನ್ನೂ ಕ್ರಿಸ್ತೀಧರ್ಮದ ದೀಕ್ಷೆಯನ್ನು ಕೊಟ್ಟಿರಲಿಲ್ಲ. ಆ ಕೆಲಸವನ್ನು ಮಾಡ ಲಿಕ್ಕೂ, ನಿಳೋಜಿಯನ್ನು ಸ್ವಸಂತೋಷದಿಂದ ಕ್ರಿಸ್ತೀಧರ್ಮಾನು ಯಾಯಿಯಾಗುವಂತೆ ಮಾಡುವದಕ್ಕೂ ಬೇಗನೆ ಪ್ರಾರಂಭಿಸಬೇಕೆಂದು ಅವನು ಧರ್ಮಾಧಿಕಾರಿಗೆ ಹೇಳಿಕೊಂಡನು. ಆ ಕ್ರಿಸ್ತೀಧರ್ಮಾಧಿಕಾ ರಿಯು ಕಿಲ್ಲೇದಾರನ ಈ ಪರವಾನಿಗೆಯ ದಾರಿಯನ್ನೇ ನೋಡುತ್ತಿದ್ದನು. ತಾನಾಗಿಯೇ ಅಪ್ಪಣೆಯು ಸಿಕ್ಕಬಳಿಕ ಕೇಳುವದೇನು? ಅವನು ಅತ್ಯಂತ ಹರುಷದಿಂದ ಧರ್ಮದೀಕ್ಷೆಯ ಸಾಹಿತ್ಯಗಳನ್ನೆಲ್ಲ ಸೇವಕರ ಮೇಲೆ ಹೊರಿ ಸಿಕೊಂಡು ಜೇಲಖಾನೆಗೆ ಹೋದನು. ಆಗ ಜೇಲಖಾನೆಯಲ್ಲಿ ಇನ್ನೂರರ ಮೇಲೆ ಕೈದಿಗಳಿದ್ದರು. ಇವರೆಲ್ಲರಿಗೆ ಕ್ರಿಸ್ತೀಧರ್ಮದ ದೀಕ್ಷೆಯನ್ನು ಕೊಟ್ಟೇ ತೀರಬೇಕೆಂದು ಆ ಧರ್ಮಾಧಿಕಾರಿಯು ನಿರ್ಧರಿಸಿದನು. ಯಾವ ನೊಬ್ಬನನ್ನು ಒತ್ತಾಯದಿಂದ ತಮ್ಮ ಧರ್ಮದಲ್ಲಿ ಸೇರಿಸಿಕೊಂಡರೆ ಅವನು ಮುಂದೆ ತಮ್ಮ ಧರ್ಮವನ್ನೇ ಪ್ರೀತಿಸುವನೆಂಬ ತಪ್ಪುತಿಳುವಳಿಕೆಯು ಧರ್ಮದ ದುರಭಿಮಾನಿಗಳಲ್ಲಿರುವಂತೆ ಆ ಧರ್ಮಾಧಿಕಾರಿಯಲ್ಲಿಯೂ ಇದ್ದಿತು. ವಾಸ್ತವವಾಗಿ ವಿಚಾರಿಸಿದರೆ ನಿಜವಾದ ಧಾರ್ಮಿಕನಿಗೆ ಒತ್ತಾ ಯದಿಂದ ಧರ್ಮಾಂತರಿಸುವ ಪ್ರಸಂಗ ಬಂದರೆ ಅವನು ಮನಸಾ ಎಂದೂ ಪರಧರ್ಮವನ್ನು ಪ್ರೀತಿಸಲಾರನು. ಅವಸಿಂದ ಆ ಧರ್ಮಾನುಯಾಯಿಗ ಳಿಗೆ ಕವಡಿಯಷ್ಟು ಕೂಡಾ ಪ್ರಯೋಜನವಾಗದೆ ಹಾನಿಯೇ ಒದಗ ಬಹುದು. ಕೆಲವರು ಮರುಳರು ಮಾತ್ರ ಆದದ್ದು ಆಗಿ ಹೋಯಿತು. ನಮಗೆ ಯಾವ ಧರ್ಮವೇನು? ಹೊಟ್ಟೆಯೊಂದು ತುಂಬಿದರೆ ತೀರಿತೆಂದು ವಿಷ ಕ್ರಿಮಿ ನ್ಯಾಯದಂತೆ ಕಾಲಕಳೆಯುವರು. ಪತಿವ್ರತೆಯು ಪತಿಯ ವಿನಾ ಅನ್ಯರನ್ನು ಹ್ಯಾಗೆ ಪ್ರೀತಿಸಲಾರಳೋ ಅದರಂತೆ ನಿಜವಾದ ಧರ್ಮಶ್ರದ್ಧೆಯುಳ್ಳವನು ಪರಧರ್ಮವನ್ನು ಪ್ರೀತಿಸಲಾರನು. ಇದನ್ನರಿ ಯದ ಆ ಮೂಢ ಧರ್ಮಾಧಿಕಾರಿಯು ಆ ಜೇಲಖಾನೆಯಲ್ಲಿರುವ ಕೈದಿಗ

ಳಿಗೆ ಕ್ರಿಸ್ತೀಧರ್ಮದ ದೀಕ್ಷೆಯನ್ನು ಕೊಡುವ ಉದ್ಯೋಗಕ್ಕೆ ತೊಡಗಿದನು. ಎಲ್ಲಕ್ಕೂ ಮೊದಲು ಅವನು ಪಿಂಪಳಗ್ರಾಮದ ಕೈದಿಗಳ ಬಳಿಗೆ ಹೋದನು. ಪಿಂಪಳಗ್ರಾಮದಲ್ಲಿದ್ದಾಗ ರಾಘೋಬ-ಸೂರ್ಯಾಜಿಯವರ ಉಪದೇಶದಿಂದ ನಿಜವಾದ ಧಾರ್ಮಿಕರೆನಿಸಿದ ಆ ಜನರಿಗೆ,ಧರ್ಮಾಧಿಕಾರಿಯ ಬೋಧವು ಯಾವ ಬಗೆಯ ಪರಿಣಾಮವನ್ನೂ ಮಾಡದಾಯಿತು. ಹೇಳಿ ಹೇಳಿ ಪಾದ್ರಿಯು ಬೇಸತ್ತನು. ಆ ಜನರಲ್ಲಿ ಒಬ್ಬನೂ ಧರ್ಮಾಂತರ ಮಾಡಲಿಕ್ಕೆ ಒಪ್ಪಿಕೊಳ್ಳಲಿಲ್ಲ. ಆಗ ಪಾದ್ರಿಯು ಒಮ್ಮೆಲೆ ಬಲುಮೆಯನ್ನು ಉಪಯೋಗಿಸದೆ ಬೇರೆಗ್ರಾಮದ ಕೈದಿಗಳ ಕಡೆಗೆ ನಡೆದನು. ಆದಿನ ಅವನು ಮಧ್ಯಾಹ್ನದವರೆಗೆ ಉಪದೇಶಮಾಡಿದರೂ ಯಾವ ಕೈದಿಯೂ ಧರ್ಮಾಂತರಿಸಲಿಕ್ಕೆ ಒಪ್ಪಲಿಲ್ಲ. ಆಗ ಪಾದ್ರಿಗೆ ತುಂಬಾ ಸಿಟ್ಟು ಬಂದಿತು. ಈ ಜನರಿಗೆ ಬಲುಮೆಯೇ ಯೋಗ್ಯ ಸಾಧನವಲ್ಲದೆ ಬೋಧವು ಯೋಗ್ಯಸಾಧನವಾಗಲಾರದು, ಎಂದು ನಿಶ್ಚಯಿಸಿದನು. ಬಳಿಕ ಅವನು ಬಲುಮೆಯಿಂದ ಕ್ರಿಸ್ತೀಧರ್ಮದ ದೀಕ್ಷೆಯನ್ನು ಕೊಡಲುಪಕ್ರಮಿಸಿದನು. ಆ ಬಲುಮೆಯ ಪ್ರಕಾರದಿಂದ ಕೈದಿಗಳಲ್ಲಿ ಅಸಂತೋಷವು ಹೆಚ್ಚಿತು. ಅವರು ಚೀತ್ಕಾರ ಮಾಡಲಾರಂಭಿಸಿದರು. ಫಿರಂಗೀ ಸಿಪಾಯಿಗಳು ಬಡಿಗೆಯಿಂದ ಹೊಡೆದು ಅವರನ್ನು ಸುಮ್ಮನಿರಿಸಲುಪಕ್ರಮಿಸಿದರು. ಇದನ್ನೆಲ್ಲ ಪ್ರಕಾರವನ್ನು ನೋಡಿ ಆ ಧರ್ಮಾಧಿಕಾರಿಯ ಹುಚ್ಚು ಮತ್ತಿಷ್ಟು ತಲೆಗೇರಿತು. ಜನರ ಚೀತ್ಕಾರದಿಂದ-ಆಕ್ರೋಶಧ್ವನಿಯಿಂದ ಅವನ ಹೃದಯವು ದ್ರವಿಸದೆ ಅದು ಮತ್ತಿಷ್ಟು ಶಿಲಾಮಯವಾಯಿತು. ಧರ್ಮಾಧಿಕಾರಿಯು ನಿಷ್ಕರುಣಿಯಾಗಿ ಕೇವಲ ದಂಡದಿಂದ ಜನರನ್ನು ಅಂಜಿಸಿ ನೂರಾರು ಜನರಿಗೆ ಕ್ರಿಸ್ತೀಧರ್ಮದ ದೀಕ್ಷೆಯನ್ನು ಒತ್ತಾಯದಿಂದ ಕೊಟ್ಟನು. ಆಗಿನ ಆತನ ಕ್ರೂರತನವು ವರ್ಣಿಸಲಶಕ್ಯವಾಯಿತು. ಆತನ ಈ ಕ್ರೂರತನಕ್ಕೆ ಧರಣಿಯು ಕೂಡಾ ನಡುಗಿರಬಹುದು. ಈ ರೀತಿ ವಿಜಯವನ್ನು ಸಂಪಾದಿಸಿ ಆ ಧರ್ಮಾಧಿಕಾರಿಯು ಫಿರಂಗೀ ಸಿಪಾಯಿಗಳೊಡನೆ ಹೊರಟುಹೋದನು. ಫಿರಂಗೀಜನರ ಈ ಧರ್ಮದ ಹುಚ್ಚನ್ನು ಪ್ರತ್ಯಕ್ಷವಾಗಿ ನೋಡಿ ಇನ್ನೂ ಧರ್ಮಾಂತರವಾಗದೆಯಿದ್ದ ಉಳಿದ ಕೈದಿಗಳು ವಿಲಕ್ಷಣ ಸಂತಾಪಕ್ಕೊಳಗಾದರು. ಆದರೆ ಶೃಂಖಲೆಗಳಿಂದಬಂಧಿಸಲ್ಪಟ್ಟ ಅವರ ಆಟವು ಏನು ನಡೆಯುವದು? ಅವರು ಆ ಮೂರ್ಖನ ಧರ್ಮದ ಹುಚ್ಚನ್ನೇ ಚಿಂತಿಸುತ್ತ ತಮ್ಮ ದುರ್ದೈವವನ್ನು ಹಳಿದುಕೊಳ್ಳಲಾರಂಭಿಸಿದರು.

# (೧೧) ದಂಡಯಾತ್ರೆ.

ಕ್ಷಾತ್ರವೃತ್ತಿಯವರಿಗೆ ದಂಡಯಾತ್ರೆಯು ಬಹುದೊಡ್ಡ ಪರ್ವಕಾಲದಂತಿರುವದು. ಯಾವನೊಬ್ಬ ಧಾರ್ಮಿಕನು ಮಹಾಪರ್ವಕಾಲವನ್ನು ಸಾಧಿಸಿ ಪುಣ್ಯಕ್ಷೇತ್ರಗಳಿಗೆ ಎಷ್ಟು ಹುರುಪಿನಿಂದ ಹೊರಡುವನೋ ಅದಕ್ಕೂ ಹತ್ತುಮಡಿ ಹುರುಪಿನಿಂದ ಯಾವನೊಬ್ಬ ಯೋದ್ಧಾಪುರುಷನು ದಂಡಯಾತ್ರೆಗಾಗಿ ಹೊರಡುವನು. ಆಗ ಅವನ ಉತ್ಸಾಹಕ್ಕೆ ಮೇರೆಯೇ ಇರುವದಿಲ್ಲ. ಅವನ ಬಾಹುಗಳು ಒಂದೇಸವನೆ ಸ್ಫುರಣಹೊಂದುತ್ತಲಿರುವವು. ಇಂಥ ರಣೋತ್ಸಾಹೀ ಯೋದ್ಧಾಪುರುಷನ ಸೈನಿಕರಂತೂ ತಕ ತಕ ಕುಣಿಯುತ್ತಲಿರುವರು. ಯುದ್ಧವೆಂದರೆ ಆ ಸೈನಿಕರ ಮೈಯುಬ್ಬುವದು. ಇಂಥ ಸೈನಿಕರೇ ನಿಜವಾದ ಸೈನಿಕರು ಇಂಥ ಸೈನಿಕರ ಮೇಲೆ ಒಡೆತನ ನಡಿಸುವವನೇ ನಿಜವಾದ ಸೇನಾನಾಯಕನು; ಹಾಗಲ್ಲದೆ ಯುದ್ಧವೆಂದರೆ ಜೋಲು ಮೋರೆ ಮಾಡುವ ಸೈನಿಕನು ಎಂಥ ಸೈನಿಕನವನು! ಇಂಥ ಸೈನಿಕರು ರಣರಂಗದಲ್ಲಿ ಕಾಲಿಟ್ಟು ಗೆಳಿಸುವ ಸೌಭಾಗ್ಯವಾದರೂ ಏನು? ಇರಲಿ; ಪ್ರಸ್ತುತದ ನಮ್ಮ ಚರಿತ್ರನಾಯಕನ ಸೈನಿಕರು ಇಂಥ ರಣಹೇಡಿಗಳಿದ್ದಿಲ್ಲ. ಸೇನಾಪತಿಯು ಆಳವಾದ ಕಂದಕದಲ್ಲಿ ಹಾರಿಕೊಳ್ಳೆಂದರೂ ಸ್ವಲ್ಪವೂ ಅನುಮಾನಿಸದಂಥ ವೀರಶಿರೋಮಣಿಗಳು. ಚಿಮಣಾಜಿ ಅಪ್ಪಾನಂಥ ರಣಧುರಂಧರನ ಕೈಕೆಳಗೆ ದಂಡಯಾತ್ರೆಗೆ ಹೊರಡುವದೆಂದ ಬಳಿಕ ಕೇಳುವದೇನು? ಆ ಜನರು ಅತ್ಯಂತ ಉತ್ಸಾಹಪೂರಿತರಾಗಿದ್ದರು.

ಇಂದು ಸೋಮವಾರ; ಮಳೆಗಾಲವು ಹಿಮ್ಮೆಟ್ಟಿ ಹಿಮಕಾಲದ ಆರಂಭದ ಸಮಯ; ಇಂದೇ ವಸಯಿಾ ಕಿಲ್ಲೆಯ ಮೇಲೆ ಸ್ವಾರೀ ಮಾಡುವದಕ್ಕಾಗಿ ದಂಡಯಾತ್ರೆಯನ್ನು ಹೊರಡಿಸತಕ್ಕದ್ದೆಂದು ಚಿಮಣಾಜಿಯವರ ಕಟ್ಟಪ್ಪಣೆಯಾಗಿತ್ತು. ವಸಯಿಾ ಸಂಗ್ರಾಮಕ್ಕೆ ಹೊರಡತಕ್ಕ ಸೈನಿಕರು ಸುಸಜ್ಜಿತರಾಗಿ ಶನಿವಾರವಾಡೆಯ ಪಟಾಂಗಣದಲ್ಲಿ ಸಲಾಮಿಗಾಗಿ ಕಾದುಕೊಂಡಿದ್ದರು. ಪ್ರತಿಯೊಬ್ಬ ಸೈನಿಕನ ಟೊಂಕದಲ್ಲಿ ಖಡ್ಗ, ಬೆನ್ನಿಗೆ ಢಾಲು ಭಾಲೆಗಳು ಶೋಭಿಸುತ್ತಿದ್ದವು. ಈ ಚಂದದಿಂದ ಪರಿಶೋಭಿಸುವ

ಪದಾತಿಗಳ ಹಿಂಬದಿಯಲ್ಲಿ ಅಸಂಖ್ಯ ಜನ ತುರುಗಾರೂಢರು ಸಾಲಾಗಿ ನಿಂತುಕೊಂಡಿದ್ದರು. ಪೇಶ್ವಾಯಿಯಲ್ಲಿ ಸೈನ್ಯವನ್ನು ನಿಲ್ಲಿಸುವ ಪದ್ಧತಿಯು ಅಪೂರ್ವವಾಗಿತ್ತು. ಪ್ರತಿಯೊಬ್ಬ ಸೈನಿಕನು ಹತ್ತಿದ ಕುದುರೆಗಳು ಅತ್ಯಂತ ಚಟುವಟಿಕೆಯುಳ್ಳವುಗಳಾಗಿದ್ದವು. ಎಲ್ಲ ಕುದುರೆಗಳು ಮನೋಹರವೂ ಪುಷ್ಟವೂ ಆಗಿದ್ದು ನಿಲುವಿಕೆಯಿಂದ ಬಹು ಎತ್ತರವಾಗಿದ್ದವು. ಇಂಥ ಸುಂದರವಾದ ಕುದುರೆಗಳನ್ನೂ, ಅವುಗಳನ್ನು ಆರೋಹಣ ಮಾಡಿದ ಪುಷ್ಟಕಾಯರೂ, ಉತ್ಸಾಹಶಾಲಿಗಳೂ ಆದ ಸೈನಿಕರನ್ನೂ ನೋಡಿ ಇಂಥ ಅಪೂರ್ವ ಸೈನ್ಯವು ವಿಜಯಶ್ರೀಯನ್ನು ಕೈವಶಮಾಡಿಕೊಳ್ಳದೆ ಬರುವದೇ! ಎಂಬ ಕಲ್ಪನೆಯು ಯಾನನೊಬ್ಬನಲ್ಲಿ ಸಹಜವಾಗಿ ಉತ್ಪನ್ನವಾಗುತ್ತಿತ್ತು. ಆದಿನ ದಂಡಯಾತ್ರೆಗಾಗಿ ಹೊರಟ ಸೈನಿಕರಲ್ಲಿ ಹದಿನೈದುಸಾವಿರ ಕಾಲಾಳುಗಳೂ, ಎಂಟುಸಾವಿರ ರಾವುತರೂ ಇದ್ದರು. ಇದಲ್ಲದೆ ಬಾಜಾರಬುನುಗು ಬೇರೆ. ಸಾಮಾನುಗಳನ್ನು ಹೇರುವದಕ್ಕೆ ಅಸಂಖ್ಯ ಆನೆ-ಒಂಟೆ-ಹೇಸರಗತ್ತೆಗಳು ಸಿದ್ಧವಾಗಿದ್ದವು. ತೋಫುಗಳು ಮಾತ್ರ ವಿಶೇಷವಿದ್ದಿಲ್ಲ. ಕೈಬೆರಳಿನಿಂದ ಎಣಿಸುವಷ್ಟು ಇದ್ದವು.

ಸುಮಾರು ಮುಂಜಾನೆ ಮೂರುತಾಸು ಹೊತ್ತು ಏರಿದಾಗ ಚಿಮಣಾಜಿಅಪ್ಪಾನು ಹೋಳಕರ ಮಲ್ಹಾರರಾಯನೊಡನೆ ರಾಜಮಂದಿರದ ಮೇಲುಪ್ಪರಿಗೆಯನ್ನೇರಿ ಪಟಾಂಗಣದಲ್ಲಿ ಸಿಸ್ತಿನಿಂದ ನಿಂತ ತಮ್ಮ ಸೈನ್ಯವನ್ನು ನಿರೀಕ್ಷಿಸಿದನು. ಸೈನ್ಯದ ನಿರೀಕ್ಷಣೆಯಿಂದ ಈ ಸೇನಾಧಿಪತ್ಯವನ್ನು ವಹಿಸಿ ನಾನು ನಿಶ್ಚಯವಾಗಿ ವಿಜಯಶಾಲಿಯಾಗುವೆನು, ಎಂಬ ಮನೋಭಾವವು ಅವನಲ್ಲುಂಟಾಯಿತು. ಈ ಮನೋಭಾವವೇ ಶುಭಶಕುನವೆಂದು ತಿಳಿದು, ಮಲ್ಹಾರರಾಯನೊಡನೆ ಅಲ್ಲಿ ರಚಿಸಿದ ಪೀಠದ ಮೇಲೆ ಕುಳಿತುಕೊಂಡನು. ಅಷ್ಟರಲ್ಲಿ ಬಾಜೀರಾವ ಪೇಶ್ವೆಯು ಅಲ್ಲಿಗೆ ಬಂದನು. ಅಣ್ಣನು ಬಂದದ್ದನ್ನು ನೋಡಿ ಆ ಸ್ವಾಮಿನಿಷ್ಠ ಚಿಮಣಾಜಿಯು ಅಣ್ಣನಿಗೆ ಶಿರಬಾಗಿ ನಮಿಸಿ ಆತನ ಶುಭಾಶೀರ್ವಾದವನ್ನು ಪಡೆದನು. ಮಲ್ಹಾರರಾಯನು ಪದ್ಧತಿಯಂತೆ ಪೇಶ್ವೆಯನ್ನು ನಮಸ್ಕರಿಸಿ ಸನ್ಮಾನಿಸಿದನು. ಆಗ ಬಾಜೀರಾಯನು ತನಗಾಗಿಯೇ ಸಿದ್ಧಪಡಿಸಿದ್ಧ ಪೀಠದಮೇಲೆ ಕುಳಿತನು. ಸಂಜ್ಞಾರ್ಥವಾಗಿ ಒಂದು ತೋಫು ಹಾರಿಸಲ್ಪಟ್ಟಿತು. ಬಳಿಕ ಎಲ್ಲ ಸೈನಿಕರು ಒಳ್ಳೇ ಉತ್ಸಾಹದಿಂದ ಪೇಶ್ವೆಗೆ ಮುಜುರೆಯನ್ನು ಮಾಡಿದರು. ರಾಣೋಜಿ-

ಸಿಂದೆ, ಯಶವಂತರಾವ ಪವಾರ, ಭೋಸಲೆ, ಮೊದಲಾದ ಸುಪ್ರಸಿದ್ಧ ಸರದಾರರುತಮ್ಮ ತಮ್ಮ ಸೈನ್ಯದ ಬಳಿಯಲ್ಲಿ ವೀರಶ್ರೀಯುಕ್ತರಾಗಿ ನಿಂತುಕೊಂಡಿದ್ದರು. ಸೈನಿಕರು ಮುಜುರೆ ಮಾಡಿದ ಬಳಿಕ ಈ ದೊಡ್ಡ ಸರದಾರರು ಪದ್ಧತಿಯಂತೆ ಪೇಶ್ವೆಗೆ ಮುಜುರೆಯನ್ನು ಸಮರ್ಪಿಸಿದರು. ದರ್ಬಾರದ ಸಿಷ್ಟನಂತೆ ಇಷ್ಟೆಲ್ಲ ವಿಧಾನವು ಮುಗಿದ ಬಳಿಕ ಸೇನಾಪತಿಯಾದ ಚಿಮಣಾಜಿಯು ಸೈನ್ಯವು ಹೊರಡುವಂತೆ ಆಜ್ಞಾಪಿಸಿದನು. ಬಳಿಕ ಆ ಪ್ರಚಂಡಸೈನ್ಯವು ಕ್ರಮವಾಗಿ ಸಿಸ್ತಿನಿಂದ ಸಾಗಿ ಪುಣೆನಗರಿಯನ್ನು ದಾಟಿ ಒಂದು ವಿಶಾಲವಾದ ಬೈಲಲ್ಲಿ ತಳವೂರಿತು. ಚಿಮಣಾಜಿಯು ಮಲ್ಹಾರರಾವ ಹೋಳಕರನೊಡನೆ ಆರಿಸಿದ ಸೈನ್ಯದಿಂದೊಡಗೂಡಿ ಮಂಗಲವಾದ್ಯಗಳ ಘೋಷದೊಡನೆ ಶನಿವಾರವಾಡೆಯನ್ನು ಬಿಟ್ಟು ಸೈನ್ಯವನ್ನು ಕೂಡಿಕೊಂಡನು. ಇತ್ತ ಬಾಜೀರಾವ ಪೇಶ್ವೆಯು ತಮ್ಮನನ್ನು ದಿಗ್ವಿಜಯಕ್ಕಾಗಿ ಕಳುಹಿಸಿ ರಾಜಧಾನಿಯನ್ನು ಸಂರಕ್ಷಿಸುವದಕ್ಕಾಗಿ ಪುಣೆಯಲ್ಲಿ ನಿಂತುಕೊಂಡನು.

ಪ್ರಿಯವಾಚಕರೇ, ಕ್ಷಾತ್ರವೃತ್ತಿಯು ಅತ್ಯಂತ ಕಠಿಣವಾದದ್ದು; ಜೀವಗಳ್ಳರು ಎಂದೆಂದೂ ಕ್ಷಾತ್ರವೃತ್ತಿಯನ್ನು ಭಜಿಸಲಾರರು. ತಮ್ಮ ರುಂಡವನ್ನು ಎಡಗೈಯಲ್ಲಿ ಹಿಡದೇ ಅವರು ದಿಗ್ವಿಜಯಕ್ಕಾಗಿ ಹೊರಡಬೇಕಾಗುತ್ತದೆ. ಬರಿಯ ಆಲೋಚನೆ ಹೇಳುವದರಿಂದಾಗಲಿ, ಇಲ್ಲವೆ ಮನೆಯಲ್ಲಿ ವೃಥಾ ಪೌರುಷ ಕೊಚ್ಚುವದರಿಂದಾಗಲಿ ಕ್ಷಾತ್ರಧರ್ಮವು ಪಾಲಿಸಲ್ಪಡಲಾರದು. ರಣರಂಗದಲ್ಲಿ ಜೀವಿತದ ಪರವಿಯಿಲ್ಲದೆ ಕಾದಾಡಬೇಕಾಗುತ್ತದೆ. ಇಂಥ ಮಹಾವೀರರು ಕಾದಾಡಿದಾಗಲೇ, ಯಾವದೊಂದು ದೇಶವು ಸುರಕ್ಷಿತವಾಗಿ ಅಲ್ಲಿಯ ಧರ್ಮ, ಪ್ರಜೆಗಳ-ವಿತ್ತಜೀವಿತಗಳು, ಮಾನ ಮರ್ಯಾದೆಗಳು ಸುರಕ್ಷಿತವಾಗಿ ಉಳಿಯ್ಹುವವು. ಕ್ಷಾತ್ರವೀರರಿಲ್ಲದ ರಾಷ್ಟ್ರವು ಜೀವನವಿಲ್ಲದ ಕೊಳದಂತೆ, ಜೀವವಿಲ್ಲದ ದೇಹದಂತೆ, ವ್ಯರ್ಥವಾದದ್ದೆಂದು ಹೇಳಲಾಗುವದು. ರಾಷ್ಟ್ರದ ನವಚೈತನ್ಯವೆಂದರೇ ಕ್ಷಾತ್ರಧರ್ಮವು; ಇಂಥ ಕ್ಷಾತ್ರಧರ್ಮವೇ ಮೂರ್ತಿಭವಿಸಿದಂತೆ ತೋರುವ ಚಿಮಣಾಜಿಯು ದಂಡಯಾತ್ರೆಗೆ ಹೊರಟ ಬಳಿಕ ಆತನು ಹೋದ ಪ್ರದೇಶಗಳಲ್ಲಿಯ ನವಚೈತನ್ಯವನ್ನು ವರ್ಣಿಸುವದೇನು? ಅಪ್ಪಾನ ಕ್ಷಾತ್ರತೇಜಸ್ಸನ್ನು ನೋಡಿ ವಸಯೀಪ್ರಾಂತದ ಕೃಷಿವಲರೆಲ್ಲ ಹುರುಪು

ಗೊಂಡರು. ಸುಗ್ಗೀಕಾಲವು ಸಮೀಪಿಸಿದ್ದರೂ ಆ ಜನರ ತೋಳತಿಂಡಿಯು ಸುಮ್ಮನೆ ಕೂಡಗೊಡದಾಯಿತು. ಮನುಷ್ಯಸ್ವಭಾವವು ಬಹಳ ವಿಚಿತ್ರ ವಾಗಿರುತ್ತದೆ ಅದು ಪರರ ಅನುಕರಣವನ್ನು ಯಾವಾಗಲೂ ಮಾಡುತ್ತಿ ರುತ್ತದೆ. ಚಿಮಣಾಜಿಅಪ್ಪಾನ ವೀರಸೈನಿಕರನ್ನೂ ಅಪ್ಪಾನ ವೀರಕಥೆಗೆ ಳನ್ನೂ ಕೇಳಿ ಆ ಜನರಿಗೆ ತಾವೂ ದಂಡಿನಲ್ಲಿ ಸೇರಿ ಪರಾಕ್ರಮಿಗಳೆಂದೆನಿಸಿ ಕೊಳ್ಳಬೇಕೆಂಬ ಲವಲವಿಕೆಯುಂಟಾಯಿತು. ಅವರಲ್ಲಿ ಬಲಿಷ್ಠರಾದವರು ಬಹಳ ವಿಚಾರ ಮಾಡದೆ ಅವನ ದಂಡಿನಲ್ಲಿ ಕೂಡಿಕೊಂಡು ಬಿಟ್ಟರು. ಹೀಗೆ ಸೈನ್ಯಭರತಿಯ ಕೆಲಸವು ತನ್ನಷ್ಟಕ್ಕೆ ತಾನೇ ಆಗಹತ್ತಿದ್ದರಿಂದ ಅಪ್ಪಾನು ಇದೊಂದು ಶುಭಲಕ್ಷಣವೆಂದು ತಿಳಿದನು. ಆತನು ವಸಯೀ ಪ್ರಾಂತವನ್ನು ಮುಟ್ಟುವಷ್ಟರಲ್ಲಿ ಕಾಲಾಳುಗಳ ಸಂಖ್ಯೆಯು ಇಪ್ಪತ್ತೈದು ಸಾವಿರಕ್ಕೆ ನಿಲುಕಿತ್ತು.

ಅಪ್ಪಾನು ದಂಡಯಾತ್ರೆಗೆ ಹೊರಟ ಸುದ್ದಿಯು ಒಂಟೆಯ ಸವಾರರ ಮುಖಾಂತರವಾಗಿ ತುಳಾಜಿರಾಯನಿಗೆ ಕೆಲದಿನಗಳ ಮುಂಚಿತವಾಗಿಯೇ ತಿಳಿದಿತ್ತು. ಆದ್ದರಿಂದ ಆತನು ಖಂಡೋಜಿರಾವ ಮಾಣಕರ, ರಾಮ ಚಂದ್ರಹರಿ ಪಟವರ್ಧನ ಇವರೇ ಮೊದಲಾದ ತಜ್ಞರೊಡನೆ ಆಲೋಚಿಸಿ ಪೇಶ್ವೆಯ ಪ್ರಚಂಡ ದಂಡಿಗೆ ಇಳಿದುಕೊಳ್ಳುವದಕ್ಕೆ ಸುರಕ್ಷಿತವಾದ ಸ್ಥಳದ ಅನುಕೂಲತೆಯನ್ನು ಮಾಡಿಟ್ಟದ್ದನು. ಮತ್ತು ಸಮೀಪದ ಪ್ರದೇ ಶಗಳಿಂದ ಆಹಾರದ ಸಾಮಗ್ರಿಯನ್ನಾದರೂ ವಿಶೇಷವಾಗಿ ಸಂಗ್ರಹಿಸಿಟ್ಟಿ ದ್ದನು. ತುಳಾಜಿಯ ಈ ಮುಂಜಾಗ್ರತೆಯನ್ನು ತಿಳಿದು ಅಪ್ಪಾನಿಗೆ ತುಂ ಬಾ ಸಂತೋಷವೆನಿಸಿತು. ಅವನು ಸೈನ್ಯದ ತಳವೂರಿ ಆ ಪ್ರಾಂತದ ಸಮಗ್ರ ಸಂಗತಿಯನ್ನು ತುಳಾಜಿಯಿಂದ ತಿಳಿದುಕೊಂಡನು. ಬಳಿಕ ಅವನು ತನ್ನ ಪಾಳಯದಲ್ಲಿ ಯುದ್ಧಪರಿಷತ್ತನ್ನು ಕೂಡಿಸಿದನು.

ಅಪ್ಪಾನು ಕೂಡಿಸಿದ ಈ ಯುದ್ಧಪರಿಷತ್ತಿಗೆ ಆತನ ಎಲ್ಲ ಸರದಾರ ರೂ ಬಂದಿದ್ದರು. ಸಭೆಯಲ್ಲಿ ನಡೆದ ಆಲೋಚನೆಗಳಲ್ಲಿ ಒಂದಕ್ಷರವು ಕೂಡಾ ಶತ್ರುಗಳ ಕಿವಿಗೆ ಬೀಳದಂತೆ ತಕ್ಕ ಬಂದೋಬಸ್ತನ್ನಿಟ್ಟದ್ದರು. ಪಾಳಯವು ತಳವೂರಿದ ಮರುದಿನವೇ ಸಭೆ ಕೂಡಿಸಿದ್ದರಿಂದ ಶತ್ರುಗಳ ಗುಪ್ತಹೇರರು ಬಂದು ಸೇರಲು ಆಸ್ಪದವಿದ್ದಿಲ್ಲ. ಈ ಸಭೆಯಲ್ಲಿ ಶತ್ರುಗಳ ಅಗುಳುಕಟ್ಟನ್ನು ತನ್ನ ಸರದಾರರಿಗೆತಿಳಿಸಿ ಯಾರು ಯಾರಿಗೆ ಯಾವ ಯಾವ

ಕೆಲಸ ನೇಮಿಸಿಕೊಡಬೇಕೆಂಬ ಯೋಜನೆಯನ್ನು ನಿರ್ಧರಿಸುವದಿತ್ತು. ಅಪ್ಪಾನು ಯಾವ ಯುದ್ಧಕ್ಕೆ ಹೋದರೂ ಪೂರ್ವಯೋಚನೆಯಿಲ್ಲದೆ ಒಮ್ಮೆಲೆ ಶತ್ರುಗಳ ಮೈಮೇಲೆ ಧುಡುಂಪ್ರವೇಶ ಮಾಡುತ್ತಿರಲಿಲ್ಲ. ಶತ್ರುವು ನಿರ್ಬಲನಿರಲಿ, ಬಲಿಷ್ಠನೇ ಇರಲಿ; ಆತನ ಬಲಾಬಲಗಳನ್ನು ತಿಳಿದು ಎಲ್ಲಿ ಯುದ್ಧ ಪ್ರಾರಂಭಿಸಿದರೆ ಶತ್ರುವು ಹಣ್ಣಿಗೆ ಬರುವನೆಂಬದನ್ನು ಯೋಚಿಸಿ ಯುದ್ಧಪ್ರವೃತ್ತನಾಗುತ್ತಿದ್ದನು. ತನ್ನ ಈ ಪದ್ಧತಿಗೆನುಸಾರವಾಗಿಯೇ ಅಪ್ಪಾನು ಈ ದಿನ ಯುದ್ಧಪರಿಷತ್ತನ್ನು ಕೂಡಿಸಿದ್ದನು.

ಆಮಂತ್ರಿತ ಸಭಿಕರೆಲ್ಲರೂ ನಿಯಮಿತವೇಳೆಗೆ ಬಂದು ಸೇರಿದರು. ಹೋಳಕರ ಮಲ್ಹಾರರಾವ, ರಾಣೋಜಿಸಿಂದೆ ಯಶವಂತರಾವ ಪವಾರ, ರಾಣೋಜಿ ಭೋಸಲೆ, ಖಂಡೋಜಿಮಾಣಕರ, ರಾಮಚಂದ್ರಹರಿ ಪಟ ವರ್ಧನ, ವಾಸುದೇವ ಜೋಸಿ, ರಾಮಚಂದ್ರ ಜೋಸಿ, ಶಂಕರರಾವ ಫಡಕೆ, ಅಂತಾಜಿ ರಘುನಾಥ, ಬಾಪೂಜಿ, ಗಂಗಾಜಿ ನಾಯಿಕ, ತುಳಾಜಿ, ಸೂರ್ಯಾಜಿ, ರಾಘೋಬಾ, ಆಂಗ್ರೆ ಮೊದಲಾದ ಸಣ್ಣ ದೊಡ್ಡ ಯೋ-ದ್ಧಾಪುರುಷರು ತಮಗುಚಿತ ಸ್ಥಳಗಳಗಳಲ್ಲಿ ಕುಳಿತುಕೊಂಡಿದ್ದರು. ಅಷ್ಟ ರಲ್ಲಿ ಚಿಮಣಾಜಿಯು ಯುದ್ಧೋಚಿತ ಪೋಷಾಕಿನಿಂದಲೇ ಅಲ್ಲಿಗೆ ಬಂದನು. ಆಗ ಆತನು ಪ್ರತ್ಯಕ್ಷ ಪರಶುರಾಮನೋ ಅಥವಾ ಕಾರ್ತವೀರ್ಯಾರ್ಜುನ ನನ್ನು ಮರ್ದಿಸುವದಕ್ಕೆ ಹೊರಟ ಮಯೂರಾಸನನೋ ಎಂಬಂತೆ ತೋರು ತ್ತಿದ್ದನು. ಆತನ ವೀರಬಾಹುಗಳು ಮೊಳಕಾಲನ್ನು ಸಹಜವಾಗಿ ಮುಟ್ಟು ತ್ತಿದ್ದವು. ಆತನ ವಕ್ಷಸ್ಥಳವು ಅತ್ಯುನ್ನತವಾಗಿತ್ತು. ಆತನ ಶ್ರೀಮುಖ ದಲ್ಲಿ ವೀರಶ್ರೀಯು ಹೊರಚಿಮ್ಮುತ್ತಲಿತ್ತು. ಕೈಯಲ್ಲಿ ಖಡ್ಗವು, ಮೈಯಲ್ಲಿ ಚಿಲಕತ್ತು ಇದ್ದದರಿಂದ ಆತನು ಅಜೇಯ ಪುರುಷನಾಗಿ ತೋರುತ್ತಿದ್ದನು. ಇಂತೊಪ್ಪುವ ಚಿಮಣಾಜಿ ಅಪ್ಪಾನನ್ನು ನೋಡಿ ಕುಳಿತ ಸರದಾರರು ಎದ್ದು ನಿಂತು ಪದ್ಧತಿಯಂತೆ ಮುಜುರೆಮಾಡಿದರು. ಬಳಿಕ ಅಪ್ಪಾಜಿಯು ಪೀಠದ ಮೇಲೆ ಕುಳಿತು ಎಲ್ಲ ಸಭಿಕರಿಗೂ ಕೂಡ್ರಹೇಳಿದನು. ಬಳಿಕ ಅಪ್ಪಾಜಿಯು ತುಳಾಜಿಯನ್ನು ಹತ್ತರ ಕರೆದು ಫಿರಂಗೀ ಜನರ ವಿಷಯವಾಗಿ ನೀನು ತಿಳಿದ ಸಂಗತಿಗಳನ್ನು ಹೇಳು ಎಂದು ಆಜ್ಞಾಪಿಸಿದನು. ಒಡೆಯನ ಅಪ್ಪ ಣೆಯಂತೆ ತುಳಾಜಿಯು ಮಾತನಾಡಲುಪಕ್ರಮಿಸಿದನು.

“ಪ್ರಿಯಬಾಂಧವರೇ, ಶ್ರೀಮಂತ ಸರಕಾರದ ಸನ್ನಿಧಿಯ ಅಪ್ಪಣೆ ಪಡೆದು ಇತ್ತ ಬಂದಬಳಿಕ ನನ್ನಿಂದ ಆಗತಕ್ಕಷ್ಟು ಕೆಲಸ ಆಗದಿದ್ದರೂ ಸರಕಾರದ ಪುಣ್ಯದಿಂದ ಕೆಲಕೆಲ ಮಹತ್ವದ ಸಂಗತಿಗಳನ್ನು ತಿಳಿದುಕೊಂಡಿರುತ್ತೇನೆ. ನಾನು ತಿಳಿದ ಮುಖ್ಯ ಸಂಗತಿಗಳಲ್ಲಿ ಫಿರಂಗಿಗಳ ಬಲವೆಷ್ಟೆಂಬದು. ಫಿರಂಗಿಗಳಲ್ಲಿ ಸೈನ್ಯವು ಹೆಚ್ಚಿಲ್ಲ ನಮ್ಮ ಒಂದೂ ಕಾಲಾಳುಗಳು ಎಂಟುಸಾವಿರದ ವರೆಗೆ ಇರಬಹುದು. ಫಿರಂಗೀ ಸೈನಿಕರು ಒಂದೂವರಿ ಸಾವಿರ ಮಾತ್ರ ಇರಬಹುದು. ಸೈನಿಕರ ಸಂಖ್ಯೆಯು ಅಲ್ಪವಿದ್ದರೂ ಅವರ ಆಯುಧಗಳು ಮಾತ್ರ ಅತ್ಯಂತ ಕ್ರೂರವಿರುತ್ತವೆ. ಫಿರಂಗೀಜನರ ಮುಖ್ಯ ಬಲವು ತೋಫುಗಳನ್ನಾಶ್ರಯಿಸಿರುತ್ತದೆ. ಅವರ ಒಂದು ತೋಫಿನ ಹೊಡತವು ಏಕಾಪೋಶನಕ್ಕೆ ಸಾವಿರಾರು ಜನರನ್ನು ನುಂಗುವದು. ಈ ತೋಫುಗಳಲ್ಲದೆ ಕ್ರೂರವಾದ ಬಂದೂಕುಗಳು ಅವರಲ್ಲಿರುತ್ತವೆ. ಅವರಿಗೆ ಬೇಕಾಗುವ ಮದ್ದು ಗುಂಡುಗಳನ್ನು ಪೂರೈಸಿ ಕೊಡಲು ಮುಂಬಯಿಯಲ್ಲಿರುವ ಇಂಗ್ರಜ ಗವರ್ನರನು ಸಿದ್ಧನಾಗಿದ್ದಾನೆ. ಸದ್ಯಕ್ಕೆ ಫಿರಂಗಿಗಳಲ್ಲಿ ಮದ್ದು-ಗುಂಡಿನ ಪುರವಠೆಯು ವಿಶೇಷವಾಗಿರುವದಿಲ್ಲ. ಆದ್ದರಿಂದ ನಾವು ಮೊದಲು ಮುಂಬಯಿಯಿಂದ ಬರುವ ಮದ್ದು-ಗುಂಡುಗಳು ಈ ಫಿರಂಗಿಗಳಿಗೆ ಮುಟ್ಟದಂತೆ ವ್ಯವಸ್ಥೆ ಮಾಡಬೇಕು. ಬಳಿಕ ಉತ್ತರದ್ವಾರದಿಂದ ಕೋಟೆಗೆ ಲಗ್ಗೆ ಹತ್ತಬೇಕು. ಸಮುದ್ರತೀರದಲ್ಲಿ ಆಂಗ್ರೆಬಂಧುಗಳು ಬಿಗಿಯಾದ ಕಾವಲನ್ನಿರಿಸಿದರೆ ಒಳಗಿನ ಫಿರಂಗೀ ಸೈನಿಕರಿಗೆ ಎಲ್ಲಿಯೂ ತಪ್ಪಿಸಲಿಕ್ಕೆ ಮಾರ್ಗವಿಲ್ಲದಂತಾಗುತ್ತದೆ.”

ಈ ಮೇರೆಗೆ ತುಳಾಜಿಯು ಮಾತನಾಡಲು ಚಿಮಣಾಜಿಯು ಆತನಿಗೆ ಕೂಡ್ರಹೇಳಿ ಸಭಿಕರನ್ನುದ್ದೇಶಿಸಿ ನುಡಿದನೇನಂದರೆ—ಪ್ರಿಯಸರದಾರರೇ, ಶಿವಛತ್ರಪತಿಯ ಸಾಮ್ರಾಜ್ಯವನ್ನು ಸಂರಕ್ಷಿಸುವದರಲ್ಲಿ ನೀವು ಬದ್ಧಕಂಕಣರಾದ್ದರಿಂದ ನಿಮ್ಮ ಸ್ವಾಮಿನಿಷ್ಠೆಯ ವಿಷಯವಾಗಿ ಯಾರೂ ಸಂಶಯಪಡುವಹಾಗಿಲ್ಲ. ತುಳಾಜಿಯು ಹೇಳಿದ ಸಂಗತಿಯಿಂದ ಶತ್ರುವು ದುರ್ಜಯನಿರುವನೆಂದು ಕಂಡುಬರುವದು. ಆದರೂ ಅದಕ್ಕೆ ಯಾರೂ ಹೆದರುವ ಕಾರಣವಿಲ್ಲ. ಧರ್ಮರಕ್ಷಕನಾದ ಪರಶುರಾಮ ಪ್ರಭುವಿನ ಕೃಪೆಯಿರುವ ವರೆಗೆ ನಾವು ಇಂಥ ನೂರಾರು ಜನ ಶತ್ರುಗಳನ್ನು ಹಾಹಾ ಅನ್ನುವಷ್ಟರಲ್ಲಿ ಗೆಲ್ಲಬಹುದು. ಮಾತ್ರ ಎಚ್ಚರದಿಂದ ಕೆಲಸಮಾಡಬೇಕು. ನಮ್ಮಲ್ಲಿ

ಜನಬಲ ವಿಶೇಷವಾಗಿರುತ್ತದೆ. ಆದರೆ ಕ್ರೂರ ಆಯುಧಗಳ ಕೊರತೆಯಿರುತ್ತದೆ. ಫಿರಂಗಿಗಳಲ್ಲಿ ಜನಬಲದ ಕೊರತೆಯಿದ್ದರೂ ಕ್ರೂರ ಆಯುಧಗಳ ವಿಪುಲತೆಯು ವಿಶೇಷವಾಗಿರುತ್ತದೆ. ಶತ್ರುಗಳ ಈ ಆಯುಧಗಳ ಆಟವನ್ನು ಒಳ್ಳೇಪ್ರಸಂಗದಲ್ಲಿ ಸಿಲ್ಲಿಸಿಬಿಡುವಂತೆ ತುಳಾಜಿಯು ಒಳ್ಳೇ ಹಂಚಿಕೆ ಮಾಡಿರುತ್ತಾನೆ. ಆದ್ದರಿಂದ ನಾವು ನಿರ್ಭಯದಿಂದ ಶತ್ರುಗಳ ಮೇಲೇರಿ ಹೋಗಬಹುದಾಗಿದೆ. ಆದರೂ ಸಾವಧತೆಯಿಂದ ಕೆಲಸಸಾಗಿಸುವದು ಯಾವಾಗಲೂ ನಿರ್ದುಷ್ಟವಾಗಿರುತ್ತದೆ. ಆಂಗ್ರೆಯು ತನ್ನ ಬಲದೊಂದಿಗೆ ಸಮುದ್ರತೀರವನ್ನೇ ಕಾಯತಕ್ಕದ್ದು. ಮುಂಬಯಿಯಿಂದ ಬರತಕ್ಕ ಸಹಾಯವನ್ನು ಫಿರಂಗೀಗಳಿಗೆ ಮುಟ್ಟಿಸಬಾರದು. ಶಕ್ಯವಿದ್ದಮಟ್ಟಿಗೆ ಹೆಚ್ಚು ಡೋಣಿಗಳು ಸರ್ವದಾ ಸಮುದ್ರದಲ್ಲಿ ಪಹರೆ ಮಾಡಬೇಕು. ಮತ್ತು ವಸಯೀಕಿಲ್ಲೆಯಿಂದ ಓಡಿಹೋಗುವ ಫಿರಂಗಿಗಳನ್ನು ಹಿಡಿದು ತರಬೇಕು. ಆದರೆ ಹೆಂಗಸರು ಹುಡುಗರ ಅವಮರ್ಯಾದೆಯನ್ನು ಮಾತ್ರ ಯಾರೂ ಮಾಡಲಾಗದು. ಆಂಗ್ರೆಯು ಸಮುದ್ರಭಾಗವನ್ನು ನೋಡಿಕೊಂಡ ಬಳಿಕ ಉಳಿದ ನಾವೆಲ್ಲರೂ ಕಿಲ್ಲೆಗೆ ಲಗ್ಗೆಹತ್ತುವ ಕೆಲಸ ಮಾಡೋಣ; ನಮ್ಮ ದಂಡಿನಲ್ಲಿ ಮೂರುಭಾಗ ಮಾಡಿ ಒಂದನೆಯದಕ್ಕೆ ಹೋಳಕರ ಮಲ್ಹಾರರಾಯನು ಅಧಿಪತಿಯಾಗಬೇಕು. ಈ ಭಾಗವು ಪಾಳಯದಲ್ಲಿ ಸರ್ವದಾ ಜಾಗರೂಕವಾಗಿರಬೇಕು. ಇದನ್ನು ಕಾದಿಟ್ಟ ಸೈನ್ಯವೆಂದು ತಿಳಿಯಬೇಕು. ಪ್ರಸಂಗದಲ್ಲಿ ಈ ದಂಡಿನ ಉಪಯೋಗವನ್ನು ಮಾಡಿಕೊಳ್ಳುವೆವು. ಉಳಿದ ಎರಡು ಭಾಗಗಳಲ್ಲಿ ಒಂದು ಭಾಗದಲ್ಲಿ ತುಳಾಜಿ, ಪವಾರ ಭೋಸಲೆ ಮೊದಲಾದವರು. ತಮ್ಮ ತಮ್ಮ ದಂಡಿನೊಡನೆ ಸೇರಿ ನಾನು ಹೇಳುವ ಕ್ರಮದಿಂದ ಕೋಟೆಯ ಮೇಲೇರಿ ಹೋಗಬೇಕು. ಉಳಿದವರು ಇನ್ನೊಂದು ಭಾಗದಲ್ಲಿದ್ದುಕೊಂಡು ಕಾಲುಮಾರ್ಗದಿಂದ ವಸಯಿ ಕಿಲ್ಲೆಗೆ ಬರುತ್ತಿರುವ ಸಹಾಯವನ್ನು ಸುಲಿದು ತರುತ್ತಿರಬೇಕು. ಶತ್ರುಗಳ ಗುಪ್ತಹೇರರು ಬಂದು ಸೇರದಂತೆ ಯಾವಾಗಲೂ ಎಲ್ಲರೂ ಜಾಗರೂಕರಾಗಿರಬೇಕು. ಶ್ರೀಮಂತಬಾಜೀರಾವ ಪೇಶ್ವೆಯವರು ಉತ್ತಮ ಯೋದ್ಧಾಜನರನ್ನು ಹ್ಯಾಗೆ ಗೌರವಿಸುತ್ತಾರೆಂಬದನ್ನು ಲಕ್ಷದಲ್ಲಿಟ್ಟು ಸರ್ವರೂ ಯುದ್ಧಪ್ರವರ್ತಕರಾಗಬೇಕು. ನಮ್ಮ ತೋಫಖಾನೆಯ ಎಲ್ಲ ವ್ಯವಸ್ಥೆಯನ್ನು ರಾಣೋಜಿ ಶಿಂದೆಯು ಮಾಡತಕ್ಕದ್ದು. ತೋಫಗಳನ್ನು

ಎಲ್ಲೆಲ್ಲಿ ಹಚ್ಚಬೇಕು ಎಂಬದನ್ನು ಆತನೇ ಇಲ್ಲಿಯ ತಜ್ಞರ ಸಹಾಯ ತಕ್ಕೊಂಡು ಗೊತ್ತುಪಡಿಸಬೇಕು. ನಾಳೆ ಸಂಜೆಯ ಒಳಗಾಗಿ ನಾನು ಹೇಳಿದ ಎಲ್ಲ ವ್ಯವಸ್ಥೆಯು ಆಗತಕ್ಕದ್ದು. ಇನ್ನೊಂದು ಸಂಗತಿಯೇ ನಂದರೆ—ಯುದ್ಧಪ್ರಾರಂಭಿಸುವ ಮೊದಲು ಶತ್ರುಗಳ ಬಳಿಗೆ ಶಿಷ್ಟಾಯಿ ಗಾಗಿ ಕಳಿಸುವ ಪದ್ಧತಿಯಿರುತ್ತದೆ. ಆದರಂತೆ ಫಿರಂಗಿಗಳ ಕಡೆಗೆ ಯಾರ ನ್ನಾದರೂ ಕಳಿಸಬೇಕೋ ಹ್ಯಾಗೆ? ಕಳಿಸುವದಾದರೆ ಯಾರನ್ನು ಕಳಿಸ ಬೇಕು? ಇದನ್ನು ವಿಚಾರ ಮಾಡಿ ತಿಳಿಸಿರಿ.”

ಈ ಮಾತಿಗೆ ಅಪ್ಪಾಜಿಯು ನುಡಿಯಲು ಹೋಳಕರಮಲ್ಹಾರರಾ ಯನು ಎದ್ದು ನಿಂತು, ಸರಕಾರ, ಈ ಫಿರಂಗಿಗಳ ಬಳಿಗೆ ಶಿಷ್ಟಾಯಿಗಾಗಿ ಯಾರನ್ನೂ ಕಳಿಸುವ ಕಾರಣವಿಲ್ಲ. ಯಾಕಂದರೆ ಅವರು ಧರ್ಮದ್ರೋಹಿ ಗಳು, ಹಿಂದುಗಳ ದ್ವೇಷಿಗಳು. ಮೇಲಾಗಿ ನಮ್ಮ ಸರಿಸಮಾನಸ್ಕಂದರಲ್ಲ. ಇಂಥವರೊಡನೆ ಶಿಷ್ಟಾಯಿಗೆ ಕಳಿಸುವದೆಂದರೆ ನಮ್ಮ ಅಪಮಾನವನ್ನು ನಾವೇ ಮಾಡಿಕೊಂಡಂತಾಗುವದು. ಯಾವನೊಬ್ಬ ಪುಂಡನನ್ನು ಹಿಡಿದು ಶಿಕ್ಷಿಸುವಂತೆ ಈ ಫಿರಂಗಿಗಳನ್ನು ಶಿಕ್ಷಿಸಬೇಕಾಗಿದೆ. ಹೀಗೆಂತೂ ನನಗೆ ತೋರುತ್ತದೆ, ಎಂದು ನುಡಿದು ಕುಳಿತುಕೊಂಡನು. ಬಳಿಕ ಅಪ್ಪಾಜಿ ಯು ಎಲ್ಲ ಸರದಾರರ ಒಪ್ಪಿಗೆ ಕೇಳಿದನು. ಕೆಲವರು ಶಿಷ್ಟಾಯಿಗೆ ಕಳಿಸ ಬೇಕೆಂದರು ಕೆಲವರು ಬೇಡವೆಂದರು. ಹೀಗೆ ಭಿನ್ನ ಭಿನ್ನ ಮಾತುಗಳಾ ಗಲು ಕೊನೆಗೆ ಅಪ್ಪಾಜಿಯು—ಈ ಫಿರಂಗಿಗಳು ನಮ್ಮ ದೇಶದಲ್ಲಿ ರಾಜ್ಯ ವಿಲ್ಲದವರಾಗಿದ್ದರೂ ಸ್ವದೇಶದಲ್ಲಿ ಅವರಿಗೆ ರಾಜ್ಯವುಂಟು; ಅವರೂ ನಮ್ಮಂತೆ ಗೌರವಶಾಲಿಗಳಾಗಿರುವರು. ಅವರು ಹಿಂದುಗಳ ದ್ವೇಷಮಾ- ಡುವರೆಂದೇ ನಾವು ಅವರನ್ನು ಈಗ ಶಿಕ್ಷಿಸಬಂದಿರುವೆವು. ಆದರೆ ಮೊದಲು ಶಿಷ್ಟಾಯಿರೂಪದಿಂದ ಎಚ್ಚರಿಕೆಕೊಡದೆ ಒಮ್ಮೆಲೆ ಯುದ್ಧಕ್ಕೆ ಪ್ರಾರಂಭಿಸು ವದು ನಮ್ಮ ಧರ್ಮವಲ್ಲ. ಮಲಗಿದ ಶತ್ರುಗಳನ್ನು ಎಬ್ಬಿಸಿ ಅವರ ಕೈ- ಯಲ್ಲಿ ಖಡ್ಗಕೊಟ್ಟು ಅವರೊಡನೆ ಯುದ್ಧ ಮಾಡಬೇಕಲ್ಲದೆ ಶತ್ರುವು ಮಲ ಗಿದಲ್ಲಿಯೇ ಅವರ ಕೊರಳನ್ನು ಕೊಯ್ಯಬಾರದು. ನಾವು ಧರ್ಮದಿಂದ ಲೇ ನಡೆಯಬೇಕು. ಧರ್ಮದಿಂದಲೇ ಯುದ್ಧವ ಮಾಡಬೇಕು. ಧರ್ಮ ವಿದ್ದಲ್ಲಿ ಶ್ರೀ ಪರಶುರಾಮನ ಬಲವಿರುವದು. ಆದ್ದರಿಂದ ತುಳಾಜಿಯು ನಾಳೆಗೆ ಫಿರಂಗಿಗಳ ಬಳಿಗೆ ಶಿಷ್ಟಾಯಿಗೆ ಹೋಗಿ ಬರಲಿ ಎಂದು ನುಡಿ

ದನು. ಅಪ್ಪಾಜಿಯ ಈ ಭಾಷಣವು ಸಮಸ್ತ ಸರದಾರರ ಮನಸ್ಸಿಗೆ ಬಂದಿತು. ಎಲ್ಲರೂ ಒಪ್ಪಿಕೊಂಡರು. ಗೊತ್ತಾದಂತೆ ಎಲ್ಲರೂ ತಮ್ಮ ತಮ್ಮ ಕೆಲಸಗಳಿಗಾಗಿ ಶ್ರೀಮಂತರಿಂದ ವೀಳ್ಯವನ್ನು ಪಡೆದರು. ಇಷ್ಟೆಲ್ಲ ಕೆಲಸಗಳು ಮುಗಿದ ಬಳಿಕ ಅಂದಿನ ಸಭೆಯು ವಿಸರ್ಜಿಸಲ್ಪಟ್ಟಿತು.

## (೧೨) ಹೊಣೆಗಾರರಾರು?

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಚಿಮಣಾಜಿಅಪ್ಪಾಜಿಯು ತುಳಾಜಿಯನ್ನು ಫಿರಂಗಿಗಳ ಕಡೆಗೆ ಶಿಷ್ಟಾಯಿಗಾಗಿ ಕಳುಹಿ ತಾನು ಮಲ್ಹಾರರಾವ ಹೋಳಕರನೊಡನೆ ಕಿಲ್ಲೆಯ ಭದ್ರತೆಯನ್ನು ನೋಡುವದಕ್ಕಾಗಿ ಹೊರಟನು. ವಸಯಿಾಕಿಲ್ಲೆಗೂ ಚಿಮಣಾಜಿಯ ಪಾಳಯಕ್ಕೂ ಎರಡು ಮೈಲುಗಳ ಅಂತರವಿತ್ತು. ಆದರೆ ನಡುವೆ ದೊಡ್ಡದೊಂದು ಗುಡ್ಡವಿದ್ದದರಿಂದ ಫಿರಂಗಿಗಳ ತೋಫಖಾನೆಯ ಉಪಟಳವು ಪಾಳಯಕ್ಕೆ ತಗಲುವಂತೆ ಇದ್ದಿಲ್ಲ. ಚಿಮಣಾಜಿ ಹಾಗು ಮಲ್ಹಾರರಾವ ಇವರಿಬ್ಬರೂ ವೇಷಾಂತರದಿಂದ ವಸಯಿಾಕೋಟೆಯ ಸಮಿಾಪಕ್ಕೆ ಹೋದರು. ಕೋಟೆಯು ಸಮುದ್ರತೀರದಲ್ಲಿದ್ದು ಅದರ ದಕ್ಷಿಣದಲ್ಲಿ ಒಳ್ಳೇ ವಿಸ್ತೃತ ಮುಖವುಳ್ಳ ಒಂದು ಖಾಡಿಯು ಇರುವದು. ಆ ವಿಶಾಲವಾದ ಖಾಡಿಯಿಂದ ಕಿಲ್ಲೆಯ ಮೂರು ದಿಕ್ಕುಗಳಲ್ಲಿ ಬಹು ಆಳವಾದ ನೀರು ಇರುವದು ಈ ನೀರಿನ ಅನುಕೂಲತೆಯಿಂದ ವಸಯಿಾಕೋಟೆಯು ಜಲದುರ್ಗವೆನಿಸಲು ಅರ್ಹವಾಗಿದೆ. ಉತ್ತರದಿಕ್ಕಿನಲ್ಲಿ ಮಾತ್ರ ಹೆಬ್ಬಾಗಿಲವರೆಗೆ ಹೋಗಲಿಕ್ಕೆ ನೆಲಮಾರ್ಗವಿರುವದು. ಆದರೆ ಅದೂ ವಿಶೇಷ ಅಗಲವಿರುವದಿಲ್ಲ. ಇಂಥ ಇಕ್ಕಟ್ಟಾದ ಪ್ರದೇಶದಲ್ಲಿ ಸೈನ್ಯವು ನಡೆದು ಹೋಗಿ ಕಿಲ್ಲೆಯನ್ನು ಕೈವಶ ಮಾಡಿಕೊಳ್ಳುವದು ಕಠಿಣವಿರುತ್ತದೆಂಬದು ಈ ನಮ್ಮ ಪ್ರೇಕ್ಷಕರಿಗೆ ಹೊಳೆಯದೆ ಇರಲಿಲ್ಲ. ಚಿಮಣಾಜಿಯಾಗಲಿ, ಹೋಳಕರನಾಗಲಿ ನಾಮಾಂಕಿತ, ಶೂರರೂ, ಹಲವು ದುರ್ಗಗಳನ್ನು ಗೆದ್ದವರೂ ಆಗಿದ್ದರೂ ಅವರಿಗೆ ಆ ಕೋಟೆಯ ನಿರೀಕ್ಷಣದಿಂದ ವ್ಯಸನವೆನಿಸಬೇಕಾದರೆ ಅದರ ಭದ್ರತೆಯು ಎಷ್ಟಿತ್ತೆಂಬದರ ಕಲ್ಪನೆಯು ನಮ್ಮ ವಾಚಕರಲ್ಲಿ ಸಹಜವಾಗಿ ಉದ್ಭವಿಸ

ಬಹುದು. ಆಗ ಚಿಮಣಾಜಿಯು ಹೋಳಕರನನ್ನು ಕುರಿತು—ಮಲ್ಹಾರಬಾ, ಕೋಟೆಯನ್ನು ಸ್ವಾಧೀನಪಡಿಸಿಕೊಳ್ಳುವದು ಎಷ್ಟು ಸುಲಭವೆಂದು ನಾವು ಭಾವಿಸಿದ್ದೆವೋ ಈಗ ಅಷ್ಟು ಕಠಿಣವೆಂದು ನಮಗೆ ಕಂಡು ಬರುತ್ತದೆ. ಕೋಟೆಯು ನೆಲಕೋಟೆಯಾಗಿದ್ದರೂ ದುರ್ಭೇದ್ಯವಾಗಿರುವದು. ಯಾಕೆ ನಿನಗೆ ಹ್ಯಾಗೆ ತೋರುತ್ತದೆ? ಎಂದು ಕೇಳಿದನು.

ಮಲ್ಹಾರರಾಯನು—ಸರಕಾರ, ನಿಮ್ಮಂತೆಯೇ ನನಗೂ ಇದು ಕಠಿಣವೆಂದೇ ತೋರುತ್ತದೆ. ಸಿಂಹಗಡದಂಥ ಗಗನಚುಂಬಿತ ಕೋಟೆಯನ್ನೇ ಕೈವಶಮಾಡಿಕೊಳ್ಳಲು ಸಮರ್ಥರಾದ ಮರಾಟವೀರರಿಗೆ ಇದು ಅಶಕ್ಯವಾಗದಿದ್ದರೂ ಕಿಲ್ಲೆಯ ಮೇಲೆ ಇರುವ ಜನರನ್ನು ನೋಡಿದರೆ ಅಸಂಭವವೆಂದು ತಿಳಿಯಬೇಕಾಗುತ್ತದೆ. ಯಾವನ್ನೊಬ್ಬ ವಿಷಯಲಂಪಟ ಮುಸಲ್ಮಾನ ಕಿಲ್ಲೇದಾರನಿದ್ದರೆ ಅಥವಾ ಅಫೂಭಕ್ತನಾದ ರಜಪೂತಕಿಲ್ಲೇದಾರನಿದ್ದರೆ ನಾವು ಹಾ ಹಾ ಅನ್ನುವಷ್ಟರಲ್ಲಿ ಇದನ್ನು ಕೈವಶಮಾಡಿಕೊಳ್ಳಬಹುದಾಗಿತ್ತು. ಆದರೆ ಸರ್ಪದಂತೆ ಚಪಲರಾದ ಪೋರ್ತುಗೀಜರ ವಶದಲ್ಲಿ ಈ ಕಿಲ್ಲೆ ಇರುವದರಿಂದ ಯೋಚನೆ ಮಾಡಬೇಕಾದ ಸಂದರ್ಭವಿದೆ. ಯಾಕಂದರೆ ಈ ಪೋರ್ತಗೀಜರು ಯಾವ ಕಾರ್ಯದಲ್ಲಿಯೂ ದುರ್ಲಕ್ಷ ಮಾಡುವದಿಲ್ಲ. ಹಾಗಿದ್ದರೆ ಅವರು ಸಾವಿರಾರು ಹರದಾರಿಗಳಿಂದ ಬಂದು ಇಲ್ಲಿ ಬಾಳುವೆ ಮಾಡುವ ಸಾಹಸ ಮಾಡುತ್ತಿದ್ದಿಲ್ಲ. ಅವರು ಜಾತ್ಯಾ ಶೂರರೂ. ಚಪಲರೂ, ಕಷ್ಟಾಳುಗಳೂ ಇರುವರೆಂತಲೇ ಈ ಬಗೆಯ ಸಾಹಸ ಮಾಡಿರುತ್ತಾರೆ. ಇಂಥವರ ಕೂಡ ವ್ಯವಹಾರವಿದ್ದದರಿಂದ ಕಠಿಣವೆಂದು ಅನ್ನಬೇಕಾಗುತ್ತದೆ.

ಚಿಮಣಾಜಿಅಪ್ಪಾ—ಮಲ್ಹಾರಬಾ, ನೀನು ಹೇಳಿದ್ದು ನಿಜವಿರುವದು. ಆದರೆ ಶತ್ರುವು ಬಲಿಷ್ಠನಿದ್ದಷ್ಟು ನಮಗೆ ಹುರುಪು ಬರಬೇಕು. ಬಲಿಷ್ಠ ಶತ್ರುವನ್ನು ಗೆದ್ದರೇ ನಮ್ಮ ನಿಜವಾದ ಪೌರುಷವು; ಒಬ್ಬ ಹೇಡಿಯನ್ನು ತಡವಿ ಸೋಲಿಸಿ ಓಡಿಸಿದರೆ ಅದರಿಂದ ಆವ ಪೌರುಷಸಂಪಾದನೆಯಾಗುವದು? ಶತ್ರುವು ಬಲಿಷ್ಠನಿದ್ದದ್ದು ಹಿತವೇ ಸರಿ! ಇದರಿಂದ ನಮ್ಮ ನಿಜವಾದ ಸಾಮರ್ಥ್ಯದ ಪರೀಕ್ಷೆಯಾಗುವದು. ನನಗಂತೂ ಈ ಕಿಲ್ಲೆಯನ್ನು ನೋಡಿ ಇಂಥ ದುರ್ಭೇದ್ಯ ಕಿಲ್ಲೆಯನ್ನು ಕೈವಶಮಾಡಿಕೊಳ್ಳದೆ ಬಿಡಲಿಕ್ಕಿಲ್ಲೆಂಬ ಆತ್ಮವಿಶ್ವಾಸವು ಉಂಟಾಗ ಹತ್ತಿದೆ. ನಾನು

ಶ್ರೀಮಂತಸರಕಾರದ ಮುಂದೆ ಮಾಡಿದ ಪ್ರತಿಜ್ಞೆಯು ಧ್ವಂಸಪಡಲಾರಂಭಿಸಿರುತ್ತದೆ. ಈ ದುರ್ಗವನ್ನು ಕೈವಶಮಾಡಿಕೊಳ್ಳುವದು ಎಷ್ಟು ಕಠಿಣವಿದ್ದರೂ ಕೈವಶಮಾಡಿಕೊಳ್ಳದೆ ಬಿಡುವ ಹಾಗಿಲ್ಲ. ದುರ್ಗವನ್ನು ಕೈವಶಮಾಡಿಕೊಂಡು ಪ್ರತಿಜ್ಞೆಯನ್ನು ಪೂರ್ಣಮಾಡಬೇಕು. ಇಲ್ಲವೆ ಧಾರಾತೀರ್ಥದಲ್ಲಿ ದೇಹವನ್ನರ್ಪಿಸಿ ವೀರಸ್ವರ್ಗವನ್ನು ಪಡೆಯಬೇಕು. ಇವೆರಡರ ಹೊರತು ಮೂರನೇ ಮಾರ್ಗವು ನನಗೆ ಉಳಿದಿರುವದಿಲ್ಲ.

ಈ ಮೇರೆಗೆ ಚಿಮಣಾಜಿಯು ಮಾತನಾಡಲು ಹೋಳಕರನು ಒಳ್ಳೇ ಆವೇಶದಿಂದ—ಸರಕಾರ, ಸರಕಾರದ ನಿರ್ಧಾರದಂತೆಯೇ ಈ ಸೇವಕನ ನಿರ್ಧಾರವೂ ಇರುತ್ತದೆ. ಈ ವಿಷಯದಲ್ಲಿ ಸ್ವಲ್ಪವೂ ಯೋಚನೆಯನ್ನು ಮಾಡಲಾಗದು. ಈ ಹೋಳಕರನು ಜೀವಿಸಿರುವ ವರೆಗೆ ಸರಕಾರಕ್ಕೆ ವಿಜಯವು ದೊರೆಯಲಿಲ್ಲೆಂಬ ಮಾತು ಎಂದೂ ಸಂಭವಿಸುವ ಹಾಗಿಲ್ಲ. ಪ್ರತ್ಯಕ್ಷ ಯುದ್ಧವು ಪ್ರಾರಂಭವಾಗುವದೊಂದೇ ತಡ; ಶತ್ರುವು ಎಷ್ಟು ಬಲಿಷ್ಠನಿರುವನೋ ಎಂಬದನ್ನು ನೋಡಿಬಿಡುತ್ತೇನೆ. ಡೋಣಿಗಳನ್ನೂ ಜಹಾಜುಗಳನ್ನೂ ತಕ್ಕೊಂಡು ಸಮುದ್ರತೀರದಲ್ಲಿ ಎಲ್ಲಕಡೆಗೆ ಬಲವಾದ ಕಾವಲಿರಿಸಿ ಹೆಬ್ಬಾಗಿಲಕ್ಕೆ ತೋಫುಹಚ್ಚಿ ಹೊಡೆಯ ಹತ್ತಿದರೆ ಬಿಲದೊಳಗೆ ಸಿಕ್ಕ ಸರ್ಪವು ಒದ್ದಾಡಿ ಮೃತಪಡುವಂತೆ ಈ ಫಿರಂಗಿಗಳ ಅವಸ್ಥೆಯಾಗುವದು. ಸರಕಾರ, ನಾವು ಬಂದು ಬಹಳ ಹೊತ್ತಾಯಿತು. ಕಿಲ್ಲೆಯ ಎಲ್ಲ ಭಾಗವನ್ನೂ ನೋಡಿದ್ದಾಯಿತು. ಎಲ್ಲೆಲ್ಲಿ ಕೊಳ್ಳಿ ಇಡಬೇಕೆಂಬದನ್ನು ಶಾಂತಮನಸ್ಸಿನಿಂದ ವಿಚಾರ ಮಾಡೋಣ; ಸದ್ಯಕ್ಕೆ ನಾವು ಪಾಳೆಯಕ್ಕೆ ಹೋಗೋಣ ನಡೆಯಿರಿ.

ಈ ಪ್ರಕಾರ ಹೋಳಕರನು ಮಾತನಾಡಲು ಅದಕ್ಕೆ ಚಿಮಣಾಜಿಯು ಒಪ್ಪಿಕೊಂಡು ಇಬ್ಬರೂ ಅಲ್ಲಿಂದ ಹೊರಟು ಪಾಳೆಯಕ್ಕೆ ಬಂದರು. ಚಿಮಣಾಜಿಯು ಬಂದು ಕುಳಿತುಕೊಳ್ಳುವದಕ್ಕೂ ತುಳಾಜಿಯು ಶಿವ್ಯಾಯಿಯ ಕೆಲಸ ಮುಗಿಸಿಕೊಂಡು ಬರುವದಕ್ಕೂ ಮೇಳು ಬಿದ್ದಿತು. ತುಳಾಜಿಯು ಶ್ರೀಮಂತರಿಗೆ ಮುಜುರೆ ಮಾಡಿ ಕುಳಿತುಕೊಂಡನು. ಸ್ವಲ್ಪ ಹೊತ್ತು ಉಭಯತರೂ ವಿಶ್ರಾಂತಿಯನ್ನು ಹೊಂದಿದ ಬಳಿಕ ತುಳಾಜಿಯು ಹೇಳತೊಡಗಿದನು.

‘‘ಮಹಾರಾಜ, ತಮ್ಮ ಅಪ್ಪಣೆ ಹೊಂದಿ ನಾನು ಶಿವ್ಯಾಯಿಗಾಗಿ

ದುರ್ಗಕ್ಕೆ ಹೋದೆನು. ನಾನು ಶ್ರೀಮಂತಸರಕಾರದ ರಾಯಭಾರಿ ಇದ್ದೇನೆಂದು ಹೇಳಲು, ಕಾವಲುಗಾರರು ನನಗೆ ಒಳಗೆ ಹೋಗಲು ಅಪ್ಪಣೆ ಕೊಟ್ಟರು. ನಾನು ಪದ್ಧತಿಯಂತೆ ಕಿಲ್ಲೆಯ ಮುಖ್ಯಸ್ಥನ ಬಳಿಗೆ ಹೋದೆನು. ಮುಖ್ಯ ಕಿಲ್ಲೇದಾರನಿಗೆ ಹಿಂದುಸ್ಥಾನೀ ಭಾಷೆಯು ಚನ್ನಾಗಿ ಬರುತ್ತದೆ. ಉಳಿದ ಧರ್ಮಾಧಿಕಾರಿಗಳಿಗೆ ಹಿಂದುಸ್ಥಾನಿಯು ತಿಳಿಯುವದಿಲ್ಲ. ಆದ್ದರಿಂದ ನಾನು ಕಿಲ್ಲೇದಾರನೊಡನೆಯೇ ಮಾತನಾಡಬೇಕಾಯಿತು. ಕಿಲ್ಲೇದಾರನು ಉದಾರಮತವಾದಿಯಿರುವನು. ಆದರೆ ಉಳಿದ ಧರ್ಮಾಧಿಕಾರಿಗಳು ಪ್ರತ್ಯಕ್ಷ ರಾಕ್ಷಸರಂತಿರುವರು. ಅವರ ಮುಂದೆ ಕಿಲ್ಲೇದಾರನ ಸತ್ತೆಯು ವಿಶೇಷವಾಗಿ ನಡಿಯುವಂತೆ ತೋರಲಿಲ್ಲ. ಶ್ರೀಮಂತಸರಕಾರದ ಆಗಮನದಿಂದ ಕಿಲ್ಲೇದಾರನು ಅಂಜಿಕೊಂಡಿರುವನು. ಒಡಂಬಡಿಕೆ ಮಾಡಿಕೊಂಡು ಈ ಕುತ್ತದಿಂದ ಪಾರಾಗಬೇಕೆಂದು ಅವನು ಹೆಣಗುತ್ತಿರುವನು; ಆದರೆ ಧರ್ಮಾಧಿಕಾರಿಗಳು ಅವನ ಈ ವರ್ತನವನ್ನು ನಿಷೇಧಿಸುತ್ತಿರುವಂತೆ ತೋರುವದು. ಆದರೂ ಕಿಲ್ಲೇದಾರನು ಧರ್ಮಾಧಿಕಾರಿಗಳಿಗೆ ಏನೇನೋ ತಿಳಿಹೇಳಿ, ನನಗೆ ಕೆಲವು ಒಡಂಬಡಿಕೆಯ ಕರಾರುಗಳನ್ನು ಹೇಳಿದನು. ಅವು ಯಾವವೆಂದರೆ:—(೧) ಶ್ರೀಮಂತ ಸರಕಾರಕ್ಕೆ ಈಗಾದ ಖರ್ಚನ್ನು ಕೊಡುವೆವು. (೨) ನಮ್ಮ ವಶದಲ್ಲಿರುವ ದುರ್ಗಗಳ ಮೇಲೆ ಶ್ರೀಮಂತ ಸರಕಾರದ ಅಧಿಕಾರವಿರಬಾರದು. (೩) ಆ ದುರ್ಗಗಳ ಮೇಲೆ ನಮ್ಮ ಪೂರ್ಣ ಸ್ವಾತಂತ್ರ್ಯವನ್ನು ಒಪ್ಪಿಕೊಳ್ಳಬೇಕು. (೪) ಪರಸ್ಪರರು ಪರಸ್ಪರರೊಡನೆ ಯುದ್ಧವ ಮಾಡಬಾರದು.

ಈ ಮೇರೆಗೆ ಕಿಲ್ಲೇದಾರನು ತನ್ನ ಕರಾರುಗಳನ್ನು ಹೇಳಲು ಅವನ ಆಶಯವನ್ನು ತಿಳಿದು ನಾನು ಸರಕಾರದ ಧೋರಣಕ್ಕನುಸಾರವಾಗಿ ಇಂತು ಕರಾರುಗಳನ್ನು ಹೇಳಿದೆನು. (೧) ಪೋರ್ತುಗೀಜರು ವಸಯಿಪ್ರಾಂತವನ್ನು ಸಮಗ್ರವಾಗಿ ಬಿಟ್ಟುಕೊಡಬೇಕು. (೨) ಹಿಂದುಪ್ರಜೆಗಳಿಗೆ ಯಾವ ಬಗೆಯಿಂದಲೂ ತೊಂದರೆ ಕೊಡಬಾರದು. (೩) ಅವರನ್ನು ಯಾವ ಕಾರಣದಿಂದಲೂ ಕ್ರಿಸ್ತಿಧರ್ಮದಲ್ಲಿ ಸೇರಿಸಿಕೊಳ್ಳಬಾರದು. (೪) ಈಗ ಸೆರೆಯಲ್ಲಿದ್ದ ಹಿಂದುಗಳನ್ನು ಬಿಟ್ಟುಬಿಡಬೇಕು. (೫) ಇನ್ನುಮುಂದೆ ಪೋರ್ತುಗೀಜರು ವ್ಯಾಪಾರವಲ್ಲದೆ ರಾಜಕಾರಣದಲ್ಲಿ ಯಾವ ಬಗೆಯಿಂದಲೂ ಕೈ ಹಾಕಕೂಡದು. (೬) ಈಗ ನಮಗಾದ ಯುದ್ಧದ ಖರ್ಚನ್ನು ಕೊಡಬೇಕು.

ಈ ಪ್ರಕಾರ ನಾನು ಹೇಳಿದ ಕರಾರುಗಳನ್ನು ಕೇಳಿ ಕಿಲ್ಲೇದಾರನು ಬೆದರಿದನು. ಈ ಕರಾರುಗಳಂತೆ ನಡೆಯಲು ಅವನು ಇಚ್ಛೆಪಡಲಿಲ್ಲ. ಹೊಸದಾಗಿ ಬಂದ ಧರ್ಮಾಧಿಕಾರಿಯಂತೂ ಇದಕ್ಕೆ ತೀರ ವಿರೋಧಿಸಿದನು. ನಾನು ಅವರ ವಿಚಾರಗಳನ್ನು ಧೋರಣದಿಂದಲೇ ತಿಳಿದೆನು. ನೀವು ಈ ಕರಾರುಗಳಿಗೆ ಒಪ್ಪದಿದ್ದರೆ ನಾಳೆಗೇ ಯುದ್ಧವನ್ನು ಸುರುವು ಮಾಡುವೆವು ಎಂದು ನಾನು ಖಂಡಿತನಾಗಿ ಹೇಳಿದೆನು. ಕಿಲ್ಲೇದಾರನ ಮನಸ್ಸಿನಲ್ಲಿ ಈಗಲೇ ಯುದ್ಧಮಾಡುವದಿರುವದಿಲ್ಲ. ಯಾಕಂದರೆ ಮುಂಬಯಿಂದ ಮದ್ದು-ಗುಂಡುಗಳು ಸಹಾಯಕ್ಕೆ ಬರುವ ದಾರಿಯನ್ನು ಅವನು ನೋಡುತ್ತಿರುವನು. ಈಗಲೇ ಯುದ್ಧವನ್ನು ಸಾರಿದರೆ ಮಧ್ಯದಲ್ಲಿಯೇ ಸಾಮಗ್ರಿಯು ತೀರಿ ಪೇಚಾಡುವ ಪ್ರಸಂಗ ಬರುವದೆಂಬ ಯೋಚನೆಯು ಅವನಿಗೆ ಪೂರ್ಣವಾಗಿ ಉಂಟು; ಆದರೆ ಈ ಒಳಗಿನ ಬೇನೆಯನ್ನು ತಿಳಿಯದೆ ಹೊಸದಾಗಿ ಬಂದ ಧರ್ಮಾಧಿಕಾರಿಯು ಈಗಲೇ ಯುದ್ಧ ಮಾಡುವ ಡೌಲನ್ನು ತೋರಿಸುತ್ತಿರುವನು. ಕೊನೆಗೆ ನಾನು ವಿರಸವಾಗುವಂತೆ ಮಾತನಾಡದೆ ನಿಮ್ಮ ಕರಾರುಗಳನ್ನು ನಮ್ಮ ಸರಕಾರಕ್ಕೆ ತಿಳಿಸಿ ಮುಂದೆ ನಿಮಗೆ ಹೇಳತಕ್ಕದ್ದನ್ನು ಹೇಳುವೆನು ಎಂದು ಮಾತನ್ನು ಮುಗಿಸಿಕೊಂಡು ಇತ್ತ ಹೊರಟು ಬಂದೆನು

ಈ ಮೇರೆಗೆ ಮಾತನಾಡಿ ತುಳಾಜಿಯು ಸುಮ್ಮನಾಗಲು ಅವನ ಮಾತುಗಳನ್ನೆಲ್ಲ ಶಾಂತ ಮನಸ್ಸಿನಿಂದ ಕೇಳುತ್ತಿದ್ದ ಚಿಮಣಾಜಿಯು ಒಮ್ಮೆಲೆ—ಶಾಬಾಸ್ ತುಳಾಜಿ, ರಾಯಭಾರಿಯ ಕೆಲಸ ಮಾಡಲಿಕ್ಕೆ ನೀನು ಯೋಗ್ಯನಿರುತ್ತೀ; ಶತ್ರುಗಳ ಮುಂದೆ ಹೋದ ರಾಯಭಾರಿಯು ವಿರಸವಾಗುವ ಪ್ರಸಂಗ ಬಂದಾಗ ಉಪಾಯಾಂತರದಿಂದ ಪಾರಾಗಿ ಬರಬೇಕಲ್ಲದೆ ಅವರ ಕೈಸೆರೆಯಲ್ಲಿ ಬಿದ್ದು, ಕೊಳೆಯುವ ಪ್ರಸಂಗವನ್ನು ತಂದುಕೊಳ್ಳಬಾರದು. ಶತ್ರುಪಕ್ಷದವರು ಮೂರ್ಖರಿದ್ದರೆಂದರೆ ರಾಯಭಾರಿಗಳ ಮೇಲೆ ಸಿಟ್ಟಾಗಿ ಅವರ ಅಪಮಾನ ಮಾಡುವದು ಇಲ್ಲವೆ ಅವರನ್ನು ಸೆರೆಯಿರಿಸುವದು ಮೊದಲಾದ ಔದ್ಧತ್ಯದ ಕರ್ಮಗಳನ್ನು ಮಾಡುತ್ತಾರೆ. ನಿಜವಾಗಿ ನೋಡಿದರೆ ಇದು ಬಹು ನೀಚತನದ ಕೆಲಸವಾಗಿರುತ್ತದೆ. ರಾಯಭಾರಿಗಳ ಮೇಲೆ ಯಾರೂ ಹರಿಯಹಾಯಬಾರದು. ಹಾಗೆ ಮಾಡುವದು ಕ್ಷಾತ್ರಧರ್ಮವೇ ಅಲ್ಲ. ಇರಲಿ. ನೀನು ಒಮ್ಮೆ ಫಿರಂಗಿಗಳ ಮುಂದೆ

ಹೋಗಿ ಊದುವ ಶಂಖವನ್ನು ಊದಿ ಬಂದಿರುತ್ತೀ; ಇನ್ನು ನಮ್ಮ ಕೆಲಸ ವಾದಂತಾಯಿತು. ಇನ್ನುಮುಂದೆ ನಮಗೆ ಬೇಕಾದಾಗ ಯುದ್ಧ ಪ್ರಾರಂಭಿಸಲಿಕ್ಕೆ ಮಾರ್ಗವಾಯಿತು. ಫಿರಂಗೀಕಿಲ್ಲೇದಾರನ ಕರಾರುಗಳನ್ನು ನೋಡಿದರೆ ನಮ್ಮ ದಂಡಯಾತ್ರೆಯೆಂದರೆ ಅವನಿಗೆ ಕಃಪದಾರ್ಥವಾಗಿ ತೋರಿದಂತೆ ಕಂಡು ಬರುತ್ತದೆ. ಅವನ ಈ ಸೊಕ್ಕಿನ ಕರಾರುಗಳಿಗೆ ಯುದ್ಧವನ್ನು ಬೇಗನೆ ಪ್ರಾರಂಭಿಸುವದೇ ಉತ್ತರವಾಗಿರುವದು. ಪೂರ್ಣ ಅಧಿಕಾರವಿಲ್ಲದೆ ಮಾತಾಡುವವನ ಮಾತುಗಳಿಗೆ ಹೊಣೆಗಾರರಾರು?

---

## (೧೩) ದುರ್ಗದಲ್ಲಿಯ ಗೊಂದಲ.



ತುಳಾಜಿಯು ಶಿಷ್ಟಾಯಿಗೆ ಬಂದು ಹೋದಬಳಿಕ ದುರ್ಗದಲ್ಲಿಯ ಫಿರಂಗಿಗಳಲ್ಲಿ ವಿಶೇಷವಾಗಿ ಗೊಂದಲವೆದ್ದಿತು. ದುರ್ಗದ ಕಿಲ್ಲೇದಾರನಿಗೂ, ಧರ್ಮಾಧಿಕಾರಿಗೂ ಬಹಳ ಮತಭೇದವಾಯಿತು. ಶತ್ರುವು ಪ್ರಬಲನಿದ್ದದರಿಂದ ನಮ್ಮ ಆಟವು ನಡೆಯುವದಿಲ್ಲೆಂಬದು ಕಿಲ್ಲೇದಾರನಿಗೆ ಸಂಪೂರ್ಣವಾಗಿ ಮನವರಿಕೆಯಾಗಿತ್ತು; ಆದರೆ ಪೋರ್ತುಗಾಲದಿಂದ ಹೊಸದಾಗಿ ಬಂದ ಧರ್ಮಾಧಿಕಾರಿಗೆ ಅದರ ಪರಿಜ್ಞಾನವಿದ್ದಿಲ್ಲ. ಪೋರ್ತುಗೀಜ ಧರ್ಮದ ಗುರುವಂತೂ ಆ ಹೊಸ ಧರ್ಮಾಧಿಕಾರಿಗೆ ವಿಶೇಷ ಅಧಿಕಾರವ ಕೊಟ್ಟು ಕಳುಹಿಸಿದ್ದನು. ಹೀಗೆ ಇಬ್ಬರೆಯು ಅಧಿಕಾರಿಗಳಿಂದ ದುರ್ಗದಲ್ಲಿ ಐಕ್ಯವು ತಪ್ಪುವ ಪ್ರಸಂಗವು ಬಂದಿತು. ಕಿಲ್ಲೇದಾರನು ಬಹು ಘಾಬರಿಯಾಗಿದ್ದನು. ಅವನು ಉತ್ತಮ ಯೋದ್ಧಾ ಪುರುಷನಿದ್ದನಲ್ಲದೆ, ಮೋಠಾದ ಮುತ್ಸದ್ದಿಯೂ ಆಗಿದ್ದನು. ಇಂಥವನಿಗೆ ಕೂಡ ಈ ಪ್ರಸಂಗದಲ್ಲಿ ಏನು ಮಾಡಬೇಕೆಂಬದು ತಿಳಿಯದೆ ಹೋಯಿತು. ಯಾವದೊಂದು ರಾಜ್ಯದಲ್ಲಾಗಲಿ, ಮನೆತನದಲ್ಲಾಗಲಿ, ಸಂಸ್ಥೆಯಲ್ಲಾಗಲಿ ಇಬ್ಬರೆಯ ಅಧಿಕಾರವು ಪ್ರಾರಂಭವಾಗುವದು ಶುಭಲಕ್ಷಣವಲ್ಲ. ಸತ್ತೆಯು ಒಂದೇ ಮುಖದಿಂದ ಪ್ರವಹಿಸುತ್ತಿರಬೇಕಲ್ಲದೆ, ಅನೇಕ ಮುಖಗಳಿಂದ ಪ್ರವಹಿಸಬಾರದು. ಪ್ರಜಾಸತ್ತಾತ್ಮಕ ರಾಜ್ಯವೇ ಆಗಲಿ, ರಾಜಸತ್ತಾತ್ಮಕ ರಾಜ್ಯವೇ ಆಗಲಿ ಆಢಳಿತದಲ್ಲಿ ಸತ್ತೆಯು ಒಂದೇ ಮುಖವಾಗಿರುತ್ತದಲ್ಲದೆ ಹಲವು ಮುಖ

ವಾಗಿರುವದಿಲ್ಲ. ಸತ್ತೆಯು ಬಹು ಮುಖವಾಗಿ ಅದು ಪರಸ್ಪರ ವಿರೋಧಕ್ಕೆ ಕಾರಣವಾದರೆ ಆ ರಾಜ್ಯವು ರಸಾತಳಕ್ಕೆ ಇಳಿಯಿತೆಂತಲೇ ತಿಳಿಯಬೇಕು.

ಪ್ರಸ್ತುತದ ವಸಯೀಕಿಲ್ಲೆಯಲ್ಲಿ ಹೀಗೆ ವಿರೋಧಕ್ಕೆ ಕಾರಣವಾದ ಇಬ್ಬಗೆಯ ಅಧಿಕಾರವು ಪ್ರಾದುರ್ಭವಿಸಿದ್ದರಿಂದ ನಮ್ಮ ಅವನತಿಯು ತಪ್ಪದೆ ಆಗುವದೆಂದು ಕಿಲ್ಲೇದಾರನು ತಿಳಿದನು. ಆದರೆ ಈ ಅವನತಿಯನ್ನು ಹೇಗೆ ತಪ್ಪಿಸಬೇಕೆಂಬದು ತಿಳಿಯದಾಯಿತು. ಒಮ್ಮೊಮ್ಮೆ ಆತನ ಮನಸ್ಸಿನಲ್ಲಿ ತಾನು ತಟಸ್ಥನಾಗಿದ್ದು ಎಲ್ಲ ಅಧಿಕಾರವನ್ನು ಧರ್ಮಾಧಿಕಾರಿಗೇ ಒಪ್ಪಿಸಿ ಬಿಡಬೇಕೆಂಬ ವಿಚಾರವು ಉಂಟಾಗುತ್ತಿತ್ತು. ಒಮ್ಮೊಮ್ಮೆ ಹೀಗೆ ಮಾಡದೆ ಧರ್ಮಾಧಿಕಾರಿಯನ್ನೇ ಮೂಲೆಗೊತ್ತಿ ಎಲ್ಲ ಕೆಲಸಗಳನ್ನು ಸ್ವಂತ ವಿಚಾರದಿಂದ ಮಾಡಬೇಕೆಂಬ ವಿಚಾರ ಬರುತ್ತಿತ್ತು ತಾನು ಹ್ಯಾಗೆ ನಡೆದರೂ ತನ್ನ ಪಾಲಿಗೆ ಅಪಕೀರ್ತಿ ಬರುವದೆಂಬದು ಅವನ ಮನಸ್ಸಿನಲ್ಲಿ ನೊಣತಿಂದಂತೆ ಬಾಧಿಸುತ್ತಿದ್ದದರಿಂದ ಯಾವ ಮಾತನ್ನೂ ಅವನು ನಿರ್ಧರಿಸಲಾರದವನಾದನು. ಅವನು ಹೇಳಿಕೇಳಿ ಫಿರಂಗೀ ನೌಕರನಿದ್ದನು. ಒಬ್ಬರ ಸೇವೆಯನ್ನು ಕೈಕೊಂಡವನಿಗೆ ಪೂರ್ಣಸ್ವಾತಂತ್ರ್ಯವೆಲ್ಲಿಯದು? ಸ್ವಾತಂತ್ರ್ಯಶೂನ್ಯನಾದ ಅವನಲ್ಲಿ ಎಷ್ಟು ಪೌರುಷವಿದ್ದರೂ ವ್ಯರ್ಥವಾಗುವದು, ಎಷ್ಟು ಮುತ್ಸದ್ದಿತನವಿದ್ದರೂ ಕೆಲಸಕ್ಕೆ ಬಾರದಾಗುವದು. ಎಷ್ಟು ಶೌರ್ಯವಿದ್ದರೂ ಪ್ರಯೋಜನವಿಲ್ಲದೆ ಹೋಗುವದು. ಯಜಮಾನನು ಏನು ಅನ್ನುವನೋ ಎಂಬ ಅಂಜಿಕೆಯಿಂದ ನಡೆಯಬೇಕಾದ್ದರಿಂದ ಅವನ ಸದಸದ್ವಿವೇಕಬುದ್ಧಿಯ ಉಪಯೋಗವು ಆಗತಕ್ಕಷ್ಟು ಆಗುವದಿಲ್ಲ. ಯಾವನೊಬ್ಬ ಸ್ವತಂತ್ರಮನುಷ್ಯನು ತನಗೆ ತಿಳಿದಂತೆ ನಡೆಯುವ ಹಾಗೆ ನೌಕರಿಯೆಂಬ ಶೃಂಖಲೆಗೆ ಒಳಗಾದ ಮನುಷ್ಯನು ಹಾಗೆ ನಡೆಯಲಿಕ್ಕೆ ಎಂದೂ ಧೈರ್ಯಪಡುವದಿಲ್ಲ. ಅವನು ಒಡೆಯನ ಆಜ್ಞೆಯನ್ನೇ ಅನುಸರಿಸಬೇಕಾಗುತ್ತದೆ. ಒಡೆಯನ ಅಪ್ಪಣೆಯಂತೆ ನಡೆಯುವಾಗ ಕಾರ್ಯಹಾನಿಯಾಗುವದೆಂಬದು ಗೊತ್ತಿದ್ದರೂ ಅದರ ಕಡೆಗೆ ಅವನು ದುರ್ಲಕ್ಷ ಮಾಡಬೇಕಾಗುತ್ತದೆ. ಈ ಸೇವಕಧರ್ಮದ ಪುರುಷರ ಸ್ಥಿತಿಯಂತೆಯೇ ಪ್ರಸ್ತುತದ ಕಿಲ್ಲೇದಾರನ ಅವಸ್ಥೆಯಾಗಿತ್ತು. ಅವನು ಬಹು ದೀರ್ಘವಾಗಿ ವಿಚಾರಿಸಿ ನೋಡಿ

ದನು. ಧರ್ಮಾಧಿಕಾರಿಯ ವಿರುದ್ಧವಾಗಿ ಆಚರಿಸುವದು ಅವನಿಗೆ ಸಮ ರ್ಪಕವಾಗಿ ತೋರದಾಯಿತು. ಯಾಕಂದರೆ ಹೀಗೆ ಮಾಡುವದರಿಂದ ತನ್ನ ಯಜಮಾನನ ಆಜ್ಞಾಭಂಗ ಮಾಡಿದ ದೋಷವು ತನಗೆ ತಟ್ಟುವ ದೆಂದು ಅವನು ಭಾವಿಸಿದನು. ಕಾರ್ಯವು ಕೆಡಲಿ, ವಸಯೀ ಕಿಲ್ಲೆಯನ್ನು ಬಿಡುವ ಪ್ರಸಂಗಬರಲಿ, ಇಲ್ಲವೆ ತನಗೆ ಧಾರಾತೀರ್ಥದಲ್ಲಿ ದೇಹಬಿಡುವ ಸಮಯ ಬರಲಿ, ಏನಾದರೂ ಮೇಲಿನವರ ಹುಕುಮಿನಂತೆಯೇ ನಡೆಯು ವದು ತನಗೆ ಶ್ರೇಯಸ್ಕರವೆಂದು ಆತನು ಭಾವಿಸಲಾರಂಭಿಸಿದನು. ಕೊನೆಗೆ ಅವನು ಅದನ್ನೇ ನಿರ್ಧರಿಸಿದನು ಧರ್ಮಾಧಿಕಾರಿಯ ಮಾತು ಗೆದೆಯಿತು. ಅವನಿಗೆ ಸ್ವರ್ಗವು ಮೂರೇ ಬೆರಳು ಉಳಿದಷ್ಟು ಸೌಖ್ಯವೆನಿಸಿತು. ಆದರೆ ಆ ಮೂರ್ಖನಿಗೆ ಮುಂದೆ ತಮ್ಮ ಗತಿಯೇನಾದೀತೆಂಬ ವಿಚಾರ ಬರಲಿಲ್ಲ.

ಧರ್ಮಾಂಧರಿಗೂ, ದುರಭಿಮಾನಗ್ರಸ್ತರಿಗೂ ಭವಿತವ್ಯವು ಗೊತ್ತಾ ಗುವದಿಲ್ಲ. ಗೊತ್ತಾಗುವದಿಲ್ಲವೆನ್ನುವದಕ್ಕಿಂತ ಅವರು ಆಕಡೆಗೆ ಲಕ್ಷ ಕೊಡುವದಿಲ್ಲೆನ್ನುವದು ವಿಹಿತವಾಗಿರುವದು. ಅವರು ಸರ್ವದಾ ಅಹಂ ಭಾವದಿಂದ ಉಬ್ಬಿದವರಾದ್ದರಿಂದ ಅವರಿಗೆ ಭವಿತವ್ಯವನ್ನು ಸ್ಮರಿಸಲಿಕ್ಕೆ ಅವಕಾಶವೇ ಸಿಕ್ಕುವದಿಲ್ಲ. ಇದೇ ಹಾಡು ಆ ಹುಚ್ಚ ಧರ್ಮಾಧಿಕಾರಿಗೂ ಆಯಿತು. ಅವನು ಪೇಶ್ವೆರೆಂದರೆ ಕೀಪದಾರ್ಥವೆಂದು ಭಾವಿಸಿದನು. ತಮ್ಮ ಕ್ರೂರವಾದ ತೋಫುಗಳ ಮುಂದೆ ಪೇಶ್ವೆಯರ ಆಟವು ಸಾಗದೆಂದು ಅವನು ಖಂಡಿತ ತಿಳಿದಿದ್ದನು. ಆದರೆ ಆಂಗ್ರೆ ಜನರು ಸಮುದ್ರಪ್ರದೇಶ ದಲ್ಲಿ ಬಲವಾದ ಕಾವಲವನ್ನಿರಿಸಿ ಮುಂಬಯಿಯಿಂದ ಬರತಕ್ಕ ಸಹಾಯ ವನ್ನು ತಪ್ಪಿಸುವರೆಂಬ ಕಲ್ಪನೆಯು ಅವನ ಮನಸ್ಸಿನಲ್ಲಿ ಬರಲಿಲ್ಲ. ಹೀಗೆ ಒಂದೆರಡು ದಿನಗಳು ಕಳೆದವು. ಮೂರನೆಯ ದಿನ ಫಿರಂಗಿಗಳ ಸೈನಿಕರಿಗೆ ಆಂಗ್ರೆ ಜನರ ಸಾಮರ್ಥ್ಯದ ಅನುಭವವು ಬರತೊಡಗಿತು. ಫಿರಂಗೀ ಸೈನಿ ಕರು ಕಿಲ್ಲೆಯನ್ನು ಬಿಟ್ಟು ಸಮುದ್ರದಲ್ಲಿ ಕಾಲಿಡುವದು ಅಶಕ್ಯವಾಯಿತು. ಎಲ್ಲೆಡೆಗಳಲ್ಲಿಯೂ ಆಂಗ್ರೆ ಜನರ ಜಹಾಜುಗಳೂ, ದೋಣಿಗಳೂ, ಪತ್ತೇ ಮಾರಿಗಳೂ ವ್ಯಾಪಿಸಿದವು. ಆಂಗ್ರೇಜನರ ಈ ಬಗೆಯ ಸಾಮರ್ಥ್ಯವನ್ನು ನೋಡಿ ಕಿಲ್ಲೆಯ ಮೇಲಿನ ಧರ್ಮಾಧಿಕಾರಿಯು ಸೊಂಡೆಯೊಣಗಿತು. ತಾನು ಕಿಲ್ಲೇದಾರನ ಮಾತಿಗೆ ವಿರುದ್ಧವಾಗಿ ವರ್ತಿಸಿದ್ದು ತಪ್ಪೆಂದು ಅವನಿಗೆ ಆಗೆ ಅನಿಸಲಾರಂಭಿಸಿತು. ಆದರೆ ಕೆಲಸವು ಕೈಮಿಾರಿ ಹೋದಬಳಿಕ ಎಷ್ಟು ಚಿಂತಿ

ಸಿದರೂ ವ್ಯರ್ಥವಷ್ಟೇ; ಆ ಧರ್ಮಾಧಿಕಾರಿಗೆ ಮುಂದೇನು ಮಾಡಬೇಕೆಂಬದು ತಿಳಿಯದಾಯಿತು. ಹೀಗೆ ಒಂದೆರಡು ದಿವಸಗಳು ಕಳೆಯಲು ಚಿಮಣಾಜಿಯು ಗೊತ್ತುಪಡಿಸಿದಂತೆ ಪಾಳಯದ ಕೆಲಭಾಗದೊಡನೆ ವಸಯಿ ಕೋಟೆಗೆ ಬಲವಾದ ಮುತ್ತಿಗೆಯನ್ನಿರಿಸಿದನು.

ಕೋಟೆಗೆ ಮುತ್ತಿಗೆ ಬಿದ್ದ ಬಳಿಕಂತೂ ಒಳಗಿನ ಫಿರಂಗೀ ಜನರ ಎದೆಯು ದಪದಪ ಹಾರಲಾರಂಭಿಸಿತು. ಆಗ ಮೋನೇಸೀಸ್ಸು, ಪೆರೆರಾ ಎಂಬ ಅಧಿಕಾರಿಗಳು ಒತ್ತಟ್ಟಿಗೆ ಕೂಡಿದರು. ಮುಖ್ಯ ಧರ್ಮಾಧಿಕಾರಿಯಾದ ಕಾರ್ಡಿನಲ್ ಬಾರ್ಬಾರೋಸನೂ ಬಂದನು. ಈ ಮೂವರೂ ಏಕಾಂತಮಂದಿರದಲ್ಲಿ ಕುಳಿತು ಪ್ರಸ್ತುತದ ಪ್ರಸಂಗದಲ್ಲಿ ಹ್ಯಾಗೆ ಪಾರಾಗಬೇಕೆಂಬ ವಿಚಾರವನ್ನು ನಡಿಸಿದರು. ಪೆರೆರಾ ಎಂಬ ಅಧಿಕಾರಿಗೆ ಪೇಶ್ವೇರ ಸಾಮರ್ಥ್ಯದ ವಿಷಯವಾಗಿ ಅಜ್ಞಾನವಿದ್ದು, ತಮ್ಮ ತೋಫು-ಬಂದೂಕಗಳ ಮೇಲೆ ಅವನ ಪೂರ್ಣ ನಂಬಿಗೆಯಿದ್ದದರಿಂದ ಆವನು ಯುದ್ಧವನ್ನು ಪ್ರಾರಂಭಿಸಬೇಕೆಂದು ತನ್ನ ಅಭಿಪ್ರಾಯವನ್ನು ಆಡಿತೋರಿಸಿದನು. ಆದರೆ ಆತನ ಈ ಮಾತು ಮೋನೇಸೀಝು ಎಂಬವನ ಮನಸ್ಸಿಗೆ ಬರಲಿಲ್ಲ. ಮೋನೇಸೀಝುನು ಸದ್ಯಕ್ಕೆ ವಸಯಿ ಕೋಟೆಗೆ ಕಿಲ್ಲೇದಾರನಾಗಿದ್ದು, ಯುದ್ಧದ ಒಡತಗಳನ್ನು ಬಲ್ಲವನಾಗಿದ್ದನು. ಸ್ವಬಲ-ಪರಬಲಗಳ ಜ್ಞಾನವು ಅವನಿಗೆ ಚನ್ನಾಗಿತ್ತು. ತಾವು ಈಗ ಸಂಗ್ರಾಮಸನ್ನದ್ಧರಾದರೆ ತಮಗೆ ಅಪಯಶಸ್ಸು ತಪ್ಪದೆಂಬ ಭರವಸೆಯು ಅವನಿಗಿತ್ತು. ಆದ್ದರಿಂದ ಅವನು ನುಡಿದನೇನಂದರೆ—"ನಿಮಗೆ ಶತ್ರುಗಳ ಬಲವೆಷ್ಟೆಂಬದರ ಕಲ್ಪನೆಯಿದ್ದಂತೆ ತೋರುವದಿಲ್ಲ. ನಮ್ಮ ಈ ತೋಫುಗಳಾಗಲಿ, ಬಂದೂಕಗಳಾಗಲಿ ಕಾರ್ಯಸಾಧಕವಾಗಲಾರವು. ಮರಾಟರು ಕಾಡುಜನರಲ್ಲ ಅವರಲ್ಲಿ ಪೌರುಷವಿದೆ, ಚಾತುರ್ಯವಿದೆ, ನಮ್ಮಕಿಂತಲೂ ಅವರಲ್ಲಿ ಸ್ವಾಭಿಮಾನವಿದೆ, ಶೌರ್ಯವಿದೆ, ಅವರು ನಮ್ಮೊಡನೆ ಯುದ್ಧಕ್ಕೆ ಬರಬೇಕಾದರೆ ಬರಿಗೈಯಿಂದ ಬಂದಿರುವದಿಲ್ಲ; ನಮ್ಮ ಪ್ರಾಣಹೀರುವದಕ್ಕೆ ಸಮರ್ಥವಾದ ಬಂದೂಕ ಹಾಗು ತೋಫುಗಳನ್ನು ಸಂಗಡ ತಂದಿರುತ್ತಾರೆ. ಮುಂಬಯಿಯಲ್ಲಿರುವ ಇಂಗ್ರಜರು ಅವರಿಗೆ ಬಂದೂಕಗಳನ್ನು ಒದಗಿಸಿಕೊಟ್ಟರುವರು. ಮರಾಟರ ಅಂಜಿಕೆಯು ಇಂಗ್ರಜರಿಗೆ ಚನ್ನಾಗಿರುವದು. ಆದ್ದರಿಂದ ಪ್ರಸ್ತುತ ಪ್ರಸಂಗದಲ್ಲಿ ಇಂಗ್ರಜರಿಂದ ನಮಗೆ ಸಹಾಯವೊದಗ್ಗಿ

ತ್ತದೋ ಇಲ್ಲವೋ ಎಂಬದನ್ನು ಈಗಲೇ ಹೇಳಲು ಬರುವಂತಿಲ್ಲ. ಇಂಥ ಪ್ರಸಂಗದಲ್ಲಿ ಯುದ್ಧವನ್ನು ಹ್ಯಾಗೆ ಪ್ರಾರಂಭಿಸಬೇಕು? ನಾನು ಮುಂಬ ಯಿಗೆ ಪತ್ರಕಳಿಸಿದ್ದೇನೆ. ಆ ಪತ್ರಕ್ಕೆ ಇಂಗ್ರಜರಿಂದ ಏನು ಪ್ರತ್ಯುತ್ತರ ಬರುವದೆಂಬದನ್ನು ನೋಡಬೇಕಾಗಿದೆ. ಪತ್ರಬಂದನಂತರ ಮುಂದಿನ ಮಾತು. ಅಲ್ಲಿಯವರೆಗೆ ತಟಸ್ಥವಾಗಿರಬೇಕೆಂದು ನನ್ನ ವಿಚಾರ ವಿರುವದು.''

ಈ ಮೇರೆಗೆ ಮೋನೇಸೀಝುನು ಮಾತನಾಡಲು ಧರ್ಮಾಧ್ಯಕ್ಷನು ಮೆಲ್ಲಗೆ—ನಿಮ್ಮ ಮತವು ಯೋಗ್ಯವಾಗಿದೆ. ಆದರೆ ಮರಾಟರು ಬಲವಾದ ಮುತ್ತಿಗೆಯನ್ನಿರಿಸಿರಲು ನಾವು ಕೈಮುಚ್ಚಿಕೊಂಡು ಸುಮ್ಮನೆ ಕೂಡ್ರುವ ದೆಂದರೆ ನಮ್ಮ ರಣಹೇಡಿತನವು ವ್ಯಕ್ತವಾಗುತ್ತದೆ. ನಮ್ಮ ತಾಟಸ್ಥ್ಯದ ಲಾಭವನ್ನು ಪಡೆದು ಶತ್ರುಗಳು ಕೋಟೆಗೆ ಕಿಂಡಿಯನ್ನು ಕೆಡವಿ ಒಳನುಗ್ಗಿ ದರೆ ನಮ್ಮ ಗತಿಯೇನು? ಎಂದು ನುಡಿದನು. ಯುದ್ಧವಿಶಾರದನಲ್ಲದ ಧರ್ಮಾಧ್ಯಕ್ಷನ ಈ ಮಾತುಗಳನ್ನು ಕೇಳಿ ಕಿಲ್ಲೇದಾರನಿಗೆ ಅಂಥ ಸ್ಥಿತಿಯ ಲ್ಲಿಯೂ ಹುಚ್ಚುನಗೆ ಬಂದಿತು ಮನುಷ್ಯನಲ್ಲಿ ಯೋಗ್ಯತೆಯಿದ್ದಂತೆ ಮಾತುಗಳು ಹೊರಡುತ್ತವಲ್ಲದೆ ಯೋಗ್ಯತೆಯಿಲ್ಲದ ಮಾತುಗಳು ಹೊರಡ ಲಾರವು. ಎಂದು ಅವನು ತಿಳಿದುಕೊಂಡನು. ಕಿಲ್ಲೇದಾರನ ಈ ತಿಳುವಳಿ ಕೆಯು ಯಥಾಯೋಗ್ಯವಾಗಿರುವದು. ಜಾತ್ಯಾಪುಕ್ಕನಾದವನು ಖಂಬೀ ರತನದ ಮಾತುಗಳನ್ನಾಡನು. ಮೂರ್ಖನ ಮುಖದಿಂದ ಶಾಸ್ತ್ರವಾ ಣಿಯು ಹೊರಡಲಾರದು. ಅಸಜ್ಜನನ ವಾಣಿಯಲ್ಲಿ ಸಾಧುವಾಕ್ಯಗಳು ಕಂಡುಬರಲಾರವು. ವೀರನಲ್ಲದವನ ಮುಖದಿಂದ ರಣಕೌಶಲ್ಯದ ಮಾತು ಗಳು ಬರಲಾರವು. ಅದರಂತೆ ಆ ಪೋರ್ತುಗೀಜ ಧರ್ಮಾಧಿಕಾರಿಯು ಯಾವನೊಬ್ಬ ಹಿಂದುವಿನ ಕುಲಕೆಡಿಸಲಿಕ್ಕೆ ಬಲ್ಲನಷ್ಟೇ ಹೊರತು ಯುದ್ಧ ವಾರ್ತೆ ಕೂಡಾ ಅವನಿಗೆ ಗೊತ್ತಿರಲಿಲ್ಲ. ಆದ್ದರಿಂದಲೇ ಅವನು ಅಷ್ಟೊಂದು ಅಧೈರ್ಯಗೊಂಡು ಮಾತನಾಡಿದನು. ಕಿಲ್ಲೇದಾರನು ನಗೆ ಯಭರವು ತೆಗ್ಗಿದ ಬಳಿಕ ಮುಂದೆ ಏನು ಮಾಡಬೇಕೆನ್ನುವಿರಿ? ಎಂದು ಧರ್ಮಾಧ್ಯಕ್ಷನನ್ನು ಕೇಳಿದನು. ಆದರೆ ಹೌಹಾರಿ ಕುಳಿತ ಆ ಧರ್ಮಾ ಧ್ಯಕ್ಷನು ಏನು ಹಂಚಿಕೆ ಹೇಳಬಲ್ಲನು? ಅವನು ಚಿಂತಾತುರನಾಗಿ ಕುಳಿ ತುಕೊಳ್ಳಲು ಮೋನೇಸೀಝುನು—ನಾನು ನಿಮಗೆ ಈ ವಿಷಯದಲ್ಲಿ

ಮೊದಲೇ ಹೇಳಲಿಲ್ಲವೇ? ಮರಾಟರ ರಾಯಭಾರಿಯು ನಮ್ಮ ಬಳಿಗೆ ಬಂದಾಗ ನೀವು ನನ್ನ ಮಾತು ಕೇಳಿ ಒಡಂಬಡಿಕೆಗೆ ಒಪ್ಪಿಕೊಂಡಿದ್ದರೆ ಎಷ್ಟು ವಿಹಿತವಾಗುತ್ತಿತ್ತು? ಆಗಿನ ನಿಮ್ಮ ಧೈರ್ಯವನ್ನು ನೋಡಿದರೆ ಮರಾಟರು ಜೀವದಿಂದ ಪಾರಾಗಿ ಹೋಗುವರೋ ಇಲ್ಲವೋ ಎಂಬಂತೆ ತೋರುತ್ತಿತ್ತು. ಈಗ ಆ ಧೈರ್ಯವೆಲ್ಲಿ? ನಿಮ್ಮಂಥವರ ಕೈಯಲ್ಲಿ ಅಧಿಕಾರ ವುಳಿದರೆ ಕಿಲ್ಲೆಯ ಸಂರಕ್ಷಣವು ಹ್ಯಾಗೆ ಆದೀತು? ನೀವು ಧರ್ಮಾಧಿಕಾ ರಿಗಳು; ನಿಮ್ಮ ಕೆಲಸವು ಧರ್ಮಕಾರ್ಯಗಳಲ್ಲಿಯೇ ಹೊರತು ಯುದ್ಧ ದಂಥ ರಾಜಕರಣದಲ್ಲಿರುವದಿಲ್ಲ. ಯುದ್ಧಾದಿ ಕಾರ್ಯಗಳು ನಿಮಗೆ ನೀಗದ ಕೆಲಸಗಳು; ಹೀಗಿದ್ದು, ನಮಗೆ ಫೋಪಗುರುಗಳಿಂದ ಅಧಿಕಾರ ಸಿಕ್ಕಿದೆಯೆಂಬ ಹೆಮ್ಮೆಯಿಂದ. ನಮ್ಮೆಲ್ಲರ ಮುಖಭಂಗ ಮಾಡಿಬಿಟ್ಟಿರಿ. ಈಗ ನಿಮ್ಮ ಕೈಯಲ್ಲಿ ಕಿಲ್ಲೆಯಿರುವದು. ನೀವೇನೋ, ಕಿಲ್ಲೆಯೇನೋ ನೋಡಿಕೊಳ್ಳಿರಿ. ನನಗೆ ಅದರ ಸಂಬಂಧವಿಲ್ಲ. ಬೇಕಾದರೆ ಇಂದೇ ನಾನು ಈ ನೌಕರಿಯನ್ನು ಬಿಟ್ಟುಬಿಡುತ್ತೇನೆ. ಎಂದು ಹಾರಿಸಿ ಮಾತನಾಡಿದನು.

ಕಿಲ್ಲೇದಾರನ ಈ ಮಾತಿನಿಂದಂತೂ ಧರ್ಮಾಧ್ಯಕ್ಷನ ಕೈಕಾಲುಗಳು ಮತ್ತಿಷ್ಟು ಹೋದವು. ಅವನಿಗೆ ಛಳಿ ಬಂದಷ್ಟು ನಡುಗುಂಟಾಯಿತು. ಏನು ಮಾತಾಡಬೇಕೆಂಬದೇ ಅವನಿಗೆ ತಿಳಿಯದಾಯಿತು. ಮರಾಟರ ರಾಯಭಾರಿಯು ಬಂದಾಗ ತಾನು ಯಾಕೆ ಮಾತಾಡಿದ್ದೇನೆಂಬ ಪಶ್ಚಾತ್ತಾ ಪವು ಅವನಿಗೆ ಆಗಹತ್ತಿತು. ಪ್ರಸ್ತುತ ಪ್ರಸಂಗಕ್ಕೆ ಎದೆಗೊಡುವಷ್ಟು ಧೈರ್ಯವು ತನಗಿಲ್ಲದ್ದರಿಂದ ಇದೊಳ್ಳೆಯ ಬಿಗಿ ಬಂತೆಂದು ಅವನು ಮನ ದಲ್ಲಿಯೇ ಹಣ್ಣಾಗತೊಡಗಿದನು. ಅವನ ಗೌರವರ್ಣದ ಮುಖವು ಕಪ್ಪಿ ಟ್ಟಿತು. ಮೈಯು ನಡುಗಹತ್ತಿತು. ದನಿಯು ಕುಗ್ಗಿತು. ಯಾವನೊಬ್ಬನು ಪ್ರಾಣಾಂತಿಕವಾದ ಗಂಡಾಂತರದಲ್ಲಿ ಸಿಕ್ಕಾಗ ಅವನ ಸ್ಥಿತಿಯು ಹ್ಯಾಗಾ ಗುವದೋ ಹಾಗೆ ಆ ಧರ್ಮಾಧಿಕಾರಿಯ ಸ್ಥಿತಿಯಾಯಿತು. ಇಂಥ ದುರ ವಸ್ಥೆಯು ಒದಗಲು ನಡುಗುವ ಧನಿಯಿಂದ ಆತನು ಕಿಲ್ಲೇದಾರನ ಹಸ್ತ ವನ್ನು ಹಿಡಿದು ನುಡಿದನೇನಂದರೆ—“ನನ್ನ ತಪ್ಪನ್ನು ಕ್ಷಮಿಸು; ಇನ್ನು ಮುಂದೆ ಎಂದಿಗೂ ನಿನ್ನ ಮಾತಿಗೆ ಅಡ್ಡ ಬರಲಾರೆನು. ಪ್ರಸ್ತುತದ ಪ್ರಸಂಗದಲ್ಲಿ ಏನಾದರೂ ಹಂಚಿಕೆ ಮಾಡಿ ನನ್ನನ್ನೂ, ಕಿಲ್ಲೆಯನ್ನೂ ಸಂರ ಕ್ಷಿಸು!!”

ಕಿಲ್ಲೇದಾರನಿಗೆ ಮನಸ್ಸಿನಲ್ಲಿ ನಗೆ ಬಂದರೂ ಬಹಿರಂಗದಲ್ಲಿ ತೋರ್ಪಡಿಸದೆ ಆತನಿಗೆ ಸಮಾಧಾನದ ಮಾತುಗಳನ್ನು ಹೇಳಿ—ನೀವು ಹೀಗೆ ಪುಕ್ಕಜನರೆಂದು ನಾನು ಮೊದಲೇ ತಿಳಿದಿರುವೆನು. ನಾನು ಮಾಡತಕ್ಕ ಕೆಲಸವನ್ನು ಮಾಡಿಯೇ ಮಾಡುವೆನು. ನಿಮ್ಮ ಮಾತಿನಂತೆ ನಡೆದಿದ್ದರೆ ಈ ಕಿಲ್ಲೆಯು ಇಷ್ಟೊತ್ತಿಗೇ ಶತ್ರುಗಳ ವಶವಾಗಿ ಹೋಗುತ್ತಿತ್ತು. ನಿಮಗೆ ಯುದ್ಧಪ್ರಸಕ್ತಿಯು ತಿಳಿಯುವದಿಲ್ಲೆಂದೇ ನಾನು ಮುಂಬಯಿ ಇಂಗ್ರಜರ ಬಳಿಗೆ ಪತ್ರಬರೆದು ದೂತನನ್ನು ಕಳಿಸಿದ್ದೇನೆ. ಒಂದೆರಡು ದಿನಗಳಲ್ಲಿ ಇಂಗ್ರಜರಲ್ಲಿ ಯಾವನಾದರೂ ಬುದ್ಧಿಶಾಲಿಯು ನಮ್ಮ ಸಹಾಯಕ್ಕೆ ಬರಬಹುದು. ನನ್ನ ಬರಹವು ಅಷ್ಟೊಂದು ಮಹತ್ವದ್ದಿರುವದರಿಂದ ಇಂಗ್ರಜರಲ್ಲಿ ಒಬ್ಬನಾದರೂ ಬಂದೇ ತೀರಬೇಕೆಂಬ ಭರವಸೆಯು ನನಗಿರುವದು. ಆತನು ಬಂದಬಳಿಕ ಏನು ಮಾಡಬೇಕೆಂಬದನ್ನು ನಿರ್ಧರಿಸುತ್ತೇನೆ. ನೀವು ನಿಶ್ಚಿಂತರಾಗಿರ್ರಿ. ಮರಾಟರು ಕೋಟೆಗೆ ಕಿಂಡಿಯನ್ನು ಕೆಡವಿ ಬರಲಿಕ್ಕೆ ಇದೇನು ಮೇಣದ ಕೋಟೆಯೆಂದು ತಿಳಿದಿರುವಿರಾ? ಈ ಕೋಟೆಯ ಭದ್ರತೆಯು ಕೂಡಾ ಎಷ್ಟೆಂಬದು ನಿಮಗೆ ಗೊತ್ತಿರದ್ದರಿಂದ ನೀವು ಇದರಲ್ಲಿ ಬಾಯಿಹಾಕುವದೇ ದಡ್ಡತನವಾಗಿದೆ. ಇನ್ನು ಮುಂದೆ ಈ ಪ್ರಸಕ್ತಿಯಲ್ಲಿ ನೀವು ಬೀಳಬಾರದು. ಎಂದು ನುಡಿದನು. ಆತನು ಇಷ್ಟು ಮಾತನಾಡುತ್ತಿರಲು ಇಂಗ್ರಜರದೊಂದು ಪತ್ತೇಮಾರಿಯು ಕೋಟೆಯ ಬಳಿಗೆ ಬಂದಿದೆಯೆಂಬ ವಾರ್ತೆಯು ದೂತಮುಖಾಂತರವಾಗಿ ಹತ್ತಿತು, ಆಗ ಕಿಲ್ಲೇದಾರನಿಗೂ ಧರ್ಮಾಧಿಕಾರಿಗೂ ತುಂಬಾ ಸಂತೋಷವಾಯಿತು. ಆಗ ಅಲ್ಲಿದ್ದ ಆ ಮೂವರು ಅಧಿಕಾರಿಗಳೂ ಇಂಗ್ರಜ ಬಂಧುವಿನ ಸ್ವಾಗತಕ್ಕಾಗಿ ಸಮುದ್ರತೀರಕ್ಕೆ ನಡೆದರು

## ೧೪ ಫಿರಂಗಿಗಳ ಶಿಷ್ಟಾಯಿ.

ಮುಂಬಯಿಯಿಂದ ಬಂದ ಆ ಇಂಗ್ರಜ ಬಂಧವು ಜಾನಸ್ಮಿಥ ಎಂಬವನಾಗಿದ್ದನು; ಆತನಿಗೆ ಸಮುದ್ರತೀರದಲ್ಲಿ ಅಂಗ್ರೇಜನರ ಬಲವಾದ ಕಾವಲಿರುವದೆಂಬದು ಗೊತ್ತಿರದ್ದರಿಂದ· ವ್ಯಾಪಾರೀ ಪದ್ಧತಿಯಂತೆ

ಬಂದೂಕ ಮೊದಲಾದವುಗಳನ್ನು ಸಂಗಡ ಹೇರಳವಾಗಿ ತಂದಿದ್ದನು. ವಸಯೀಕಿಲ್ಲೇದಾರನ ಪತ್ರದಲ್ಲಿ ಮರಾಟರು ಮುತ್ತಿಗೆ ಹಾಕಿರುವರೆಂಬ ಸುದ್ದಿಯೇ ಇದ್ದಿಲ್ಲ. ಆ ದೂತನಾದರೂ ಹೇಳಲಿಲ್ಲ. ಅವನು ಹೋಗುವಾಗ ಅಂಗ್ರೇಜನರ ಕಣ್ಣು ತಪ್ಪಿಸಿ ಹೋದಂತೆ ಬರುವಾಗಲೂ ಕಣ್ಣು ತಪ್ಪಿಸಬಹುದೆಂದು ಮಾಡಿದ್ದನು. ಆದರೆ ಈಗ ಕೋಟೆಗೆ ಮರಾಟರು ಪ್ರತ್ಯಕ್ಷ ಮುತ್ತಿಗೆ ಹಾಕಿದ್ದರಿಂದ ಅಂಗ್ರೇಜನರು ಸಮುದ್ರವನ್ನು ಅತ್ಯಂತ ದಕ್ಷತೆಯಿಂದ ಕಾಯುತ್ತಿದ್ದರು. ಅವರ ಕಣ್ಣು ತಪ್ಪಿಸಿ ಯಾವನೂ ಪಾರಾಗಿ ಹೋಗಲು ಶಕ್ಯವಿರಲಿಲ್ಲ. ಇಂಥ ಸಮಯದಲ್ಲಿ ಮುಂಬಯಿಂದ ಹೊರಟ ಜಾನಸ್ಮಿಥನು ಸುರಕ್ಷಿತವಾಗಿ ವಸಯೀಕೋಟೆಗೆ ಮುಟ್ಟುವ ಬಗೆ ಹ್ಯಾಗೆ? ದಾರಿಯಲ್ಲಿ ಅಂಗ್ರೇಜನರು ಆತನನ್ನು ಹಿಡಿದರು. ಆದರೆ ಆ ಇಂಗ್ರಜವಸ್ತಾದಿಯು ಬಹಳ ನೆಮ್ಮದಿಯಾಗಿಮಾತನಾಡಿ ನಾನು ಮರಾಟರ ಪಕ್ಷದವನೆಂದೂ ಪೇಶ್ವೆಸರಕಾರಕ್ಕೆ ನಾವು ಬಹುವಿಧವಾಗಿ ಸಹಾಯ ಮಾಡುತ್ತೇವೆಂದೂ ಹೇಳಿ ಅಂಗ್ರೇಜನರ ಮೈತ್ರಿಯನ್ನು ಸಂಪಾದಿಸಿದನು. ಆ ಅಂಗ್ರೇಜನರಾದರೂ ಕಡಿಮೆಯವರಿದ್ದಿಲ್ಲ. ಅವರು ಆ ಇಂಗ್ರಜನ ಸವಿನುಡಿಗೆ ಮರುಳಾಗದೆ ಅವನು ತಂದ ಯುದ್ಧೋಪಯುಕ್ತ ಸಾಮಗ್ರಿಗಳನ್ನೆಲ್ಲ ತಾವೇ ಕೊಂಡುಕೊಂಡು ಆತನನ್ನು ಬರಿಗೈಬಂಟನನ್ನಾಗಮಾಡಿ ವಸಯೀಕೋಟೆಗೆ ಹೋಗಗೊಟ್ಟರು ನಿಜವಾಗಿಯೂ ಮುಂಬಯಿ ಇಂಗ್ರಜರು ಪೇಶ್ವೆಸರಕಾರಕ್ಕೆ ವಿರುದ್ಧವಾಗಿ ವರ್ತಿಸುತ್ತಿದ್ದಿಲ್ಲ. ವ್ಯಾಪಾರವು ಸುರಕ್ಷಿತವಾಗಿ ನಡೆಗದ್ದೆ ಸಾಕೆಂದು ಬಯಸುವ ಅವರು ಶ್ರೀಮಂತ ಸರಕಾರದ ವಕ್ರದೃಷ್ಟಿಯನ್ನು ಸಂಪಾದಿಸಲಿಕ್ಕೆ ಆವ ಕಾರಣವೂ ಇದ್ದಿಲ್ಲ. ಇದು ಅಂಗ್ರೇಜನರಿಗೆ ಗೊತ್ತಿದ್ದದರಿಂದಲೇ ಅವರು ಆ ಜಾನಸ್ಮಿಥನನ್ನು ವಸಯೀಕಿಲ್ಲೆಗೆ ಹೋಗಗೊಟ್ಟರು.

ಜಾನಸ್ಮಿಥನು ಬಂದರದಲ್ಲಿ ಕಾಲಿಡುವಷ್ಟರಲ್ಲಿ ಆ ಕಿಲ್ಲೆಯ ಅಧಿಕಾರಿಗಳಾದ ಮೋನೇಸೀಝು, ಪೆರೆರಾ ಹಾಗು ಆ ಧರ್ಮಾಧ್ಯಕ್ಷ ಹೀಗೆ ಮೂವರು ಬಂದು ಅವನ ಸ್ವಾಗತ ಮಾಡಿದರು. ಜಾನಸ್ಮಿಥನು ಅವರ ಸತ್ಕಾರವನ್ನು ಸ್ವೀಕರಿಸಿ, ಕಿಲ್ಲೆಯೊಳಕ್ಕೆ ಹೋದನು. ಆತನು ಆ ಮೂವರು ಅಧಿಕಾರಿಗಳನ್ನು ಕುರಿತು—ಸಮುದ್ರಪ್ರದೇಶದಲ್ಲಿ ಅಂಗ್ರೇಜನರು ಎಷ್ಟು ಬಿಗಿಯಾದ ಕಾವಲಿರಿಸಿರುವರೆಂಬದನ್ನೂ, ತಾನು ಪಾರಾಗಿ ಬರ

ಬೇಕಾದರೆ ಹ್ಯಾಗೆ ಹ್ಯಾಗೆ ಯುಕ್ತಿಯನ್ನು ಮಾಡಬೇಕಾಯಿತೆಂಬದನ್ನೂ ವಿಸ್ತರಿಸಿ ಹೇಳಿದನು. ಬಳಿಕ ಆ ನಾಲ್ವರಲ್ಲಿ ಪ್ರಸ್ತುತ ಪ್ರಸಂಗದಲ್ಲಿ ಹ್ಯಾಗೆ ಪಾರಾಗಬೇಕೆಂಬ ಬಗ್ಗೆ ಆಲೋಚನೆಯು ನಡೆಯಿತು. ಜಾನಸ್ಮಿಥನು ಹೊರಗಿನ ಮನುಷ್ಯನಾದ್ದರಿಂದ ಅವನೇ ಯುಕ್ತಿಯನ್ನು ಹೇಳಲಿಕ್ಕೆ ಯೋಗ್ಯನೆಂದು ಅವರು ನಿರ್ಣಯಿಸಿದರು. ಜಾನಸ್ಮಿಥನು ಬಹು ಧೂರ್ತನೂ, ಮೇಲಾದ ರಾಜಕಾರಣಿಯೂ, ಯುದ್ಧಕಲೆಯನ್ನು ಬಲ್ಲವನೂ ಆಗಿದ್ದನು. ಅವನು ವಸಯಿಯ ಫಿರಂಗಿಗಳಲ್ಲಿ ಎಷ್ಟರಮಟ್ಟಿಗೆ ಬಲವಿರುತ್ತದೆಂಬದನ್ನು ಕೇಳಿಯೂ ಪ್ರತ್ಯಕ್ಷ ನೋಡಿಯೂ ತಿಳಿದುಕೊಂಡನು. ಕೋಟೆಯು ಬಹು ಭದ್ರವಾದದ್ದೆಂಬದು ಆತನಿಗೆ ಈವೊದಲೇ ಗೊತ್ತಿತ್ತು. ಆದರೆ ಬರಿಯ ಕೋಟೆಯ ಭದ್ರತೆಯಿಂದ ಬಲಿಷ್ಠ ಶತ್ರುವಾದ ಶ್ರೀಮಂತ ಸರಕಾರಕ್ಕೆ ಇವರು ಈಡಾಗಲಾರರೆಂಬದು ಆತನಿಗೆ ಗೊತ್ತಾಗಿಹೋಯಿತು. ಆಗ ಅವನು ನುಡಿದನೇನಂದರೆ—"ನಿಮಗೆ ಸದ್ಯದ ಪ್ರಸಂಗದಲ್ಲಿ ಮುಂಬಯಿಯಿಂದ ಸಹಾಯವು ಒದಗುವ ಸಂಭವವಿಲ್ಲ. ಯಾಕಂದರೆ ಮಹಾದಕ್ಷರಾದ ಆಂಗ್ರೇ ಜನರು ಸಮುದ್ರದಲ್ಲಿ ಬಲವಾದ ಕಾವಲವನ್ನಿರಿಸಿದ್ದರಿಂದ ಬಂದ ಸಹಾಯವು ಅವರ ಸೆರೆಯಲ್ಲಿ ಬೀಳುವದೇ ಹೊರತು ನಿಮಗೆ ಒದಗುವದಿಲ್ಲ. ಇದರಿಂದ ಮುಂಬಯಿ ಇಂಗ್ರಜರು ಫಿರಂಗಿಗಳಿಗೆ ಸಹಾಯ ಮಾಡುವರೆಂಬ ಆರೋಪವು ಮಾತ್ರ ನಮ್ಮ ಮೇಲೆ ಹೊರಿಸಲ್ಪಡುವದು. ಈ ಆರೋಪದಿಂದ ನಾವೂ ಪೇಶ್ವೆ ಸರಕಾರದ ನಿಗ್ರಹಕ್ಕೆ ಗುರಿಯಾಗಬೇಕಾಗುವದು. ಹೀಗೆ ಮಾಡುವದು ಸಮಂಜಸವಾಗಲಾರದು. ಮನುಷ್ಯನು ತನ್ನ ಬಲಾಬಲಗಳನ್ನು ಪರೀಕ್ಷಿಸಿ ಯಾರೊಬ್ಬರ ಕೂಡ ಕದನ ತೆಗೆಯಬೇಕು. ನಾವು ಯಾರೊಡನೆ ಹೋರಾಡುವೆವೋ ಅವರಿಗಿಂತಲೂ ನಮ್ಮ ಬಲವು ಕಡಿಮೆಯಿದ್ದರೆ ನಾವು ಜಿಬ್ಬೆಯಾಗುವೆವೆಂಬದು ಸ್ವಾಭಾವಿಕವಾಗಿರುವದು. ತಿಳಿದೂ ತಿಳಿದೂ ಇಂಥ ಹೀನ ಸ್ಥಿತಿಯನ್ನು ತಂದುಕೊಳ್ಳಲು ಪ್ರಯತ್ನಮಾಡುವದೆಂದರೆ ಮೂರ್ಖತನವೇ ಸರಿ! ನೀವು ಜಾಣರಾಗಿದ್ದರೆ ಶ್ರೀಮಂತ ಸರಕಾರದ ರಾಯಭಾರಿಯು ಬಂದಾಗ ಕೆಲಸವನ್ನು ಸಾಧಿಸಿಕೊಳ್ಳಬಹುದಾಗಿತ್ತು. ಈಗಲಾದರೂ ನೀವು ಒಡಂಬಡಿಕೆಯ ಸಂಧಾನವನ್ನು ನಡಿಸಬೇಕಲ್ಲದೆ ಯುದ್ಧಮುಖದಿಂದ ಶತ್ರುವನ್ನು ಹಣ್ಣಿಗೆ ತರುವೆವೆಂದು ಹೆಮ್ಮೆಗೆ ಬೀಳಬಾರದು. ಒಂದು

ವೇಳೆ ನೀವಾಗಿಯೇ ಈಗ ಒಪ್ಪಂದದ ಸಂಧಾನಕ್ಕೆ ಹೋದರೆ ಪೇಶ್ವೆಯು ತನ್ನ ಬಿಗುವನ್ನು ಬಿಡಲಾರನೆಂಬದು ಸಹಜವು. ಪ್ರಯತ್ನಮಾಡಿ ನೋಡಿಯೂ ನಿಷ್ಫಲವಾದರೆ ಕೊನೆಗೆ ಯುದ್ಧವು ಇದ್ದೇ ಇರುವದು. ಆ ಕಾಲಕ್ಕೆ ಏನಾದರೂ ಅನುಭವಿಸಲು ಗಟ್ಟಿಯಾಗಲೇಬೇಕು. ಮೊದಲು ಉಪಾಯದಿಂದ ಕಾರ್ಯವಾಗುವಂತೆ ಮಾಡುವದು ಶ್ರೇಷ್ಠವಾದ ಲಕ್ಷಣವು. ಉಪಾಯವು ಸಾಧಿಸದಿದ್ದರೆ, ಅರ್ಧಮರ್ಧ ಹಾನಿಯನ್ನು ಸಹಿಸಿಯಾದರೂ ಕಾರ್ಯಸಾಧಿಸಿಕೊಳ್ಳುವದಕ್ಕೆ ಹೆಣಗಬೇಕು. ಅದೂ ಸಾಧಿಸದೆಹೋದರೆ ಶತ್ರುವಿನೊಡನೆ ಹೋರಾಡಬೇಕು. ನಿರ್ವಾಣಯುದ್ಧವನ್ನು ಮಾಡಿದರೂ ಜಯ ಸಿಗದಿದ್ದರೆ ಅಸುದೊರೆದು ವಿಸುಪಿನ ಸನ್ನಿಧಿಯನ್ನು ಸೇರಬೇಕು. ಇದೇ ನಿಜವಾದ ವೀರರಿಗೆ ದಾರಿ. ನೀವು ನನ್ನ ಮಾತು ಕೇಳಲಿಚ್ಛಿಸುತ್ತಿದ್ದರೆ ಒಡಂಬಡಿಕೆಯ ಸಂಧಾನ ನಡಿಸಿರಿ.''

ಈ ಮೇರೆಗೆ ಜಾನಸ್ಮಿಥನು ಮಾತನಾಡಲು ಪೆರೆರಾ ಹಾಗು ಆ ಧರ್ಮಾಧ್ಯಕ್ಷರು ತಟಸ್ಥರಾದರು. ಕಿಲ್ಲೇದಾರನಾದ ಮೇನೆಸೀಝನಂತೂ ಒಡಂಬಡಿಕೆಗೆ ಮೊದಲೇ ಸಿದ್ಧನಿದ್ದನು. ಹೊಸದಾಗಿಬಂದ ಇಂಗ್ರಜ ಮುತ್ಸದ್ದಿಯು ಹೀಗೆಯೇ ಅಭಿಪ್ರಾಯಪಟ್ಟದ್ದರಿಂದ ಒಡಂಬಡಿಕೆಗೆ ಮೊದಲಿನಿಂದಲೂ ವಿರೋಧಿಸುತ್ತಬಂದಿದ್ದ ಪೆರೆರಾ ಎಂಬವನಿಗೆ ಬಹಳ ಅಸಮಾಧಾನವಾಯಿತು. ಧರ್ಮಾಧ್ಯಕ್ಷನು ಅಂಜಿಕೊಂಡದ್ದರಿಂದ ಅವನು ಇದರಲ್ಲಿ ಮಾತನಾಡಬಾರದೆಂದೇ ನಿರ್ಧರಿಸಿದ್ದನು. ಕೊನೆಗೆ ಬಹಳಹೊತ್ತು ಪೆರೆರಾ ಎಂಬವನೊಡನೆ ವಾದವಿವಾದಗಳಾದ ಬಳಿಕ ಒಡಂಬಡಿಕೆಯ ಶಿಷ್ಟಾಯಿಗಾಗಿ ಹೋಗಬೇಕೆಂಬದು ನಿಶ್ಚಿತವಾಯಿತು. ಹಾಗು ತಮ್ಮ ಗೌರವಕ್ಕೆ ಬಾಧೆಬಾರದಂತೆ ಪೇಶ್ವೆಯು ಒಡಂಬಟ್ಟರೆ ಒಪ್ಪಂದಮಾಡಿಕೊಳ್ಳಬೇಕು. ಇಲ್ಲದಿದ್ದರೆ ಯುದ್ಧವನ್ನು ಪ್ರಾರಂಭಿಸಬೇಕು, ಎಂಬ ಮಾತನ್ನು ಗೊತ್ತುಪಡಿಸಿದರು. ಬಳಿಕ ಒಡಂಬಡಿಕೆಗಾಗಿ ಸಂಧಾನಕ್ಕೆ ಯಾರು ಹೋಗಬೇಕು ಎಂಬ ಪ್ರಶ್ನೆಯುತ್ಪನ್ನವಾಯಿತು. ಕಿಲ್ಲೇದಾರನು ಒಬ್ಬನೇ ಹೋಗಲು ಒಪ್ಪಿಕೊಳ್ಳಲಿಲ್ಲ. ಪೆರೆರಾ ಈತನಾದರೂ ಧೈರ್ಯಪಡಲಿಲ್ಲ. ಧರ್ಮಾಧ್ಯಕ್ಷನಂತು ನಾನು ಪೇಶ್ವೇರ ಪಾಳೆಯದ ಸನಿಯಕ್ಕೆ ಬರಲಾರೆನೆಂದು ಹೇಳಿಬಿಟ್ಟನು. ಆಗ ಜಾನಸ್ಮಿಥನು ಕಿಲ್ಲೇದಾರ ಹಾಗು ಪೆರೆರಾ ಇವರಿಬ್ಬರೊಡನೆ ಹೊರಡಬೇಕೆಂದು ಗೊತ್ತಾಯಿತು. ಅದರಂತೆ

ಅವರು ದೂತ ಮುಖಾಂತರವಾಗಿ ಪೇಶ್ವೆಗೆ ಮುಂಗಡ ಸೂಚನೆಯನ್ನು ಕಳಿಸಿದರು.

ವಸಯೀ ಕಿಲ್ಲೆಯೊಳಗಿನ ಫಿರಂಗೀ ಅಧಿಕಾರಿಗಳು ಒಪ್ಪಂದದ ಸಂಧಾನಕ್ಕೆ ಬರುವರೆಂಬದನ್ನು ತಿಳಿದು ಚಿಮಣಾಜಿ ಅಪ್ಪಾನು ತನ್ನ ಪಾಳಯದಲ್ಲಿ ಒಂದು ದರ್ಬಾರವನ್ನು ನೆರೆಯಿಸಿದನು. ಆ ಫಿರಂಗೀ ಜನರು ಈ ಮರಾಟ ದರ್ಬಾರದೊಳಗಿನ ವೀರರನ್ನು ನೋಡಿ ಭಯಗೊಳ್ಳಬೇಕೆಂಬದೇ ಅಪ್ಪಾನ ಉದ್ದೇಶವಾಗಿತ್ತು. ಸಕೃದ್ದರ್ಶನಕ್ಕೆ ಪ್ರತಿಪಕ್ಷಿಯಲ್ಲಿ ಭಯವುಂಟಾದರೆ ಅರ್ಧ ಕೆಲಸವು ಸಾಧಿಸಿದಂತಾಗುವದು. ಈ ಗುಟ್ಟನ್ನು ಅಪ್ಪಾಜಿಯು ಚನ್ನಾಗಿ ಬಲ್ಲವನಾಗಿದ್ದನು. ಅಂತೇ ಅವನು ಅಂದು ಒಳ್ಳೇ ಥಾಟಿನಿಂದ ದರ್ಬಾರಕೂಡಿಸಿದನು. ಒಂದು ವಿಶಾಲವಾದ ಡೇರೆಯಲ್ಲಿ ಚಿಮಣಾಜಿ ಅಪ್ಪಾಜಿಯೂ ಮರಾಟಾ ಸರದಾರರೂ ಪದ್ಧತಿಯಂತೆ ಕೂತುಕೊಳ್ಳುವದಕ್ಕೆ ವ್ಯವಸ್ಥೆಯನ್ನು ಮಾಡಿದ್ದರು. ನೆಲಕ್ಕೆ ಸುಂದರವಾದ ಜಾಜುಮೆಯನ್ನು ಹಾಸಿ ಅಲ್ಲಲ್ಲಿಗೆ ಕ್ರಮವಾಗಿ ಕೂಡ್ರುವ ಗಾದಿಗಳನ್ನು ಹಾಸಿ ದಿಂಬುಗಳನ್ನಿಟ್ಟಿದ್ದರು. ಸಭೆಯ ಮಧ್ಯಭಾಗದಲ್ಲಿ ಎತ್ತರವಾದ ಪೀಠದಮೇಲೆ ಸೇನಾನಾಯಕನಾದ ಚಿಮಣಾಜಿ ಅಪ್ಪಾಜಿಯು ಕುಳಿತುಕೊಳ್ಳುವದಕ್ಕೆ ವ್ಯವಸ್ಥೆಯನ್ನು ಮಾಡಿದ್ದರು. ಆಸನಗಳು ಸಿದ್ಧವಾದ ಕೆಲಹೊತ್ತಿನಲ್ಲಿ ಎಲ್ಲ ಮರಾಟಾ ಸರದಾರರೂ ಬಂದು ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಆಸನಗಳ ಮೇಲೆ ಕುಳಿತುಕೊಂಡರು. ಫಿರಂಗಿಗಳು ಬರುವ ಹೊತ್ತಾದ್ದರಿಂದ ಚಿಮಣಾಜಿ ಅಪ್ಪಾಜಿಯು ಯುದ್ಧದ ಪೋಷಾಕನ್ನು ಧರಿಸಿ ದರ್ಬಾರವನ್ನು ಪ್ರವೇಶಿಸಿದನು. ಆತನ ಪೋಷಾಕು ಅತ್ಯಂತ ರೌದ್ರವಾಗಿತ್ತು. ಆ ವೀರಮೂರ್ತಿಯನ್ನು ನೋಡಿಯೇ ಫಿರಂಗಿಗಳ ಹಲ್ಲಣವು ಹಾರುವಂತಿತ್ತು. ಸಭೆಯಲ್ಲಿ ಕುಳಿತ ಮರಾಟಾ ಸರದಾರರೂ ಯುದ್ಧದ ಪೋಷಾಕನ್ನು ಧರಿಸಿ ಸಶಸ್ತ್ರವಾಗಿ ಕುಳಿತಿದ್ದರು. ಇದರಿಂದ ಸಭೆಯಲ್ಲಿ ಕ್ಷಾತ್ರತೇಜವು ಚಮಕಿಸುತ್ತಿರಲು ಒಂದು ಪ್ರಕಾರದ ರೌದ್ರತೆ ಮಿಶ್ರಿತ ಗಾಂಭೀರ್ಯವು ಅದಕ್ಕೆ ಪ್ರಾಪ್ತವಾಗಿತ್ತು.

ಹೀಗೆ ಸಭೆಯು ಆಳ್ವೆದೆಯವರಿಗೆ ಭಯಪ್ರದವಾಗಿರಲು, ವಸಯೀ ಕಿಲ್ಲೆಯ ಅಧಿಕಾರಿಗಳು ಇಂಗ್ರೇಜ ಬಂಧುವಿನೊಡನೆ ಅಲ್ಲಿಗೆ ಬಂದರು. ಅವರು ಸಂಗಡ ನಿಯಮಿತ ಪರಿವಾರವನ್ನು ತಂದಿದ್ದರು. ದೂರಿನಿಂದ

ಅವರು ಬರುವದನ್ನು ನೋಡಿ ಚಿಮಣಾಜಿಯ ಅಪ್ಪಣೆಯಂತೆ ತುಳಾಜಿ ರಾಯನೂ, ಹೋಳಕರನೂ ಎದ್ದು ಮುಂದೆ ಹೋಗಿ ಅವರ ಸ್ವಾಗತವನ್ನು ಮಾಡಿದರು. ಬಳಿಕ ಫಿರಂಗಿಗಳ ಪರಿವಾರವನ್ನು ಸಭೆಯ ಹೊರಗೆ ನಿಲ್ಲಿಸಿ ಕಿಲ್ಲೇದಾರ, ಪೇರಿರಾ, ಜಾನಸ್ಮಿಥ ಈ ಮೂವರನ್ನು ಕರೆದುಕೊಂಡು ಸಭೆಯನ್ನು ಪ್ರವೇಶಿಸಿದರು. ಸಭೆಯನ್ನು ನೋಡಿ ಆ ಮೂವರೂ ಪಾಶ್ಚಾತ್ಯರು ದಂಗುಬಡಿದು ಹೋದರು ಮಧ್ಯದಲ್ಲಿ ಕುಳಿತ ಪೇಶ್ವಾಯಿಗೆ ಹ್ಯಾಗೆ ಸಲಾಮು ಮಾಡಬೇಕೆಂಬದೇ ಅವರಿಗೆ ತಿಳಿಯದಾಯಿತು. ಆಗ ಜಾಣಾಕ್ಷನಾದ ಜಾನಸ್ಮಿಥನು ಟೊಪ್ಪಿಗೆಯನ್ನು ಕೈಯಲ್ಲಿ ಹಿಡಿದು ಮೊಣ ಕಾಲೂರಿ ನೆಲಕ್ಕೆ ಕೈಹಚ್ಚಿ ಸಲಾಮು ಮಾಡಿದನು. ಇದರಂತೆ ಅವನು ಮೂರು ಸ್ಥಳಗಳಲ್ಲಿ ಮಾಡಿ, ಇದರಂತೆ ಮಾಡಲು ಫಿರಂಗೀ ಅಧಿಕಾರಿ ಗಳಿಗೆ ಸೂಚಿಸಿದನು. ಜಾನಸ್ಮಿಥನ ಸೂಚನೆಯಂತೆ ಅವರೂ ಸಲಾಮು ಮಾಡಲು ಅಪ್ಪಾಜಿಯು ಅವರೆಲ್ಲರ ಸಲಾಮುಗಳನ್ನು ಕೈಕೊಂಡು ಅವರಿ ಗಾಗಿ ಸಿದ್ಧಪಡಿಸಿಟ್ಟದ್ದ ಆಸನಗಳ ಮೇಲೆ ಕುಳಿತುಕೊಳ್ಳಲು ಸೂಚಿಸಿದನು. ಜಾನಸ್ಮಿಥನಿಗೆ ಅಲ್ಪ-ಸ್ವಲ್ಪ ಮರಾಠೀ ಭಾಷೆಯು ತಿಳಿಯುತ್ತಿತ್ತು. ಆದರೆ ಚಿಮಣಾಜಿ ಅಪ್ಪಾನಂಥವರ ಶುದ್ಧ ಮರಾಠೀ ಭಾಷೆಯ ಅರ್ಥವಾ ಗುವದು ಅವನಿಗೆ ಅಶಕ್ಯವಾಯಿತು. ಆದ್ದರಿಂದ ಅವರ ಸಂಭಾಷಣವು ಹಿಂದೀ ಭಾಷೆಯಲ್ಲಿಯೇ ನಡೆಯಿತು.

ಮೊದಲು ಮೇಸೇಕೀಸ್ಥನು—"ನಾವು ಶ್ರೀಮಂತಸರಕಾರದೊಡನೆ ಸ್ನೇಹದಿಂದ ನಡೆಯುವೆವು ಹೀಗಿದ್ದು, ಪ್ರಸ್ತುತದಲ್ಲಿ ಪ್ರಚಂಡಸೇನೆಯೊ ಡನೆ ನಮ್ಮ ಕೋಟೆಗೆ ಮುತ್ತಿಗೆ ಹಾಕಲು ಕಾರಣವೇನೆಂಬದು ತಿಳಿಯು ಲಿಲ್ಲ. ಎಂದು ಮಾತನಾಡಿದನು. ಆತನ ಈ ಮಾತುಗಳನ್ನು ಕೇಳಿ ಚಿಮ ಣಾಜಿಅಪ್ಪಾನು ಸ್ವಲ್ಪ ಕ್ರುದ್ಧನಾದನು. ಆತನ ಕಣ್ಣುಗಳು ಕೆಂಪಡರಿದವು. ಹಣೆಗೆ ನೀರಿಗೆಗಳು ಬಿದ್ದವು. ಆಗ ಅವನು ಗಂಭೀರ ಧ್ವನಿಯಿಂದ ನುಡಿದ ನೇನಂದರೆ—ನೀವು ಫಿರಂಗೀಜನರು ಆಸುರೀಕೃತ್ಯದವರಿರುತ್ತೀರಿ. ಕಳೆದ ಹತ್ತು ವರುಷಗಳಲ್ಲಿ ನೀವು ನಮ್ಮೊಡನೆ ಸ್ನೇಹಭಾವದಿಂದ ನಡೆದಿರುವ ದಿಲ್ಲ. ನಮ್ಮ ಪ್ರಜೆಗಳನ್ನು ಗೋಳಾಡಿಸುವಿರಿ. ಹಿಂದುಗಳ ಮೇಲೆ ಬಲುಮೆ ಮಾಡುವಿರಿ. ಅವರನ್ನು ಒತ್ತಾಯದಿಂದ ಧರ್ಮಾಂತರ ಮಾಡ ಹಚ್ಚಿರು ವಿರಿ. ನಾವು ನಿಮ್ಮ ಕಪಟಕ್ಕೆ ಸ್ವಲ್ಪ ಉದಾಸೀನ ಮಾಡಿವೆವೆಂದು ನೀವು

ನಮ್ಮಲ್ಲಿ ನಿಮ್ಮ ಶಾಸನ ಮಾಡುವ ಸಾಮರ್ಥ್ಯವಿಲ್ಲೆಂದು ತಿಳಿದಂತೆ ತೋರುತ್ತದೆ. ಆದಕ್ಕಾಗಿಯೇ ಇಷ್ಟೊಂದು ಪುಂಡಾಟಿಕೆ ನಡಿಸಿದಂತೆ ತೋರುತ್ತದೆ ಹಾಗು ಸ್ವಲ್ಪ ಕೂಡಾ ನಮ್ಮ ಅಂಜಿಕೆ ಹಿಡಿಯದೆ ನಮ್ಮ ಪ್ರಾಂತಗಳಲ್ಲಿ ನುಗ್ಗಿ ಹೊಸ ಹೊಸ ಪ್ರದೇಶಗಳನ್ನು ಕೈವಶಮಾಡಿಕೊಳ್ಳ ಹತ್ತಿರುವಿರಿ. ಇಂಥ ನಿಮಗೆ ಮಿತ್ರರೆಂದು ಹ್ಯಾಗೆ ಕರೆಯೋಣ? ಬಾಜೀರಾವಸಾಹೇಬರ ಲಕ್ಷವು ದಿಲ್ಲೀಕಡೆಗೆ ಇರುವದೆಂತಲೇ ನೀವು ಇಲ್ಲಿಯವರೆಗೆ ಬದುಕಿ ಉಳಿದಿರುವಿರಿ. ನಾನು ಪ್ರತ್ಯಕ್ಷ ದಂಡೆತ್ತಿ ಬಂದರೂ ಬರುವಾಗ ದಾರಿಯಲ್ಲಿ ನಿಮ್ಮ ಜನರು ನನಗೆ ತುಂಬಾ ತೊಂದರೆ ಕೊಟ್ಟರು. ಹಬಶೀಜನರ ಮುಖಾಂತರ ನಮ್ಮನ್ನು ಹಿಂದಕ್ಕಟ್ಟಬೇಕೆಂದು ಪ್ರಯತ್ನ ಮಾಡಿದಿರಿ. ಹದಿನೇಳು ಸ್ಥಳಗಳಲ್ಲಿ ನಾನು ನಿಮ್ಮ ಪಕ್ಷದವರಿಗೆ ಕೈತೋರಿಸಬೇಕಾಯಿತು ಈಗ ವಸಯೀಕಿಲ್ಲೆಗೆ ಬಲವಾದ ಮುತ್ತಿಗೆ ಹಾಕಿದ್ದರಿಂದ ಒಪ್ಪಂದದ ವಿಚಾರಕ್ಕೆ ಬಂದಿರುವಿರಿ. ನಿಮ್ಮ ಈ ಕೃತ್ಯವು ನನಗೆ ತಿಳಿಯದೆ ಹೋಗಿಲ್ಲ; ನಾನು ಒಡಂಬಡಿಕೆ ಮಾಡಿಕೊಳ್ಳುವದಕ್ಕಾಗಿ ಇಲ್ಲಿಗೆ ಬಂದಿಲ್ಲ. ನಿಮ್ಮನ್ನು ವಸಯೀಪ್ರಾಂತದಿಂದ ಸಂಪೂರ್ಣ ಹೊರಗೆ ಹಾಕುವದಕ್ಕಾಗಿ ಬಂದಿದ್ದೇನೆ ನೀವು ವಸಯೀಕಿಲ್ಲೆಯನ್ನು ಬಿಟ್ಟುಕೊಟ್ಟು ಗೋವೆಯ ಕಡೆಗೆ ಹೋಗುತ್ತಿದ್ದರೆ ಹೇಳಿರಿ. ಹದಿನೈದು ದಿನಗಳ ಅವಧಿಯನ್ನು ಕೊಡುತ್ತೇನೆ ಅಷ್ಟರಲ್ಲಿ ನೀವು ಕೋಟೆಯನ್ನು ತೆರವು ಮಾಡಿ ಗೋವೆಗೆ ಹೋಗತಕ್ಕದ್ದು. ಸದ್ಯಕ್ಕೆ ಗೋವೆಪ್ರದೇಶವನ್ನು ನಿಮ್ಮ ವಶದಲ್ಲಿ ಬಿಡುತ್ತೇವೆ. ಅಲ್ಲಿಯೂ ನೀವು ಧರ್ಮಛಲ ನಡಿಸಿದರೆ ಆ ಪ್ರಾಂತದಿಂದಲೂ ನಿಮ್ಮನ್ನು ಹೊರಗೆ ಹಾಕುವ ಪ್ರಸಂಗವು ನಮಗೆ ಬರುವದು. ನೀವು ಈ ಇಂಗ್ರಜರ ಸ್ಥೈರ್ಯದಿಂದ ಯುದ್ಧಮಾಡಬೇಕೆಂಬ ಸೊಕ್ಕಿಗೆ ಬೀಳಬಹುದು. ಇಂಗ್ರಜರು ಬಹಿರಂಗವಾಗಿ ನಿಮಗೆ ಸಹಾಯ ಮಾಡಿದರೆ ಅವರೂ ನಮಗೆ ಶತ್ರುಗಳೆಂದು ಮುಂಬಯಿಯ ಮೇಲೆ ಸ್ವಾರೀಮಾಡಲಿಕ್ಕೆ ನಮಗೆ ಮಾರ್ಗವಾಗುತ್ತದೆ. ಆದರೆ ಧೂರ್ತರಾದ ಇಂಗ್ರಜರು ಅಂಥ ಪ್ರಸಂಗವನ್ನುಂಟು ಮಾಡಿಕೊಳ್ಳಲಾರರು. ನಮಗೆ ಖಂಡಿತ ಉತ್ತರ ಬೇಕು. ಸುಮ್ಮನೆ ವಿನಂತಿಯಿಂದ ಯಾವ ಪ್ರಯೋಜನವೂ ಇಲ್ಲ. ವಸಯೀಕಿಲ್ಲೆಯಿಂದ ನಿಮ್ಮನ್ನು ಹೊರಗೆ ಹಾಕಿದ ಹೊರತು ನಾನು ಪುಣೆಗೆ ಹೋಗುವದಿಲ್ಲ. ನೀವಾಗಿಯೇ ಕಿಲ್ಲೆಯನ್ನು ಬಿಟ್ಟುಕೊಟ್ಟರೆ ಪ್ರಾಣ

ಹಾನಿಯಾಗುವದಿಲ್ಲ. ಇದೇ ನಿಮಗೆ ದೊಡ್ಡ ಲಾಭವು. ನಾನು ನನ್ನ ಮತ ವನ್ನು ನಿಮಗೆ ಸ್ಪಷ್ಟವಾಗಿ ತಿಳಿಸಿದ್ದೇನೆ. ವಿಚಾರ ಮಾಡಿ ಯೋಗ್ಯ ಕಂಡ ದ್ದನ್ನು ನನಗೆ ತಿಳಿಸಿರಿ.''

ಈ ಪ್ರಕಾರ ಚಿಮಣಾಜಿಅಪ್ಪಾಜಿಯು ಖಂಡಿತವಾಗಿ ಮಾತನಾಡಲು ಪೋರ್ತುಗೀಜ ಅಧಿಕಾರಿಗಳು ಸ್ವಲ್ಪ ಕ್ರುದ್ಧರಾದರು. ಅವರ ಮೈಯು ನಡುಗಲಾರಂಭಿಸಿತು. ಆದರೂ ಅವರು ಸಾವರಿಸಿಕೊಂಡು ಸ್ವಲ್ಪ ಶಾಂತ ತೆಯನ್ನು ತಾಳಿದರು. ಬಳಿಕ ಕಿಲ್ಲೇದಾರನು ನುಡಿದನೇನಂದರೆ—"ವಸ ಯಿಾ ಪ್ರಾಂತವನ್ನೂ ವಸಯಿಾ ಕಿಲ್ಲೆಯನ್ನೂ ಬಿಟ್ಟು ಹೋಗಬೇಕೆಂಬ ಒಂದೇ ಮಾತನ್ನು ಹೇಳಿ ನಮ್ಮ ಪರೀಕ್ಷೆ ಮಾಡಬೇಕೆಂದು ನಿಮ್ಮ ಮನ ಸ್ಸಿನಲ್ಲಿದ್ದರೆ ಇದಕ್ಕೆ ನಮ್ಮ ಯತ್ನವಿಲ್ಲ. ಇದರಲ್ಲಿ ನೀವು ನಿಮ್ಮ ಹಟವನ್ನೇ ಸಾಧಿಸಿದಂತಾಯಿತೇ ಹೊರತು ಒಡಂಬಡಿಕೆಯನ್ನು ಸಾಧಿಸಿದಂತಾಗುವ ದಿಲ್ಲ. ವಸಯಿಾಕಿಲ್ಲೆಯನ್ನು ಬಿಟ್ಟುಕೊಡುವದೆಂದರೆ ನಾವು ನಮ್ಮ ಕೈ- ಯಿಂದಲೇ ನಮ್ಮ ಕುತ್ತಿಗೆಯನ್ನು ಕೊಯ್ದುಕೊಂಡಂತೆಯೇ ಸರಿ! ಈ ಅಪಮಾನಕರವಾದ ಸಂಗತಿಯನ್ನು ನಾವು ಎಂದೂ ಒಪ್ಪಿಕೊಳ್ಳಲಾರೆವು. ನೀವು ನಮ್ಮೊಡನೆ ಯುದ್ಧವ ಮಾಡಿ ನಮ್ಮನ್ನು ಪರಾಜಯಗೊಳಿಸಿದರೆ ಮಾತ್ರ ಯತ್ನವಿಲ್ಲದೆ ವಸಯಿಾಕಿಲ್ಲೆಯನ್ನು ಬಿಟ್ಟು ತೆರಳುವೆವು. ಆದರೆ ನಮ್ಮ ದೇಹದಲ್ಲಿ ಪ್ರಾಣವಿರುವವರೆಗೆ ವಸಯಿಾಕಿಲ್ಲೆಯನ್ನು ಸಂರಕ್ಷಿಸಲಿಕ್ಕೆ ನಾವು ಅಂತರಿಸಲಿಕ್ಕಿಲ್ಲೆಂಬದನ್ನು ನೀವು ಮರೆಯಕೂಡದು. ಕೇವಲ ಪ್ರಾಣಹಾನಿಯಾಗುವದೊಂದೇ ಕಾರಣದಿಂದ ನಾವು ಭೀತರಾಗಿ ವಸಯಿಾ ಕಿಲ್ಲೆಯಿಂದ ಓಡಿಹೋಗುವದೆಂದರೆ ತೀರ ನಾಮರ್ದತನವು. ಇಂಥ ನಾಮರ್ದತನದ ಕೆಲಸವನ್ನು ಒಪ್ಪಿಕೊಳ್ಳಲಿಕ್ಕೆ ನಮಗೆ ಹೇಳುವದೆಂದರೆ ನಮ್ಮಲ್ಲಿ ಏನೂ ಸ್ವಾಭಿಮಾನವಿಲ್ಲೆಂದು ನಮ್ಮ ಕಡೆಯಿಂದ ಹೇಳಿಸಿಕೊಂ ತೆಯೇ ಸರಿ. ಆದ್ದರಿಂದ ಈ ಅಡ್ಡಿಯನ್ನು ಮಾನ್ಯಮಾಡುವದು ನಮ್ಮಿಂದ ಸರ್ವಥಾ ಆಗಲಾರದು.''

ಈ ರೀತಿಯಾಗಿ ಕಿಲ್ಲೇದಾರನಾದ ಮೇನೇಸೀಝನು ಮಾತನಾಡಿದ ಬಳಿಕ ಜಾನಸ್ಮಿಥನು ಮಾತನಾಡತೊಡಗಿದನು. ಆತನು ಹೇಳಿದ್ದೇನಂದರೆ— 'ವಸಯಿಾಕಿಲ್ಲೆಯನ್ನು ಬಿಡದೆ ಪೋರ್ತುಗೀಜರು ನಿಮಗೆ ೩೦ ಸಾವಿರ ರೂ.

ಪಾಯಿಗಳನ್ನು ದಂಡವೆಂದು ಕೊಟ್ಟರೆ ನೀವು ಮುತ್ತಿಗೆಯನ್ನು ಕಿತ್ತಿ ತಿರುಗಿ ಪುಣೆಗೆ ಹೋಗಬಹುದೇನು?'

ಜಾನಸ್ಮಿಥನ ಈ ಪ್ರಶ್ನೆಯನ್ನು ಕೇಳಿ ಚಿಮಣಾಜಿಯು ತಪ್ತನಾದನು. ಆತನು ಒಳ್ಳೇ ಸಂತಪ್ತ ಮುದ್ರೆಯಿಂದ—ಇಂಗ್ರಜರಂತೆ ಪೇಶ್ವೆ ಸರಕಾರವು ಕೇವಲ ದುಡ್ಡು ಸಂಪಾದಿಸುವ ದಂಧೆಯನ್ನು ಮಾಡುವದಿಲ್ಲ ನಿಮ್ಮ ಮೂವತ್ತು ಸಾವಿರ ರೂಪಾಯಿಗಳು ನನ್ನ ದಂಡಿಗೆ ಒಂದು ಪಾರದ ವೆಚ್ಚವಾಗಲಾರದು. ಮೂವತ್ತು ಸಾವಿರ ರೂಪಾಯಿಗಳೇಕೆ ಮೂವತ್ತು ಲಕ್ಷ ರೂಪಾಯಿಗಳನ್ನು ಕೊಟ್ಟರೂ ನಾನು ವಸಯಿಕಿಲ್ಲೆಯಿಂದ ಪೋರ್ತುಗೀಜರನ್ನು ಹೊರಗೆ ಹಾಕದೆ ಪುಣೆಗೆ ಹೋಗಲಾರೆನು. ವಸಯಿಕಿಲ್ಲೆಯಿಂದ ಇವರನ್ನು ಹೊರಗೆ ಹಾಕುವದೇ ನನ್ನ ಪ್ರತಿಜ್ಞೆಯಾಗಿರುವದು. ಇವರು ನನಗೆ ದಂಡಕೊಟ್ಟು ಪಾರಾಗಬೇಕೆಂದು ಮಾಡಿರುವರೇನು? ಇವರಿಂದ ಆದ ಹಿಂದೂಜನರ ಧರ್ಮಘಲವನ್ನು ನೋಡಿದರೆ ಇವರು ಕೋಟಿ ರೂಪಾಯಿ ಸುರುವಿದರೂ ಆ ಅಪಮಾನವು ತುಂಬಿಬರುವಂತಿಲ್ಲ. ಆದ್ದರಿಂದ ಇವರನ್ನು ಇಲ್ಲಿಂದ ಹೊರಗೆ ಹಾಕುವದೇ ನಮಗೆ ಮುಖ್ಯ ಕೆಲಸವಾಗಿರುವದು. ಒಂದು ವೇಳೆ ಇವರು ನಮಗೆ ಹಣಿಯದಿದ್ದರೆ ಬಾಜೀರಾವ ಪೇಶ್ವೆಯವರು ಸ್ವತಃ ಸೈನ್ಯ ತಕ್ಕೊಂಡು ಬರುವರು. ಈ ಕೆಲಸದಲ್ಲಿ ನಮ್ಮ ದ್ರವ್ಯ-ದಂಡು ಎಷ್ಟು ನಾಶವಾದರೂ ಅದನ್ನು ನಾವು ಲೆಕ್ಕಿಸಲಾರೆವು. ಪೋರ್ತುಗೀಜರಿಗೆ ಜೀವ ಬೇಕಾಗಿದ್ದರೆ ನಾನು ಹೇಳಿದಂತೆ ಕಿಲ್ಲೆಯನ್ನು ಬಿಟ್ಟು ಹೋಗಲಿ! ಜೀವವು ಬೇಡಾಗಿದ್ದರೆ ಸಮ್ಮೊಖನೆ ಯುದ್ಧವ ಮಾಡಲಿ!

ಈ ಪ್ರಕಾರ ಪುನಃ ಚಿಮಣಾಜಿಯು ನುಡಿಯಲು ಒಪ್ಪಂದದ ಕೆಲಸವು ಆಗುವದಿಲ್ಲೆಂದು ಪೋರ್ತುಗೀಜ ಅಧಿಕಾರಿಗಳೂ, ಜಾನಸ್ಮಿಥನೂ ನಿರುತ್ಸಾಹಿಗಳಾದರು. ಕಿಲ್ಲೇದಾರನಾದ ಮೇನೇಸೀಝನು ಹೀಗೆ ತಮ್ಮ ಆಶಾಭಂಗವಾದೀತೆಂದು ತಿಳಿದಿದ್ದಿಲ್ಲ. ಚಿಮಣಾಜಿಯು ಸರ್ವಸಾಧಾರಣ ಮನುಷ್ಯನಿದ್ದು ವಸಯಿಯಂಥ ಭದ್ರವಾದ ಕಿಲ್ಲೆಯ ಮೇಲೆ ಸ್ವಾರೀ ಮಾಡಲು ಹೆದರಿ ಒಡಂಬಡಿಕೆಗೆ ಒಪ್ಪಬಹುದೆಂದು ಅವನು ತಿಳಿದಿದ್ದನು. ಪೇಶ್ವೇರ ಕಡೆಯಿಂದ ರಾಯಭಾರಿಯು ಬಂದಾಗಲೇ ಚಿಮಣಾಜಿಯು ಕೇಡಿಮನುಷ್ಯನಿರಬಹುದೆಂದು ತರ್ಕಿಸಿದ್ದನು. ಆದರೆ ಪ್ರತ್ಯಕ್ಷ ದರ್ಶನ

ದಿಂದ ಅವನ ಆ ಕಲ್ಪನೆಯೆಲ್ಲ ದೆಶೆಗೆಟ್ಟು ಓಡಿಹೋಯಿತು. ಚಿಮಣಾಜಿ ಅಪ್ಪಾನ ಮುಖಮುದ್ರೆ, ಆತನ ವೀರಶ್ರೀಯುಕ್ತ ಭಾಷಣ ಮೊದಲಾದವು ಗಳನ್ನು ನೋಡಿ ಆ ಫಿರಂಗೀ ಅಧಿಕಾರಿಗೆ ಹ್ಯಾಗೆ ಹ್ಯಾಗೋ ಅನಿಸಲಾರಂಭಿಸಿತು. ಆದರೆ ಉಪಾಯವಿಲ್ಲದ್ದರಿಂದ ಸ್ವಗೌರವಕ್ಕೆ ಬಾಧೆಬರಬಾರದೆಂದು ಗಾಂಭೀರ್ಯವನ್ನು ತಾಳಿ ಹೊರಡಲು ಎದ್ದುನಿಂತನು. ಜಾನಸ್ಮಿಥಸೊ ಪೆರೆರಾ ಇಬ್ಬರೂ ಎದ್ದುನಿಂತರು ಬಳಿಕ ಅವರು ಮತ್ತೊಮ್ಮೆ ಅಪ್ಪಾಜಿಗೆ ಮುಜುರೆಮಾಡಿದರು. ಹೋಗ ಹೋಗುತ್ತ ಮೋನೇಸೀಝುಸ ನುಡಿದನೇನಂದರೆ—ಒಡಂಬಡಿಕೆಯಂತೂ ಆಗಲಿಲ್ಲ. ನಾವು ಖಂಬೀರ ತನದಿಂದ ನಿಮ್ಮೊಡನೆ ಯುದ್ಧಮಾಡುವೆವು. ಯುದ್ಧದಲ್ಲಿ ನಾವೆಲ್ಲರೂ ಮಡಿದಾಗಲೇ ನಿಮಗೆ ಕಿಲ್ಲೆಯು ಹಸ್ತಗತವಾದೀತು; ಅಲ್ಲಿಯವರೆಗೆ ನೀವು ಕಿಲ್ಲೆಯ ಆಶೆಮಾಡುವಂತಿಲ್ಲ.''

ಈ ಪ್ರಕಾರ ನುಡಿದು ಆ ಮೂವರೂ ಡೇರೆಯಿಂದ ಹೊರಬಿದ್ದರು. ಅಪ್ಪಾಜಿಯೂ ಮರಾಟವೀರರೂ ತಟಸ್ಥರಾಗಿ ಕುಳಿತಿದ್ದರು. ಆಗ ಯಶವಂತರಾವ ಎಂಬ ಸರದಾರನು ಎದ್ದುನಿಂತು ಒಳ್ಳೇ ಆವೇಶದಿಂದ—ಈ ಫಿರಂಗೀ ಮರ್ಕಟಗಳು ನಮ್ಮೊಡನೆ ಏನು ಯುದ್ಧಮಾಡುವವು? ಇಷ್ಟು ಸೊಕ್ಕಿನಿಂದ ಮಾತಾಡುವ ಇವರನ್ನು ಈಗಲೇ ತುಂಡರಿಸಿ ಚಲ್ಲುವೆನು. ಅಂದರೆ ಫಿರಂಗೀ ಜನರಿಗೆ ಸರದಾರರೇ ಇಲ್ಲದಂತಾಗುವದು, ಎಂದು ನುಡಿಯುತ್ತ ನಿಜವಾಗಿಯೂ ಮುಂದಡಿಯಿಟ್ಟನು ಅವನ ಆವೇಶವನ್ನು ತಿಳಿದು ಮಲ್ಹಾರರಾವ ಹೋಳಕರನು ಅವನನ್ನು ಹಿಡಿದನು. ಆಗ ಚಿಮಣಾಜಿ ಅಪ್ಪಾಜಿಯು—ಹೀಗೆ ಮೋಸದಿಂದ ಶತ್ರುಗಳನ್ನು ಸಂಹರಿಸುವದು ನಿಜವಾದ ಕ್ಷಾತ್ರಧರ್ಮವಲ್ಲ ಒಪ್ಪಂದಕ್ಕಾಗಿ ಮಾತುಕಥೆಗೆ ಳನ್ನಾಡಬಂದ ಶತ್ರುಪಕ್ಷದವರನ್ನು ಸಂಹರಿಸುವದೆಂದರೆ ನೀಚತನವು. ಈಗೆ ಅವರು ಅಸಹಾಯರಾಗಿ ನಮ್ಮ ಮೇಲೆ ವಿಶ್ವಾಸವಿಟ್ಟು ನಮ್ಮ ಬಳಿಗೆ ಬಂದಿರುವರು. ಹೀಗೆ ವಿಶ್ವಾಸವಿಟ್ಟು ಬಂದವರನ್ನು ಸಂಹರಿಸುವದು ನಮಗೆ ಅಸಾಧ್ಯವಲ್ಲ. ಆದರೆ ಧರ್ಮದ ಕಡೆಗೆ ಲಕ್ಷಗೊಟ್ಟು ನಾವು ಮಾಡತಕ್ಕದ್ದನ್ನು ಮಾಡಬೇಕಲ್ಲದೆ ವಿಕಾರವಶರಾಗಿ ಮನಬಂದಂತೆ ಮಾಡಬಾರದು ಎಂದು ನುಡಿದನು. ಆಗ ಯಶವಂತರಾಯನು ಸ್ವಲ್ಪ ಶಾಂತನಾಗಿ—

ಯಶವಂತರಾವ—ನೀವು ಹೇಳುವದು ನಿಜ; ಆದರೆ ಶಿವಾಜಿ ಮಹಾರಾಜರು ಶಿಷ್ಟಾಯಿಗೆ ಬಂದ ಅಫಜುಲಖಾನನನ್ನು ಕೊಲ್ಲಲಿಲ್ಲವೇ?

ಚಿಮಣಾಜಿ—ಶಿವಾಜಿ ಮಹಾರಾಜರು ಖಾನನನ್ನು ಕೊಂದದ್ದು ನಿಜ; ಆದರೆ ಯಾಕೆ ಕೊಂದರೆಂಬದನ್ನು ನೋಡಿದರೆ ನಿಜಸಂಗತಿಯು ಗೊತ್ತಾಗದೆ ಇರದು. ಖಾನನು ಶಿವಾಜಿರಾಜರನ್ನು ಸೆರೆಹಿಡಿದೊಯ್ಯುವಂತೆ ಪ್ರತಿಜ್ಞೆಮಾಡಿ ಬಂದಿದ್ದು, ಭೆಟ್ಟಿಯ ಸಮಯದಲ್ಲಿ ಮಹಾರಾಜರಿಗೆ ಮೋಸಮಾಡಿ ಅವರಮೇಲೆ ಖಡ್ಗಪ್ರಯೋಗಮಾಡಿದನು. ಹೀಗೆ ಖಾನನು ಮೋಸಮಾಡಿದ್ದರಿಂದ ಶಿವಾಜಿ ಮಹಾರಾಜರು ಅದಕ್ಕೆ ತಕ್ಕಂತೆ ನಡೆದು ಹುಲಿಯುಗುರಿನಿಂದ ಆತನ ಪ್ರಾಣವನ್ನು ಹೀರಬೇಕಾಯಿತು. ಆದರೆ ಪ್ರಸ್ತುತದಲ್ಲಿ ಈ ಫಿರಂಗೀ ವೀರರು ಅಯೋಗ್ಯ ವರ್ತನವನ್ನೇನೂ ಮಾಡಿಲ್ಲ. ಇಂಥವರನ್ನು ಸಂಹರಿಸುವದು ಕ್ಷಾತ್ರಧರ್ಮಕ್ಕೆ ವಿರೋಧವಾಗಿದೆ. ಪ್ರತ್ಯಕ್ಷ ಯುದ್ಧಕ್ಕೆ ನಿಂತಾಗ ಸಂಹರಿಸಬೇಕಲ್ಲದೆ, ಕೈಗೆಸಿಕ್ಕಾಗ ಹೀಗೆ ಮೋಸಮಾಡಬಾರದು

ಚಿಮಣಾಜಿಅಪ್ಪಾಜಿಯು ಹೀಗೆ ಬೋಧಿಸಿದ್ದನ್ನು ಕೇಳಿ ಯಶವಂತರಾಯನು ಸಮಾಧಾನ ಹೊಂದಿ ಹಿರಿದ ಖಡ್ಗವನ್ನು ಒರೆಯಲ್ಲಿರಿಸಿ ಕುಳಿತುಕೊಂಡನು. ಆದರೂ ಅವನ ಜೀವಕ್ಕೆ ಸಮಾಧಾನವಿಲ್ಲದಾಯಿತು. ಮತ್ತೆ ಎದ್ದು ನಿಂತು—ಸರಕಾರ! ಈ ಕೋಟೆಯನ್ನು ಕೈವಶ ಮಾಡಿಕೊಳ್ಳಲಿಕ್ಕೆ ನನಗೇ ಅಪ್ಪಣೆ ಕೊಡಿರಿ. ಈ ಫಿರಂಗೀ ಜನರ ಚಂಡುಗಳನ್ನು ಹರಗಡಿದು ಹಾ ಹಾ ಅನ್ನುವಷ್ಟರಲ್ಲಿ ಕೋಟೆಯನ್ನು ಕೈವಶ ಮಾಡಿಕೊಳ್ಳುವೆನು. ಎಂದು ಬಿನ್ನವಿಸಿಕೊಂಡನು

ಚಿಮಣಾಜಿ—(ನಕ್ಕು) ಯಶವಂತರಾವ, ನೀನು ಪರಾಕ್ರಮಶಾಲಿಯಿರುವದೇನೋ ನಿಜ; ಆದರೆ ಹೀಗೆ ಉತಾವಳಿಯಾಗಬೇಡ; ಕಿಲ್ಲೆಯನ್ನು ಕೈವಶ ಮಾಡಿಕೊಳ್ಳುವ ಕೆಲಸವು ಈ ಕ್ಷಣದಿಂದಲೇ ಆರಂಭವಾಯಿತೆಂದು ತಿಳಿ; ಆದರೆ ಪದ್ಧತಿಗನುಸರಿಸಿ ಶಿಸ್ತಿನಿಂದ ಕೆಲಸ ಮಾಡಿ ಕೋಟೆಯನ್ನು ಕೈವಶ ಮಾಡಿಕೊಳ್ಳಬೇಕಾಗಿದೆ. ಕಿಲ್ಲೆಯ ಮೇಲೆ ಸಾಮಾನ್ಯ ಜನರಿರುವದಿಲ್ಲ. ಇದರ ಹೊರ್ತು ಬೆಂಕಿಯನ್ನು ಕಾರುವ ತೋಫು-ಬಂದೂಕುಗಳು ಅವರಲ್ಲಿ ಹೇರಳವಾಗಿರುವವು. ಸಾವಿರಾರು ಜನರ ಬಲಿಕೊಟ್ಟ ಹೊರತು ಕಿಲ್ಲೆಯು ನಮಗೆ ಹ್ಯಾಗೆ ಸಿಕ್ಕೀತು. ಆದ್ದರಿಂದ

ಒಳ್ಳೇ ಘೋರಣದಿಂದ ಕೌಶಲ್ಯದಿಂದ ಯುದ್ಧ ಮಾಡಿ ಕೋಟೆಯನ್ನು ಹಸ್ತ ಗತ ಮಾಡಿಕೊಳ್ಳಬೇಕಾಗಿದೆ. ನಮ್ಮ ಬಳಿಗೆ ಬಂದ ಆ ಫಿರಂಗೀ ಅಧಿಕಾರಿಗ್ಗಳು ಅತ್ಯಂತ ಸ್ವಾಭಿಮಾನಿಗಳಿರುವರಲ್ಲದೆ ಪೌರುಷಪ್ರಿಯರೂ ಇರುತ್ತಾರೆ. ಅವರಲ್ಲಿ ಪರಾಕ್ರಮವಿದ್ದಂತೆ ತೋರುತ್ತಿದೆ. ನಮ್ಮ ದರ್ಶನದಿಂದ ಅವರಿಗೆ ನಮ್ಮ ಯೋಗ್ಯತೆಯು ತಿಳಿದಿರಬಹುದು. ಅವರ ದರ್ಶನದಿಂದ ನಮಗೆ ಅವರ ಯೋಗ್ಯತೆಯು ಗೊತ್ತಾಯಿತು. ಶತ್ರುಗಳು ಪ್ರಬಲರಿರುವರು ಎಚ್ಚರದಿಂದ ಯುದ್ಧ ಮಾಡಬೇಕು. ಯಾಕೆ ಮಲ್ಹಾರರಾವ, ಫಿರಂಗಿಗಳು ನೋಟಕ್ಕೆ ಮರ್ಕಟಗಳಂತೆ ಕಂಡರೂ ಅವರ ಖಂಬೀರತನವು ನಿಮ್ಮ ಲಕ್ಷದಲ್ಲಿ ಬಂದಿತೋ ಇಲ್ಲವೋ?

ಮಲ್ಹಾರರಾವ—ಸರಕಾರ! ಲಕ್ಷದಲ್ಲಿ ಬರದೆ ಏನು? ಪೌರುಷಪ್ರಿಯರಿರುವರು. ಆದರೆ ನಮ್ಮ ಸೈನ್ಯಕ್ಕೆ ಎದುರಾಗುವಷ್ಟು ಸೈನ್ಯಬಲವು ಅವರಲ್ಲಿಲ್ಲ. ಇದೇ ನಮಗೆ ಒಂದು ಸಂತೋಷ. ಆದರೆ ಕಿಲ್ಲೆಯ ಭದ್ರತೆಯು ನಮಗೆ ಅಡ್ಡ ಬರುವದರಿಂದ ನಮ್ಮ ಬಲವು ಎಷ್ಟಿದ್ದರೂ ಎಲ್ಲಿ ನಿರರ್ಥಕವಾಗುವದೋ ಎಂಬ ಭೀತಿಯು ಅಲ್ಪಸ್ವಲ್ಪ ಬಾಧಿಸುತ್ತದೆ. ಆದರೂ ಶ್ರೀಪರಶುರಾಮನ ಕೃಪೆಯಿಂದ ಕಿಲ್ಲೆಯನ್ನು ಕೈವಶ ಮಾಡಿಕೊಳ್ಳುವೆವೆಂಬ ಭರವಸೆಯ ಮುಂದೆ ಯಾವ ಭೀತಿಗಳೂ ನಮ್ಮ ಮುಂದೆ ನಿಲ್ಲದಾಗಿವೆ. ಇನ್ನು ತಡವೇತಕ್ಕೆ? ಕೋಟೆಗೆ ಸುರಂಗವನ್ನು ಹಚ್ಚಿ ಖಿಂಡಿ ಕೆಡಹುವ ಪ್ರಯತ್ನ ಮಾಡೋಣ;

ಈ ಮೇರೆಗೆ ಬಹಳ ಹೊತ್ತಿನ ವರೆಗೆ ಸಂಭಾಷಣವು ನಡೆದು ನಾಳೆಗೆ ಮುಂಜಾನೆ ಉದ್ಯೋಗಕ್ಕೆ ಹತ್ತಬೇಕೆಂದು ನಿಶ್ಚಯಿಸಿ ಸಭೆಯನ್ನು ವಿಸರ್ಜಿಸಿದರು. ಅಂದು ಮರಾಟಸರದಾರರೆಲ್ಲರೂ ಆ ಫಿರಂಗೀ ಜನರ ಶಿಷ್ಟಾಯಿಯ ಘಾರ್ಷವಾಡುವದರಲ್ಲಿಯೇ ವೇಳೆಗಳೆದರು.

---

## ೧೫ ಯುದ್ಧಾರಂಭ.

ಫಿರಂಗೀಅಧಿಕಾರಿಗಳು ಬಂದು ಹೋದ ಮರುದಿನವೇ ಚಿಮಣಾಜಿಯು ಯುದ್ಧಕ್ಕೆ ಅಪ್ಪಣೆಯನ್ನು ಕೊಟ್ಟನು. ಎಲ್ಲಕ್ಕೂ ಮೊದಲು

ತುಳಾಜಿಯೇ ಕಿಲ್ಲಿಗೆ ಕೊಳ್ಳಿ ಇಡುವ ಉದ್ಯೋಗಕ್ಕೆ ನಡಿಸಿದನು. ಮರಾಟರ ದಂಡು ಹೆಬ್ಬಾಗಿಲ ಬಳಿಯಲ್ಲಿ ತಳವೂರಿತು. ಇದನ್ನು ಕಂಡು ಕಿಲ್ಲೆಯ ಮೇಲಿನ ಫಿರಂಗೀದಂಡಾಳುಗಳು ತೋಫುಗಳನ್ನು ಹೊಡೆಯಲಾರಂಭಿಸಿದರು. ಮೊದಲನೇ ಹೊಡತಕ್ಕೆ ತುಳಾಜಿಯ ದಂಡಿನಲ್ಲಿ ಅಸಂಖ್ಯ ಜನರು ಮಡಿದರು. ಆದರೆ ಕೇವಲ ಕೋಟೆಯ ಗೋಡೆಗೆ ಸುರಂಗ ಹಚ್ಚುವದಕ್ಕಾಗಿ ತೆಗ್ಗನ್ನು ತೋಡುತ್ತಿದ್ದ ತುಳಾಜಿಯ ಮುಖ್ಯಪರಿವಾರಕ್ಕೆ ಯಾವ ಬಗೆಯ ಅಪಾಯವೂ ಆಗಲಿಲ್ಲ. ಶತ್ರುಗಳ ತೋಫಿನ ಹೊಡತಕ್ಕೆ ತನ್ನ ದಂಡು ಉಳಿಯುವದಿಲ್ಲೆಂಬದು ತುಳಾಜಿಗೆ ಗೊತ್ತಿದ್ದರೂ ಅವನು ಬುದ್ಧಿಪೂರ್ವಕವಾಗಿ ಹಾಗೆ ಮಾಡಿದ್ದನು. ಶತ್ರುಗಳ ಲಕ್ಷವು ಬಯಲಲ್ಲಿದ್ದ ಬಹುಸಂಖ್ಯಾಕ ದಂಡಿನ ಕಡೆಗೆ ಹೋಗಬೇಕಲ್ಲದೆ ಕೋಟೆಯ ಬುಡದಲ್ಲಿದ್ದ ತಮ್ಮ ಕಡೆಗೆ ಹೋಗಬಾರದೆಂಬುದೇ ಆತನ ಯೋಚನೆಯಾಗಿತ್ತು. ಅವನ ಈ ಯೋಚನೆಯು ಪೂರ್ಣವಾಗಿ ಸಾಧಿಸಿತು. ಯಾಕಂದರೆ ತೋಫಿನ ಹೊಡತಕ್ಕೆ ಕೆಲಜನ ಸೈನಿಕರು ಮೃತರಾಗಲು ಉಳಿದವರು ಓಡಿ ಹೋಗಿ ಗುಡ್ಡದ ಮರೆಗೆ ಅಡಗಿಕೊಂಡರು.

ಹೀಗೆ ಶತ್ರುಗಳು ಅಂಜಿ ಓಡಿಹೋದದ್ದರಿಂದ ಫಿರಂಗೀ ದಂಡಾಳುಗಳಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ವಸಯಿಯ ಕೋಟೆಗೆ ನೆಲದಮೇಲಿಂದ ಯುದ್ಧಮಾಡುವದೆಂದರೆ ಅದೊಂದೇ ಭಾಗವಾಗಿತ್ತು. ಉಳಿದ ಮೂರು ಭಾಗಗಳಲ್ಲಿ ಪ್ರಚಂಡ ನೀರು ಇದ್ದದರಿಂದ ಅಲ್ಲಿ ಶತ್ರುಗಳ ಪ್ರವೇಶವೇ ಆಗುವಹಾಗಿದ್ದಿಲ್ಲ. ಆದ್ದರಿಂದ ಇದೊಂದೇ ಭಾಗವನ್ನು ಅವರು ಬಹು ದಕ್ಷತೆಯಿಂದ ರಕ್ಷಿಸಬೇಕಾಗಿತ್ತು. ಯುದ್ಧವು ಪ್ರಾರಂಭವಾದ ದಿನ ಅಲ್ಲಿಗೆ ಎಲ್ಲ ಫಿರಂಗೀ ಅಧಿಕಾರಿಗಳು ಬಂದಿದ್ದರು. ಕಿಲ್ಲೇದಾರನೇ ತನ್ನ ಕೈಮುಟ್ಟಿ ತೋಫಿಗೆ ಕೊಳ್ಳಿಯನ್ನು ಕೊಟ್ಟಿದ್ದನು. ಆದರೆ ಮೊದಲನೇ ದಿನವೇ ಶತ್ರುಗಳು ಓಡಿಹೋದ್ದರಿಂದ ಅವರಿಗೆ ಹೀಗೆ ಕಲ್ಪನಾತೀತವಾಗಿ ಆನಂದವಾದದ್ದರಲ್ಲಿ ಆಶ್ಚರ್ಯವಿಲ್ಲ. ಯಾಕೆ ಶತ್ರುಗಳು ಓಡಿಹೋದರು? ಎಂಬದರ ರಹಸ್ಯವು ಅವರಿಗೆ ತಿಳಿಯಲಿಲ್ಲ. ತೋಫಿನ ಹೊಡತಕ್ಕಂಜಿ ಪ್ರಾಣಭಯದಿಂದ ಓಡಿಹೋದರೆಂದೇ ಅವರು ಭಾವಿಸಿದರು. ಮರಾಟರು ಗನೀಮೀಕಾವಾದವರೆಂಬ ಪ್ರಸಿದ್ಧಿಯು ಬಹುಕಾಲದಿಂದಿರುವದು. ಆದರೆ ಮರಾಟರ ಹೃದಯವನ್ನರಿಯದ ಆ ಫಿರಂಗೀ

ಅಧಿಕಾರಿಗಳಿಗೆ ಅದರ ರಹಸ್ಯವು ಗೊತ್ತಾಗಲಿಲ್ಲ.

ಶತ್ರುಗಳು ಓಡಿಹೋದದರಿಂದು ಕಿಲ್ಲೆಯ ಮೇಲಿನ ಫಿರಂಗೀ ಜನರು ತೋಫಿಗೆ ಕೊಳ್ಳಿ ಕೊಡುವದನ್ನು ನಿಲ್ಲಿಸಿದರು. ಕೋಟೆಯ ಬುಡಭಾಗ ದಲ್ಲಿದ್ದ ತುಳಾಜಿಗೂ ಅನಾಯಾಸ ಸಿಕ್ಕಸ್ಥಳದ ಸುರಂಗ ಹಾಕುವದಕ್ಕೆ ತನ್ನ ಮನಸ್ಸಿಗೆ ಸಮರ್ಪಕವಾಗುವ ಹಾಗೆ ತೆಗ್ಗು ತೋಡಿದ. ಅದರಲ್ಲಿ ಮದ್ದು ತುಂಬಿ ಮದ್ದಿಗೆ ಕೊಳ್ಳಿ ಸತ್ತುವಹಾಗೆ ಮಾಡಿಸಿ ಅಲ್ಲಿಂದ ಪಲಾಯನ ಮಾಡಿದನು. ಮುಂದೆ ಕೆಲ ಹೊತ್ತಿನಮೇಲೆ ಸುರಂಗವು ಹಾರಿತು. ಆದರೆ ಆದರಿಂದ ಪ್ರಚಂಡಶಬ್ದವುಮಾತ್ರವಾಯಿತಲ್ಲದೆ, ಕೋಟೆಯ ಒಂದು ಕಲ್ಲು ಕೂಡಾ ಕಳಚಿ ಬೀಳಲಿಲ್ಲ. ಈ ಸುರಂಗದ ರಭಸಕ್ಕೆ ಕೋಟೆಯ ಗೋಡೆಯು ಕಳಚದೆ ನಿಲ್ಲಲಾರದೆಂದು ತುಳಾಜಿಯು ಖಂಡಿತವಾಗಿ ನಂಬಿದ್ದನು; ಆದರೆ ಅವನ ನಂಬಿಗೆಯು ವ್ಯರ್ಥವಾಯಿತು. ಸುರಂಗ ಹಾರುವದನ್ನು ತುಳಾಜಿಯು ದೂರದಲ್ಲಿ ಮರೆಯಲ್ಲಿ ನಿಂತು ನೋಡುತ್ತಿದ್ದನು. ಆದರೆ ಆದರಿಂದ ಯಾವ ಕಾರ್ಯವೂ ಆಗದ್ದರಿಂದ ಉದಾಸೀನನಾಗಿ ಪಾಳೆಯದ ದಾರೀ ಹಿಡಿದನು. ಸುರಂಗದ ಪ್ರಚಂಡ ಧ್ವನಿಯಿಂದ ಕಿಲ್ಲೆಯ ಮೇಲಿ ರುವ ಫಿರಂಗಿಗಳು ಮಾತ್ರ ಜಾಗರೂಕರಾದರು. ಮರಾಠರು ಕಿಲ್ಲೆಯ ಬುಡಕ್ಕೆ ಬಂದು ನಿರ್ಭಯದಿಂದ ಸುರಂಗಹಾಕಿ ಹೋಗುವರೆಂಬದು ಅವ ರಿಗೆ ತಿಳಿದು ಬಂದಿತು. ಆದ್ದರಿಂದ ಅವರು ಕಿಲ್ಲೆಯ ಸನಿಯಕ್ಕೆ ಶತ್ರು ಪಕ್ಷದ ಒಂದು ಕ್ಷುದ್ರ ಪ್ರಾಣಿಯು ಕೂಡಾ ಸುಳಿಯದಂತೆ ದಕ್ಷತೆಯನ್ನು ವಹಿಸಿದರು. ತುಳಾಜಿಯ ಈ ಸುರಂಗದಿಂದ ಮರಾಠರಿಗೆ ಅನುಕೂಲ ವಾಗುವ ಬದಲು ಮತ್ತಿಷ್ಟು ಪ್ರತಿಕೂಲ ಪರಿಸ್ಥಿತಿಯುಂಟಾಯಿತು.

ತುಳಾಜಿಯು ಪಾಳೆಯವನ್ನು ಸೇರಿ ಈ ದಿನ ಮಾಡಿದ ತನ್ನ ಉಪಾ ಯವು ಫಲಕಾರಿಯಾಗಲಿಲ್ಲವೆಂದೂ ಕಿಲ್ಲೆಯು ಬಹುಭದ್ರವಾದದ್ದೆಂದೂ ಹೇಳಿದನು. ಅದನ್ನು ಕೇಳಿ ಅಪ್ಪಾಜಿಯು ಸ್ವಲ್ಪ ಯೋಚಿಸಿ ಆಗಲಿ, ದೀರ್ಘಪ್ರಯತ್ನ ಮಾಡಿ ಈ ಕೋಟೆಯು ಭದ್ರತೆಯು ಎಷ್ಟಿದೆಯೆಂಬದನ್ನು ಒಮ್ಮೆ ನೋಡಿಬಿಡೋಣ ಎಂದು ನುಡಿದು ಮಲ್ಹಾರರಾಯನನ್ನು ಕುರಿತು— ಮಲ್ಹಾರಬಾ, ಪ್ರಥಮದಿನದ ಪ್ರಯತ್ನವು ನಿಷ್ಫಲವಾಯಿತು. ಆದರೂ ಇದಕ್ಕೆ ನಾವು ಅಂಜುವ ಕಾರಣವಿಲ್ಲ. ನಾಳೆಗೆ ಶತ್ರುಗಳಿಗೆ ಏನಾದರೂ ಹಂಚಿಕೆಯಿಂದ ಕೈತೋರಿಸಲಿಕ್ಕೆ ಬೇಕು. ಕೋಟೆಗೆ ಶಿಂಡಿಯನ್ನು ಕೆಡಹಿ

ಒಳಗೆ ಹೋಗುವದಕ್ಕೆ ಇನ್ನೂ ಕೆಲದಿನ ಅವಕಾಶವು ಬೇಕು. ಆದರೆ ಶತ್ರುಗಳಿಗೆ ಅಂಜಿಕೆ ಹುಟ್ಟುವ ಹಾಗೆ ಮೊದಲು ನಾವು ಕೆಲಸ ಮಾಡದಿದ್ದರೆ ನಮ್ಮನ್ನು ಅವರು ಲೆಕ್ಕಿಸಲಾರರು. ಈ ದಿನ ನಮ್ಮವರು ಬುದ್ಧಿಪೂರ್ವಕವಾಗಿ ತಿರುಗಿ ಬಂದಿದ್ದರೂ ಶತ್ರುಗಳಿಗೆ ಇದರಿಂದ ಉಲ್ಲಾಸವೇ ಆಗಿರುವದು. ಶತ್ರುಗಳಲ್ಲಿ ಯಾವಾಗಲೂ ಭಯವನ್ನೇ ಹುಟ್ಟಿಸುತ್ತಿರಬೇಕಲ್ಲದೆ ಅವರಲ್ಲಿ ಆನಂದವನ್ನುಂಟುಮಾಡಗೊಡಬಾರದು. ಇದು ಯುದ್ಧನೀತಿಯಲ್ಲಿ ಒಂಪಾಗಿರುವದು. ಆರಂಭಕ್ಕೆ ಶತ್ರುಪಕ್ಷದವರಿಗೆ ಒಮ್ಮೆ ಕೈತೋರಿಸಿದರೆ ಆ ಅಂಜಿಯು ಕೊನೆಯ ವರೆಗೂ ಉಳಿಯುವದು. ಶತ್ರುಪಕ್ಷದ ದಂಡಾಳುಗಳ ಧೈರ್ಯವು ಕಗ್ಗುವದು. ಇಂಥ ಉಪಾಯವನ್ನು ಏನು ಮಾಡಬೇಕು! ಎಂದು ಕೇಳಿದನು.

ಚಿಮಣಾಜಿಅಪ್ಪಾಜಿಯವರ ಈ ಬಗೆಯ ಭಾಷಣವನ್ನು ಕೇಳಿ ಮಲ್ಹಾರರಾಯನು ತನಗೆ ತಿಳಿದ ಉಪಾಯವನ್ನು ಹೇಳಿದನು. ತುಳಾಜಿಯೂ ಬೇರೊಂದು ಹೇಳಿದನು. ಆದರೆ ಅವರಿಬ್ಬರ ಉಪಾಯಗಳು ಅಪ್ಪಾಜಿಯ ಮನಸ್ಸಿಗೆ ಬರಲಿಲ್ಲ. ಅವನು ಮತ್ತೆ ವಿಚಾರಿಸಲು ಬಳಿಯಲ್ಲಿದ್ದ ಯಶವಂತರಾಯನು—ಸರಕಾರ, ಈ ಕಾಲಕ್ಕೆ ನನಗೊಂದು ಹಂಚಿಕೆಯು ತೋಚಿರುವದು. ಇದು ಸಯುಕ್ತಿಕವೆಂದು ಕಂಡುಬಂದರೆ ಸರಕಾರವು ಅಂಗೀಕರಿಸಬಹುದು. ಆ ಹಂಚಿಕೆಯು ಯಾವದೆಂದರೆ—ನಾನು ಆರಿಸಿದ ನೂರು ಜನ ರಾವುತರದೊಂದು ತುಕ್ಕಡಿಯನ್ನು ತಕ್ಕೊಂಡು ಕೋಟೆಯ ಬಾಗಿಲವನ್ನು ಮುತ್ತುವೆನು. ಮಲ್ಹಾರರಾಯರಾಗಲಿ, ತುಳಾಜಿರಾಯರಾಗಲಿ ನಾಲ್ಕೈದು ನೂರು ಜನರಾವುತರದೊಂದು ಪಥಕವನ್ನು ತಕ್ಕೊಂಡು ಬಳಿಯಲ್ಲಿರುವ ಗಿಡಗಳ ಗುಂಪಿನಲ್ಲಿ ಅಡಗಿಕೊಂಡಿರಬೇಕು. ನಾವು ಸದ್ದಿಲ್ಲದೆ ಕೋಟೆಯ ಬಾಗಿಲಕ್ಕೆ ಹೋಗಿ ಮುಟ್ಟುವದರಿಂದ ಫಿರಂಗಿಗಳು ಸುರಂಗದ ಭಯದಿಂದ ನಮ್ಮನ್ನು ಹೊಡೆದಟ್ಟುವದಕ್ಕಾಗಿ ನಮ್ಮೊಡನೆ ಹೋರಾಡಲಿಕ್ಕೆ ಬರುವರು. ನಾವು ಅಲ್ಪ ಸಂಖ್ಯಾಕರಿರುವದರಿಂದ ನಮ್ಮ ಪಾರುಪತ್ಯೆಗೆ ತಕ್ಕಷ್ಟೇ ಸೈನ್ಯವನ್ನು ಅವರು ತರುವರು. ಹೀಗೆ ನಮ್ಮೊಡನೆ ಅವರು ಯುದ್ಧಕ್ಕೆ ಬರಲು ನಾನು ಅವರೊಡನೆ ಯುದ್ಧ ಮಾಡದೆ ಸ್ವಲ್ಪ ಸ್ವಲ್ಪ ಹಿಂದಕ್ಕೆ ಸರಿಯುತ್ತ ಕೋಟೆಯಿಂದ ದೂರದ ವರೆಗೆ ಅವರು ಬರುವಂತೆ ಮಾಡುವೆನು. ಬಳಿಕ ಅಡಗಿಕೊಂಡಿದ್ದ

ನಮ್ಮ ಸೈನ್ಯವು ಬೈಲಿಗೆ ಬಂದು ಶತ್ರುಗಳನ್ನು ಸುತ್ತುಗಟ್ಟಿ ಅವರಿಗೆ ಚನ್ನಾಗಿ ಕೈತೋರಿಸಬೇಕು. ನಾಲ್ಕುದಿಕ್ಕಿಗೆ ನಮ್ಮ ಮುತ್ತಿಗೆಯು ಬೀಳುವದರಿಂದ ಬಂದವರಲ್ಲಿ ಒಬ್ಬನೂ ತಿರುಗಿ ಕಿಲ್ಲೆಯನ್ನು ಸೇರಲಾರನು. ಹೀಗೆ ಆದರೆ ಶತ್ರುಗಳಿಗೆ ನಮ್ಮ ಭಯವು ಚನ್ನಾಗಿ ಕೂಡ್ರುವದು.

ಈ ಮೇರೆಗೆ ಯಶವಂತರಾಯನು ಹೇಳಲು, ಆತನ ಈ ಹಂಚಿಕೆಯು ಚಿಮಣಾಜಿಅಪ್ಪಾನ ಮನಸ್ಸಿಗೆ ಬಂದಿತು. ತುಳಾಜಿ ಹಾಗು ಮಲ್ಹಾರರಾವ ಇವರೂ ಆದಕ್ಕೆ ಒಪ್ಪಿಕೊಂಡರು. ಆಗ ಚಿಮಣಾಜಿಯು ಯಶವಂತರಾಯನ ಬೆನ್ನುಚಪ್ಪರಿಸಿ—ಯಶವಂತರಾವ, ಈ ಹಂಚಿಕೆಯಲ್ಲಿ ನಿಶ್ಚಯವಾಗಿ ಯಶಸ್ಸನ್ನು ಹೊಂದುವಿ, ಎಂದು ಹೇಳಿ ನೂರು ಜನ ರಾವುತರೊಡನೆ ಕೋಟೆಗೆ ಮುತ್ತಿಗೆ ಹಾಕಲು ಆಜ್ಞಾಪಿಸಿದನು. ಮತ್ತು ಮಲ್ಹಾರರಾಯನಿಗೆ ಐದುನೂರು ಜನ ರಾವುತರೊಡನೆ ಬಳಿಯಲ್ಲಿರುವ ಗಿಡಗಳ ಗುಂಪಿನಲ್ಲಿ ಅಡಗಿಕೊಂಡಿರಲು ಆಜ್ಞಾಪಿಸಿದನು.

ಮರುದಿನ ಯಶವಂತರಾಯನು ಮರಾಟರ ಕೈಯನ್ನು ಫಿರಂಗಿಗಳಿಗೆ ತೋರಿಸುವದಕ್ಕಾಗಿ ಗೊತ್ತಾದ ಮೇರೆಗೆ ಕೋಟೆಗೆ ಮುತ್ತಿಗೆಯನ್ನಿಕ್ಕಿದನು. ಆತನು ಸದ್ದಿಲ್ಲದೆ ಕೋಟೆಯ ಬಾಗಿಲವರೆಗೆ ಹೋದದ್ದರಿಂದ ಕಾವಲುಗಾರರು ಗಾಬರಿಯಾಗಿ ಬಾಗಿಲ ಭದ್ರಪಡಿಸಿ ತಡವಿಲ್ಲದೆ ಕಿಲ್ಲೇದಾರನಿಗೆ ಹೇಳಿಕಳಿಸಿದನು. ಆಗ ಕಿಲ್ಲೇದಾರನು ಯಾವದೋ ಒಂದು ಆಲೋಚನೆಯ ಸಲುವಾಗಿ ಗುಪ್ತಸ್ಥಳದಲ್ಲಿದ್ದದರಿಂದ ಅವನಿಗೆ ಬೇಗನೆ ಈ ಸಂಗತಿಯು ಗೊತ್ತಾಗಲಿಲ್ಲ. ಪೇರಾ ಎಂಬ ಸರದಾರನಿಗೆ ಈ ಸಂಗತಿಯು ತಿಳಿದದ್ದರಿಂದ ಅವನು ಮರಾಟರ ಶಾಸನ ಮಾಡಲಿಕ್ಕೆ ಅತ್ಯುತ್ಸಕನಾದನು. ಕಿಲ್ಲೇದಾರನು ಬರುವವರೆಗೆ ತಡೆಯುವಷ್ಟು ಅವಧಾನವು ಅವನಿಗೆ ಉಳಿಯಲಿಲ್ಲ. ಅವನು ಫಿರಂಗೀವೀರರಿಗೆ ಈ ಸುದ್ದಿಯನ್ನು ತಿಳಿಸಿ ಯಾರು ಈದಿನ ಮರಾಟರಮೇಲೇರಿ ಹೋಗುವಿರಿ? ಎಂದು ಕೇಳಲು, ಆಗ "ಆಂಟೋಲ ಬ್ರಾಗಾಂಝಾ" ಎಂಬ ಶೂರತರುಣನು ಮುಂದರಿದು ಬಂದನು. ಈ ಆಂಟೋಲಬ್ರಾಗಾಂಝಾ ತರುಣನು ೨೩|೨೪ ವರುಷದ ಹಳ್ಳೇ ಪ್ರಾಯದ ತರುಣನಿದ್ದು, ಅತ್ಯಂತ ಪರಾಕ್ರಮಶಾಲಿಯಾಗಿದ್ದನು. ಮರಾಟರ ಎಲವುಗಳನ್ನು ಪುಡಿಪುಡಿ ಮಾಡಬೇಕೆಂದು ಅವನು ಬಹುದಿವಸಗಳಿಂದ ಹಾತೊರೆಯುತ್ತಿದ್ದನು. ಈ ದಿನ ಅನಾಯಾಸವಾಗಿ ಪ್ರಸಂಗ

ಬಂದದ್ದರಿಂದ ನನ್ನನ್ನೇ ಮರಾಟರ ಮೇಲೆ ಕಳಿಸಬೇಕೆಂದು ಅವನು ಆಗ್ರಹ ಪಟ್ಟನು. ಆತನ ಉತ್ಸಾಹವನ್ನೂ ಶೌರ್ಯವನ್ನೂ ಬಲ್ಲವನಾದ ಪೆರೆರಾ ಸರದಾರನು ಆತನಿಗೆ ಮುನ್ನೂರು ಜನರದೊಂದು ತುಕ್ಕಡಿಯನ್ನು ತಕ್ಕೊಂಡು ಮರಾಟರಿಗೆ ಎದುರಾಗಲು ಅಪ್ಪಣೆಕೊಟ್ಟನು. ಮುತ್ತಿಗೆ ಹಾಕಿದ ಮರಾಟರು ನೂರಾರು ಜನರಿದ್ದದರಿಂದ ಅವನ ಪಾರುಪತ್ಯಗೆ ಈ ಮುನ್ನೂರು ಜನರು ಸಾಕಾಗುವರೆಂದು ಪೆರೆರಾ ಸರದಾರನು ತಿಳಿದನು. ಮರಾಟರು ನಿಜವಾಗಿ ನೂರೇಜನರಿದ್ದರೆ ಪೆರೆರಾ ಸರದಾರನ ಈ ತಿಳುವಳಿಕೆಯು ಸತ್ಯವಾಗುತ್ತಿತ್ತು. ಆದರೆ ಮರಾಟರು ಗನೀಮೀಕಾವಾದವರೆಂಬದು ಅವನ ಲಕ್ಷ್ಯದಲ್ಲಿ ಬಾರದ್ದರಿಂದ ಅವನ ದಡ್ಡತನವು ಮರಾಟರಿಗೆ ಪಥ್ಯಕರವಾಗಿ ಪರಿಣಮಿಸಿತು.

ಆಂಟೋಲಬ್ರಾಗಾಂಝಾ ಸರದಾರನು ಮುನ್ನೂರಜನ ಹಿಂದೂ ದಂಡಾಳುಗಳನ್ನು ಆರಿಸಿದ ೨೦|೨೫ ಜನ ಫಿರಂಗೀ ದಂಡಾಳುಗಳನ್ನು ಕೂಡಿಕೊಂಡು ಕೋಟೆಯ ಬಾಗಿಲ ಬಳಿಗೆ ಬಂದನು. ಕಾವಲುಗಾರರು ಬಾಗಿಲ ತೆರೆದು ಮಾರ್ಗವ ಮಾಡಿಕೊಟ್ಟರು. ಒಳಗೆ ತಮ್ಮ ಮೂರಷ್ಟು ಸೈನ್ಯವು ಇರುವದೆಂದು ತಿಳಿದು ಯಶವಂತರಾಯನು ಸೈನ್ಯದೊಡನೆ ಮೆಲ್ಲಗೆ ಸರಿಯುತ್ತೊಡಗಿದನು. ಆ ಬಿಸಿರಕ್ತದ ಫಿರಂಗೀ ತರುಣ ಸರದಾರನಿಗೆ ಮುಂದೆ ಬರುವ ಕತ್ತಲರಾತ್ರಿಯ ಕಲ್ಪನೆಯು ಬಂದಿಲ್ಲ. ಪಾಪ! ಅನನುಭವಿಕನಾದ ಆ ತರುಣನು ಯುದ್ಧದ ಹಿಡತಗಳನ್ನೇನು ಬಲ್ಲನು! ಮರಾಟರು ತಮ್ಮನ್ನು ನೋಡಿ ಅಂಜಿದರೆಂದು ತನ್ನ ಸೈನ್ಯಕ್ಕೆ ಅವರ ಮೇಲೆ ಬೀಳಲು ಅಪ್ಪಣೆ ಕೊಟ್ಟನು. ಮರಾಟರು ರಾವುತರಿದ್ದು, ಫಿರಂಗೀಸೈನಿಕರು ಕಾಲಾಳುಗಳಾಗಿದ್ದರು. ಯಶವಂತರಾಯನು ಶತ್ರುಗಳಿಗೆ ಸ್ವಲ್ಪವೂ ಸಂಶಯವುಂಟಾಗದಂತೆ ಹಾಗು ಅವರ ಅಳವಿನಲ್ಲಿ ಸಿಗದಂತೆ ಹಿಂಜಾರುತ್ತ ಸಾಂಕೇತಿಕ ಸ್ಥಳದ ವರೆಗೆ ಬಂದನು. ಗಾರುಡಿಗನ ಗಾರುಡಿಯ ಸುನಾದಕ್ಕೆ ಮೋಹಿತವಾಗಿ ಬೆನ್ನಟ್ಟಿ ಬರುವ ಸರ್ಪದಂತೆಯೂ, ಬೇಟೆಯ ಆಶೆಗಾಗಿ ಬರುವ ವ್ಯಾಘ್ರನಂತೆಯೂ ಆ ಫಿರಂಗೀಸರದಾರನು ನಿರ್ಭಯದಿಂದ ಕುದುರೆಯನ್ನೋಡಿಸುತ್ತ ಬಂದನು. ಅವನ ಸಂಗಡ ಇದ್ದ ಬೇರೆ ಫಿರಂಗೀ ಸಿಪಾಯಿಗಳು ಅಶ್ವಾರೂಢರಾಗಿ ಬಂದರು. ಹಿಂದೂಸೈನಿಕರು ಮಾತ್ರ ಪಾದಚಾರಿಗಳಾಗಿದ್ದರು.

ಸಾಂಕೇತಿಕ ಸ್ಥಳವು ಬರಲು ಯಶವಂತರಾಯನು ಶತ್ರುಗಳಿಗೆ ಎದುರಾಗಲು ಸೈನಿಕರಿಗೆ ಅಪ್ಪಣೆ ಮಾಡಿದನು. ಆಗ ಉಭಯ ಸೈನಿಕರಿಗೆ ಕೈಗೆ ಕೈ ಹತ್ತಿ ತುಮುಲಕಾಳಗವೆಸಗಿತು. ಫಿರಂಗೀಸೈನಿಕರು ನಾವು ಮುನ್ನೂರು ಜನರಿದ್ದು, ಹಾ ಹಾ ಅನ್ನುವಷ್ಟರಲ್ಲಿ ಇವರ ಗಂಟಲುಹಿಸುಕುವೆವೆಂದು ಉಬ್ಬುಬ್ಬಿ ಕಾಳಗವಮಾಡಲಾರಂಭಿಸಿದರು. ಇದೇ ಸಂಧಿಯನ್ನು ಕಾಯುತ್ತಿದ್ದ ಮಲ್ಹಾರರಾಯನು ಐದುನೂರು ಜನ ರಾವುತರೊಡನೆ ಹಿಂದಿನಿಂದ ಬಂದು ಫಿರಂಗೀಸೈನಿಕರನ್ನು ಮುತ್ತಿದನು. ಹೀಗೆ ಅಕಸ್ಮಾತ್ತಾಗಿ ಬಂದು ಮುತ್ತಿದ ಶತ್ರುಸೈನ್ಯವನ್ನು ನೋಡಿ ಫಿರಂಗೀಸೈನಿಕರ ಹಲ್ಲ ಣವು ಹಾರಿತು. ಈ ಜನರು ಭೂಮಿಯನ್ನು ಬಗೆದು ಬಂದರೋ ಎಂದು ಅವರು ಗಾಬರಿಯಾಗಿ ಯುದ್ಧಮಾಡುವದನ್ನು ಬಿಟ್ಟುಕೊಟ್ಟು ಕಕ್ಕಾವಿಕ್ಕಿಯಾಗಿ ಸುತ್ತಲೂ ನೋಡತೊಡಗಿದರು. ಮರಾಟರು ತಮ್ಮನ್ನು ಕೋಟೆಯಿಂದ ಇಷ್ಟುದೂರ ಎಳೆತಂದದ್ದರ ರಹಸ್ಯವು ತಟ್ಟನೆ ಆಂಟೋಲಬ್ರಾಗಾಂಝಾನ ಲಕ್ಷದಲ್ಲಿ ಬಂದಿತು. ಆದರೆ ಪ್ರಸಂಗವು ಮೈಮೇಲೆ ಬಂದಬಳಿಕ ಮಾಡುವದೇನು? ಧೈರ್ಯವ ತಂದುಕೊಂಡು ತಮ್ಮ ಸೈನಿಕರಿಗೆ ಹುರುಪು ಕೊಟ್ಟು ಫಿರಂಗೀಸಿಪಾಯಿಗಳೊಡನೆ ಮುಂದಕ್ಕೆ ಕುದುರೆಯನ್ನು ನೂಕಿದನು. ಸುತ್ತಲೂ ಮುತ್ತಿದ ಮರಾಟರು ಭಲ್ಲೆಗಳಿಂದ ಫಿರಂಗೀಸಿಪಾಯಿಗಳನ್ನು ಯಮಸದನಕ್ಕಟ್ಟತೊಡಗಿದರು. ಆಗ ಆಂಟೋಲಬ್ರಾಗಾಂಝನು ಅತ್ಯಂತ ರೊಚ್ಚಿನಿಂದ ಯಶವಂತರಾಯನನ್ನು ಗುರಿನೋಡಿ ಪಿಸ್ತೂಲನ್ನು ಹಾರಿಸಿದನು. ಆದರೆ ಯಶವಂತರಾಯನು ಒಳ್ಳೇ ಜಾಣತನದಿಂದ ಆತನ ಆ ಪಿಸ್ತೂಲಿನ ಹೊಡತವನ್ನು ತಪ್ಪಿಸಿಕೊಂಡನು. ಮತ್ತು ಒಳ್ಳೇ ವೇಗದಿಂದ ಕುದುರೆಯನ್ನೋಡಿಸುತ್ತ ಆ ಸರದಾರನ ಸಮೀಪಕ್ಕೆ ಬಂದು ಅವನು ಪಿಸ್ತೂಲನ್ನು ಬಾರ ಮಾಡುವಷ್ಟರಲ್ಲಿ ತನ್ನ ಪ್ರಚಂಡವೂ ಹದನವೂ ಆದ ಭಲ್ಲೆಯಿಂದ ಆ ಸರದಾರನ ಆಯಕಟ್ಟಿಗೆ ತಿವಿದನು. ಆ ತೀಕ್ಷ್ಣಭಲ್ಲೆಯು ಆ ಸರದಾರನ ಹೊಟ್ಟೆಯನ್ನು ಬಗೆದು ಬೆನ್ನಲ್ಲಿ ಪಾರಾಯಿತು. ಕೂಡಲೆ ಆ ಸರದಾರನು ಮರ್ಕಟನಂತೆ ಹಲ್ಲು ಕಿಕ್ಕಿರಿದು ಕುದುರೆಯ ಮೇಲಿಂದ ನೆಲಕ್ಕುರುಳಿದನು. ಸೇನಾಪತಿಯು ಹತನಾದದ್ದನ್ನು ನೋಡಿ ಆ ಫಿರಂಗೀ ಸೈನಿಕರಲ್ಲುಂಟಾದ ಗೊಂದಲವು ವರ್ಣನವನ್ನು ಮೀರಿತು.

ಮರಾಟರ ಹೊಡತವನ್ನು ತಾಳಲಾರದೆ ಓಡಿಹೋಗಲು ಹವಣಿಸು

ತ್ತಿದ್ದ ಆ ಶಿಪಾಯಿಗಳು ಸೇನಾಪತಿಯು ಸತ್ತ ಬಳಿಕಂತೂ ಹೌಹಾರಿ ಶಸ್ತ್ರಾಸ್ತ್ರಗಳನ್ನು ಚಲ್ಲಿಕೊಟ್ಟು ಓಡಿಹೋಗಲಾರಂಭಿಸಿದರು. ಆದರೆ ಅವರು ಮರಾಟರ ಕೈಯೊಳಗಿಂದ ಪಾರಾಗುವದೇ ಅಶಕ್ಯವಾಯಿತು. ಶರಣು ಬಂದವರನ್ನು ಮರಾಟರು ಸೆರೆಹಿಡಿದರು. ಉಳಿದವರು ಅವರ ಕತ್ತಿ-ಭಲ್ಲೆಗಳಿಗೆ ಆಹುತಿಯಾದರು. ಒಂದು ಮುಹೂರ್ತದಲ್ಲಿ ಆ ಕಾನನವೆಲ್ಲ ಹೆಣಮಯವಾಯಿತು. ಫಿರಂಗೀಸೈನಿಕರಲ್ಲಿ ಒಬ್ಬನೂ ತಿರುಗಿ ಕಿಲ್ಲೆಯನ್ನು ಸೇರಲಿಲ್ಲ. ಐವತ್ತು ಜನರು ಮಾತ್ರ ಮರಾಟರ ಸೆರೆಯಾಳುಗಳಾದರು. ಮರಾಟರಿಗೆ ಈ ಕಾಳಗದಲ್ಲಿ ಎಷ್ಟೋ ಬಂದೂಕುಗಳೂ ಖಡ್ಗಗಳೂ ಸಿಕ್ಕವು. ಫಿರಂಗೀಸೈನಿಕರಲ್ಲಿ ಇನ್ನೂರಾಐವತ್ತರವರೆಗೆಜನರು ಮಡಿದರೂ ಮರಾಟರ ಸೈನ್ಯದಲ್ಲಿ ಇಪ್ಪತ್ತೇ ಜನರು ಪ್ರಾಣಕ್ಕೆ ಎರವಾಗಿದ್ದರು. ಈ ಅದ್ವಿತೀಯ ವಿಜಯದಿಂದ ಮರಾಟರು ಉಬ್ಬಿದರು. ಯಶವಂತರಾಯನಿಗಂತೂ ತನ್ನ ಹಂಚಿಕೆಯು ಯಶಸ್ವೀಯಾದದ್ದಕ್ಕೆ ಉತ್ಸಾಹಗೊಂಡನು. ಬಳಿಕ ಆ ಮರಾಟಸರದಾರರಿಬ್ಬರೂ ವಿಜಯವಾದ್ಯ ಸುನಾದದೊಡನೆ ಸೆರೆಯಾಳುಗಳನ್ನು ತಕ್ಕೊಂಡು ತಮ್ಮ ತಮ್ಮ ಸೈನ್ಯಸಹಿತವಾಗಿ ಪಾಳಯಕ್ಕೆ ಹಿಂತಿರುಗಿದರು. ಯಶವಂತರಾವ ಹಾಗು ಮಲ್ಹಾರರಾವ ಇವರಿಬ್ಬರೂ ಈ ದಿನದ ಯುದ್ಧದಲ್ಲಿ ಜಯಶಾಲಿಗಳಾದರೆಂಬ ವಾರ್ತೆಯು ದೂತಮುಖಾಂತರವಾಗಿ ಚಿಮಣಾಜಿ ಅಪ್ಪಾನಿಗೆ ಹತ್ತಿದ್ದರಿಂದ ಆತನು ಈ ಉಭಯವೀರರನ್ನು ತನ್ನ ಬಿಡಾರಕ್ಕೆ ಕರೆಯಿಸಿ ಬೆಲೆಯುಳ್ಳ ವಸ್ತ್ರಾಭರಣಗಳನ್ನು ಅವರಿಗೆ ಉಡುಗರೆಯಾಗಿ ಕೊಟ್ಟು ಅವರನ್ನು ಗೌರವಿಸಿದನು. ಆ ಮರಾಟವೀರರು ಅಪ್ಪಾನಿಂದ ಸನ್ಮಾನಹೊಂದಿ ಅತ್ಯಂತ ಉತ್ಸಾಹವನ್ನು ತಾಳಿದರು. ಆ ದಿನದ ಯುದ್ಧದಲ್ಲಿ ತಮ್ಮ ಪಾಲಿಗೆ ಜಯದೊರೆದದ್ದರಿಂದ ಚಿಮಣಾಜಿಯು ಅಂದು ಅತ್ಯಂತ ಉತ್ಸಾಹವನ್ನು ತಾಳಿ ನಿಜವಾದ ಯುದ್ಧಕ್ಕೆ ಈ ದಿನವೇ ಪ್ರಾರಂಭವಾಯಿತೆಂದು ತನ್ನ ಸರದಾರರೊಡನೆ ಮುಂದಿನ ಆಲೋಚನೆಯನ್ನು ನಡಿಸಿದನು.



# ೧೬ ಗಾಳೀಪಟ.

ಆ ದಿನ ಮರಾಟರ ಪಾಳಯದಲ್ಲಿ ಎಷ್ಟು ಉತ್ಸಾಹವೋ ಅಷ್ಟೇ ನಿರುತ್ಸಾಹವು ವಸಯೀಕಿಲ್ಲೆಯಲ್ಲಿ ಸುಳಿದಾಡಿತು. ಕಿಲ್ಲೇದಾರನಾದ ಮೇನೇಸೀಝನು ಈ ಭಯಂಕರ ವಾರ್ತೆಯನ್ನು ಶ್ರವಣಮಾಡಿ ಅತ್ಯಂತ ರೊಚ್ಚಿಗೆದ್ದನು ಪೆರೆರಾ ಸರದಾರನಿಗೂ ಆತನಿಗೂ ಅತ್ಯಂತ ಮನಸ್ತಾಪವಾಯಿತು. ನನ್ನ ಸಮ್ಮತಿಯಿಲ್ಲದೆ ಅಥವಾ ನನ್ನನ್ನು ಕೇಳದೆ ಅನನುಭವಿಕನಾದ ಆಂಟೋಲಬ್ರಾಗಾಂಝನ ಕೈಯಲ್ಲಿ ಮುನ್ನೂರು ಜನ ಸೈನ್ಯವನ್ನು ಕೊಟ್ಟು ಹೇಗೆ ಯುದ್ಧಕ್ಕೆ ಕಳಿಸಿದೆಯೆಂದು ಮೇನೇಸೀಝನು ಪೆರೆರಾನಿಗೆ ಪ್ರಶ್ನ ಮಾಡಿದನು. ಪೆರೆರಾಸರದಾರನೂ ಸಿಟ್ಟಿಗೆದ್ದದ್ದರಿಂದ ಉಭಯತರಿಗೂ ದ್ವಂದ್ವಯುದ್ಧವೇ ಪ್ರಾರಂಭವಾಯಿತು. ಹೀಗೆ ಕಿಲ್ಲೆಯಲ್ಲಿಯ ಅಧಿಕಾರಿಗಳಿಬ್ಬರಲ್ಲಿ ಪರಸ್ಪರ ಕಲಹವುಂಟಾದ್ದರಿಂದ ಉಳಿದ ಸೈನಿಕರು ಹೌಹಾರಿ ಕುಳಿತರು. ಆಗ ಡೇಮೆಲ್ಲೊ ಮೊದಲಾಧ ಫಿರಂಗೀ ಸರದಾರರು ಬಂದು ಉಭಯತರಿಗೂ ಸಮಾಧಾನ ಹೇಳಿ ಮುಂದಿನ ಅನರ್ಥವನ್ನು ತಪ್ಪಿಸಿದರು.

ಚಿಮಣಾಜಿಅಪ್ಪಾಜಿಯ ಕರಾಮತಿಯು ಚನ್ನಾಗಿ ಸಾಧಿಸಿತು. ಆತನು ತರ್ಕಿಸಿದಂತೆ ವಸಯಿಕಿಲ್ಲೆಯಲ್ಲಿ ಎಲ್ಲರಿಗೂ ಭಯವುಂಟಾಯಿತು. ಹಿಂದೀ ಸಿಪಾಯಿಗಳಂತೂ ಕೇವಲ ಉದಾಸೀನರಾಗಿ ಕುಳಿತರು. ಮರಾಟರು ಮಹಾಬಲಿಷ್ಠರಿದ್ದು, ಒಂದೆರಡು ದಿನಗಳಲ್ಲಿಯೇ ಫಿರಂಗಿಗಳನ್ನು ಕೋಟೆಯಿಂದ ಹೊರದೂಡುವರೆಂದು ಸಿಪಾಯಿಗಳು ತಮ್ಮತಮ್ಮೊಳಗೆ ಮಾತನಾಡಲುಪಕ್ರಮಿಸಿದರು. ಯಾರಿಗೂ ಯುದ್ಧಮಾಡುವ ಹುರುಪು ಹುಟ್ಟದಾಯಿತು. ಹಿಂದೀಸಿಪಾಯಿಗಳ ಈ ಸ್ಥಿತಿಯನ್ನು ಕಂಡು ಫಿರಂಗೀಸಿಪಾಯಿಗಳು ಕೈಕಾಲುಬಿಟ್ಟರು. ಮರಾಟರು ನಮ್ಮನ್ನು ಹರಿಗಡಿಯದೆ ಬಿಡಲಾರರೆಂಬ ದುಷ್ಟಕಲ್ಪನೆಗಳು ಅವರಲ್ಲಿ ಬರಲಾರಂಭಿಸಿದವು. ಕೋಟೆಯಲ್ಲಿ ಆಹಾರ ಸಾಮಗ್ರಿಯು ತೀರುತ್ತ ಬಂದದ್ದರಿಂದ ಎಲ್ಲರಿಗೂ ಅರೆಗೊಳು ಕೊಡಲಾರಂಭಿಸಿದ್ದರು, ಹೊಟ್ಟೆಗೆ ಪೂರಾ ಅಶನವಿಲ್ಲ. ಮೇಲಾಗಿ ಯುದ್ಧದಲ್ಲಿ ಬದುಕುವ ಆಶೆಯಿಲ್ಲ. ಹೀಗೆ ಜೀವಿತದ ಮೇಲೆಯೇ ಕಠಿಣಪ್ರಸಂಗ ಬಂದದ್ದರಿಂದ ಅಲ್ಲಿಯ ಜನರು ಹೌಹಾರಿ ಕುಳಿತದ್ದರಲ್ಲಿ ಆಶ್ಚರ್ಯವಿಲ್ಲ. ಕೋಟೆ

ಯೊಳಗಿನ ತಮ್ಮ ಜನರ ಈ ಪರಿಸ್ಥಿತಿಯನ್ನು ತಿಳಿದು ಮೋನೇಸೀಝನು ಅತ್ಯಂತ ಚಿಂತಾಕ್ರಾಂತನಾದನು. ಈ ಯುದ್ಧದಲ್ಲಿ ತಮ್ಮ ಪಾಲಿಗೆ ಅಪ ಯಶಸ್ಸು ಕಟ್ಟಿಟ್ಟದ್ದೇ ನಿಜವೆಂದು ಅವನಿಗೆ ಅನಿಸಲಾರಂಭಿಸಿತು. ಭಾವೀ ಸ್ಥಿತಿಯಂತೂ ಅವನ ಕಣ್ಣಮುಂದೆ ಕಟ್ಟಿದ ಹಾಗಾಯಿತು. ತಮ್ಮೊಳಗೆ ಅನಾಯಕತ್ವವಾದ್ದರಿಂದ ಜಯದ ಆಶೆಯನ್ನು ಯಾವ ಧೈರ್ಯದಿಂದ ಮಾಡಬೇಕು? ಎಂದು ಅವನು ಬಹು ವಿಧವಾಗಿ ಯೋಚಿಸಿದನು.

ಈ ಪರಿಸ್ಥಿತಿಯಲ್ಲಿ ಕಿಲ್ಲೆಯೊಳಗೆ ಹೆಂಗಸರನ್ನೂ ಹುಡುಗರನ್ನೂ ಇಟ್ಟುಕೊಳ್ಳುವದು ಅವನಿಗೆ ಪ್ರಶಸ್ತವೆನಿಸದಾಯಿತು. ಆ ಕೂಡಲೆ ಅವನು ಧರ್ಮಾಧ್ಯಕ್ಷನ ಬಳಿಗೆ ಹೋಗಿ ತನ್ನ ಮನಸ್ಸಿನಲ್ಲಿ ಬಂದ ವಿಚಾರ ಗಳನ್ನು ತಿಳಿಸಿದನು. ಹಾಗು ಆ ಧರ್ಮಾಧ್ಯಕ್ಷನಿಗೂ ಗೋವೆಗೆ ಹೋಗಲು ಸೂಚಿಸಿದನು ಧರ್ಮಾಧ್ಯಕ್ಷನಿಗೆ ಇಷ್ಟೇ ಬೇಕಾಗಿತ್ತು. ಅವನು ಯಾವಾಗೆ ಇಲ್ಲಿಂದ ಪಾರಾದೇನೋ ಎಂದು ಒಂದೇ ಸವನೆ ಆತುರಪಡುತ್ತಿದ್ದನು. ಹೀಗಿರುವಾಗ ಕಿಲ್ಲೇದಾರನು ಹೀಗೆ ಮಾತಾಡಿದ್ದು ಒಳ್ಳೇ ಪಥ್ಯಕರವಾಗಿ ಪರಿಣಮಿಸಿತು. ಆದರೆ ಒಮ್ಮೆಲೆ ತನ್ನ ಮನಸ್ಸಿನಲ್ಲಿದ್ದದ್ದನ್ನು ಬೈಲಿಗಿಡಬಾರ ದೆಂದು ಆ ಧರ್ಮಾಧ್ಯಕ್ಷನು—ನಾನು ಗೋವೆಗೆ ಹೋಗುವ ಕಾರಣವಿಲ್ಲ. ಹುಡುಗರನ್ನೂ ಹೆಂಗಸರನ್ನೂ ಅವಶ್ಯವಾಗಿ ಕಳಿಸಬಹುದು. ನಾನು ನಿಮಗೆ ಯುದ್ಧದಲ್ಲಿ ಜಯಸಿಗುವಂತೆ ಆಶೀರ್ವಾದವನ್ನು ಮಾಡುತ್ತ ಇಲ್ಲಿಯೇ ಇರುವೆನು ಎಂದು ನುಡಿದನು. ಧರ್ಮಾಧ್ಯಕ್ಷನ ಈ ಮಾತು ಕೇಳಿ ಕಿಲ್ಲೇದಾರನು ಮನಸ್ಸಿನಲ್ಲಿ ನಕ್ಕು --ನಿಮ್ಮ ಆಶೀರ್ವಾದದ ಅವಶ್ಯ ಕತೆಯಿಲ್ಲ. ತಾನಾಗಿಯೇ ಏನು ಆಗುವದೋ ಆಗಲಿ; ನೀವು ಇಲ್ಲಿ ಇದ್ದು ಮಾಡುವದಾದರೂ ಏನು? ಶಸ್ತ್ರಹಿಡಿದು ಯುದ್ಧಮಾಡುವ ಹಾಗಿಲ್ಲ. ರಣಾಂಗಣವನ್ನು ಕಣ್ಣೆತ್ತಿ ನೋಡಲು ನಿಮಗೆ ಧೈರ್ಯವಿಲ್ಲ. ಸ್ತ್ರೀಯರಿ ಗಿಂತಲೂ ನಿಮ್ಮ ಅವಸ್ಥೆಯು ಶೋಚನೀಯವಾಗಿರುವದು. ಇಂಥ ನೀವು ಇಲ್ಲಿರುವದು ಹಿತಕರವಲ್ಲೆಂದು ನನಗಂತೂ ತೋರುತ್ತದೆ. ನಿಮಗೆ ಆಜ್ಞೆ ಮಾಡುವ ಅಧಿಕಾರವು ನನಗಿಲ್ಲ. ನಿಮ್ಮ ಮನಸ್ಸಿಗೆ ಬಂದರೆ ಹೋಗ ಬಹುದು. ಬರವಿದ್ದರೆ ಬಿಡಬಹುದು.

ಮೋನೇಸೀಝನ ಈ ಮಾತು ಕೇಳಿ ಧರ್ಮಾಧ್ಯಕ್ಷನು ಗೊಂದಲ ದಲ್ಲಿ ಬಿದ್ದನು. ಆಗ ಅವನು—ನಿಮ್ಮೆಲ್ಲರ ಮನಸ್ಸಿಗೆ ಬಂದರೆ ನಾನು

ಹೋಗುವೆನು. ಇಲ್ಲಿಯೇ ಇರಬೇಕೆಂದು ನನ್ನ ಆಗ್ರಹವಿಲ್ಲ, ಎಂದು ಅಂದನು. ಧರ್ಮಾಧ್ಯಕ್ಷನ ಯೋಗ್ಯತೆಯು ಎಷ್ಟಿರುವದೆಂಬದನ್ನು ಬಲ್ಲ ಕಿಲ್ಲೇದಾರನು ಹೆಚ್ಚಿಗೆ ಮಾತನಾಡದೆ ಈ ಸಂಗತಿಯನ್ನು ಪೆರೆರಾ ಮೊದಲಾದ ಅಧಿಕಾರಿಗಳಿಗೂ ತಿಳಿಸಿದನು. ಪರಿಸ್ಥಿತಿಯ ಕಡೆಗೆ ಲಕ್ಷಗೊಟ್ಟು ಎಲ್ಲ ಫಿರಂಗೀ ಅಧಿಕಾರಿಗಳು ಸ್ತ್ರೀಯರನ್ನೂ, ಹುಡುಗರನ್ನೂ, ಅಶಕ್ತರನ್ನೂ ಗೋವೆಗೆ ಕಳಿಸಲು ಒಪ್ಪಿಕೊಂಡರು. ನಾಳೆಗೆ ರಾತ್ರಿಯಲ್ಲಿ ಪತ್ತೇಮಾರಿಗಳನ್ನು ಸಿದ್ಧಪಡಿಸಿ ಶತ್ರುಗಳಿಗೆ ಸುದ್ದಿ ಹತ್ತದ ಹಾಗೆ ಕಳಿಸಬೇಕೆಂದು ಗೊತ್ತಾಯಿತು.

ಹೀಗೆ ಕಿಲ್ಲೆಯಲ್ಲಿ ಅಧಿಕಾರಿಗಳಲ್ಲಿಯೂ, ಸಿಪಾಯಿಗಳಲ್ಲಿಯೂ ಬಗೆಬಗೆಯ ವಿಚಾರಗಳು ನಡೆದಿರಲು, ಆದಿನ ಸಂಜೆಯ ಮುಂದೆ ಎಳೇಪ್ರಾಯದ ಒಬ್ಬ ತರುಣನು ಕಿಲ್ಲೆಯ ಉತ್ತರಭಾಗದ ಗೋಡೆಯ ಮೇಲೆ ನಿಂತುಕೊಂಡು ಗಾಳೀಪಟವನ್ನು ಹಾರಿಸುವ ಉದ್ಯೋಗ ನಡಿಸಿದ್ದನು. ಆತನ ಸುತ್ತುಮುತ್ತು ಫಿರಂಗೀ ಅಧಿಕಾರಿಗಳ ಸಣ್ಣ ಸಣ್ಣ ಹುಡುಗರು ಪಟವು ಯಾವಾಗ ಮೇಲಕ್ಕೇರುವದೋ ಎಂದು ಉತ್ಸುಕತೆಯಿಂದ ನೋಡುತ್ತ ನಿಂತುಕೊಂಡಿದ್ದವು. ಆ ಹುಡುಗರು ಬೇಗನೇ ಪಟವನ್ನು ಹಾರಿಸುವದಕ್ಕೆ ಆ ತರುಣನಿಗೆ ದುಂಬಾಲ ಬೀಳುತ್ತಿದ್ದವು. ಆ ತರುಣನು ಪಟಕ್ಕೆ ಹುರಿ ಕಟ್ಟುವದರಲ್ಲಿಯೂ ಅದನ್ನು ಸರಿಪಡಿಸುವದಲ್ಲಿಯೂ ಮಗ್ನನಾಗಿದ್ದನು. ಮುಂದೆ ಕೆಲಹೊತ್ತಿನ ಮೇಲೆ ಪಟವು ಸರಿಯಾಯಿತು. ಆಗ ಸಂಜೆಯ ೫ಗಂಟೆಯ ಸಮಯವಾದ್ದರಿಂದ ಗಾಳಿಯೂ ಅನುಕೂಲವಾಗಿತ್ತು. ಆ ಸಂಧ್ಯಾಕಾಲದ ಉಲ್ಲಾಸ ಸಮಯದಲ್ಲಿ ಆ ಕಿಲ್ಲೆಯೊಳಗಿನ ಫಿರಂಗೀಬಾಲಕರು ಪಟವು ಆಕಾಶದಲ್ಲಿ ಉಡ್ಡಾಣ ಮಾಡುವದನ್ನು ನೋಡುವದಕ್ಕೆ ಅತ್ಯಂತ ಉತ್ಸುಕರಾಗಿದ್ದರು. ಕಿಲ್ಲೆಯೊಳಗಿನ ಯೋದ್ಧಾಜನರುಚಿಂತಾಕ್ರಾಂತರಾಗಿದ್ದದ್ದರ ಗೊಡವೆಯು ಆ ಪರಿಶುದ್ಧ ಮನಸ್ಸಿನ ಬಾಲಕರಿಗೇನು? ಅವರ ಉಲ್ಲಾಸವೃತ್ತಿಗೆ ಸ್ವಲ್ಪವೂ ಕುಂದುವುಂಟಾಗಿದ್ದಿಲ್ಲ. ಇರಲಿ.

ಪಟವನ್ನು ಹಾರಿಸುವ ತರುಣನು ಎಲ್ಲ ಹುಡುಗರಿಗೂ ಲಕ್ಷಗೊಟ್ಟು ನೋಡಿರಿ ಎಂದು ಒಮ್ಮೆ ಸೂಚನೆ ಕೊಟ್ಟು ಪಟವನ್ನು ಆಕಾಶದಲ್ಲಿ ಹಾರಿಸಿದನು. ಆದರೆ ಆಸಾರೆ ಆ ಪಟವು ಗಗನಮಂಡಲವನ್ನು ಭೇದಿಸದೆ

ಪುನಃ ಭೂಮಿಯ ಮೇಲೆ ಒರಗಿಕೊಂಡಿತು. ಹೀಗೆ ಒಂದೆರಡು ಸಾರೆ ಆಗಲು, ಆ ಹುಡುಗರು ನಿರುತ್ಸಾಹಿಗಳಾದವು. ಮೂರನೆಯಸಾರೆ ಪಟವು ಆಕಾಶಕ್ಕೆ ಉಡ್ಡಾಣಮಾಡಿ ಬಹು ದೂರದವರೆಗೆ ಏರಿತು. ಮತ್ತು ಗಗನಾಂಗಣದಲ್ಲಿ ಅತ್ತಿತ್ತ ನಲಿದಾಡುತ್ತ, ತನ್ನ ಆಕಾಶವಿಹಾರದಿಂದ ಆ ಹುಡುಗರನ್ನು ಮೋದಪಡಿಸಲಾರಂಭಿಸಿತು. ಹುಡುಗರು ಆ ಗಾಳೀಪಟದ ಲೀಲೆಯನ್ನು ನೋಡುತ್ತ ಚಪ್ಪಾಳೆ ಬಾರಿಸಿ ಕುಣಿದಾಡಲಾರಂಭಿಸಿದರು. ಪಟ ಹಾರಿಸುವದರಲ್ಲಿ ಆ ತರುಣನ ಕೌಶಲ್ಯವು ವಿಶೇಷವಾಗಿದ್ದದರಿಂದ ಪಟವು ಒಂದು ಸುಂದರವಾದ ಪಕ್ಷಿಯಂತೆ ಆಕಾಶದಲ್ಲಿ ನರ್ತನ ಮಾಡ ತೊಡಗಿತು.

ಕಿಲ್ಲೆಯ ಮೇಲೆ ಹೀಗೆ ಆ ತರುಣನು ಗಾಳೀಪಟವನ್ನು ಹಾರಿಸಿ ಫಿರಂಗೀಬಾಲಕರನ್ನು ಆನಂದಗೊಳಿಸುತ್ತಿರಲು, ಇತ್ತ ಮರಾಟರ ಪಾಳೆಯದಲ್ಲಿ ಚಿಮಣಾಜಿಅಪ್ಪಾನ ಲಕ್ಷವು ಸಹಜವಾಗಿ ಆ ಕಿಲ್ಲೆಯ ಕಡೆಗೆ ಹೋಯಿತು. ಪಟವು ಬಹು ಎತ್ತರವಾಗಿ ಹಾರಿದ್ದರಿಂದ ಅದು ಅಪ್ಪಾನಿಗೆ ಸ್ಪಷ್ಟವಾಗಿ ತೋರುತ್ತಿತ್ತು. ಮೊದಮೊದಲು ಅಪ್ಪಾನಿಗೆ ಅದು ಪಟವೆಂಬದು ಧ್ಯಾನಕ್ಕೆ ಬರಲಿಲ್ಲ. ಸ್ವಲ್ಪ ಲಕ್ಷಗೊಟ್ಟು ನೋಡಲು ಪಟವೆಂಬದು ಕಂಡುಬಂದಿತು. ಕಿಲ್ಲೆಯೊಳಗಿನ ಜನರು ಜೀವದ ಮೇಲಿನ ಸಂಕಟದಿಂದ ಚಿಂತಾಕ್ರಾಂತರಾಗಿರಲು, ಇಂಥ ಸಂಕಟ ಸಮಯದಲ್ಲಿ ಇಷ್ಟು ಉತ್ಸಾಹದಿಂದ ಗಾಳೀಪಟವನ್ನು ಹಾರಿಸುವವರು ಯಾರಾಗಿರಬಹುದು? ಎಂಬ ಸಂಶಯವು ಆತನಲ್ಲುಂಟಾಯಿತು. ಆಟ-ನೋಟಗಳು, ವಿನೋದದ ಕೆಲಸಗಳು! ಇವು ಸುಖಕಾಲದಲ್ಲಿ ನಡೆಯುತಕ್ಕಂಥ ವ್ಯವಹಾರಗಳು; ದುಃಖಕಾಲದಲ್ಲಿ ಜನರು ಇವುಗಳ ಸನಿಯಕ್ಕೆ ಹೋಗಲಾರರು. ಜಗತ್ತಿನ ಅನುಭವವು ಹೀಗಿದ್ದು, ಕಿಲ್ಲೆಯೊಳಗೆ ಬೇರೆ ಪ್ರಕಾರವು ಅನುಭವಕ್ಕೆ ಬರುವದಕ್ಕೆ ಕಾರಣವೇನು? ಎಂಬ ಯೋಚನೆಯನ್ನು ಕೆಲಹೊತ್ತಿನ ವರೆಗೆ ಮಾಡಿ, ಬಹುಶಃ ಇದು ನಮ್ಮ ಗುಪ್ತ ಕಾರಸ್ಥಾನಿಗಳ ಕೆಲಸವಾಗಿರಬೇಕು ಎಂದು ಕಂಡುಹಿಡಿದನು. ಆದರೂ ಆತನಿಗೆ ಆ ಸಂಗತಿಯ ನಿರ್ಧಾರವು ಆಗಲಿಲ್ಲ. ಆಗ ಆತನು ತುಳಾಜಿಯನ್ನು ಕರೆಯಿಸಿ ಅವನಿಗೆ ಆ ಗಾಳೀಪಟವನ್ನು ತೋರಿಸಿದನು. ತುಳಾಜಿಯು ಕೆಲಹೊತ್ತು ನಿರೀಕ್ಷಿಸಿ ಒಮ್ಮೆಲೆ--ಸರಕಾರ, ಈ ಗಾಳೀಪಟವನ್ನು ಹಾರಿಸುವ ಕೌಶಲ್ಯದ ಮೇಲಿಂದ ನೋಡಿ

ದರೆ ಇದು ನಮ್ಮ ಗಣೋಬನ ಕೆಲಸವೆಂಬಂತೆ ತೋರುತ್ತದೆ. ಪಟಹಾರಿ
ಸುವದರಲ್ಲಿ ಗಣೋಬನು ಒಳ್ಳೇ ನಿಷ್ಣಾತನಿರುವನು. ಅದರ ಅನುಭವವು
ನಮಗಿರುತ್ತದೆ. ಆದರೆ ಈ ದಿನ ಅವನು ಪಟ ಹಾರಿಸುವದರಲ್ಲಿ ಏನಾ
ದರೂ ಉದ್ದೇಶವಿರಲಿಕ್ಕೆ ಬೇಕು. ಪಟದಲ್ಲಿ ಗುಪ್ತಸಂಗತಿಗಳನ್ನು ಬರೆದು
ಪಟಹಾರಿಸಿ ಕೈಬಿಟ್ಟು ಅದು ನಮ್ಮ ಜನರ ಕೈಗೆ ಸಿಗಬೇಕೆಂದು ಅವನು
ಪ್ರಯತ್ನಿಸುತ್ತಿರಬಹುದು. ಆದರೆ ಅವನ ವಿನೋದಕ್ಕೆ ಫಿರಂಗೀಜನರು ಹೇಗೆ
ಅನುಕೂಲರಾಗಿರಬಹುದು? ಈ ಗುಡ್ಡದ ಮೇಲೇರಿ ನೋಡಿ ಬರುತ್ತೇನೆ,
ಎಂದು ನುಡಿದು ತುಳಾಜಿಯು ಬಳಿಯಲ್ಲಿದ್ದ ದಿನ್ನೆಯನ್ನು ಸರ ಸರ ಏರಿ
ಹೋದನು. ಆ ಎತ್ತರ ಪ್ರದೇಶದಲ್ಲಿ ಆ ಕಿಲ್ಲೆಯ ಮೇಲಿನ ಜನರು
ಸ್ಪಷ್ಟವಾಗಿ ಕಾಣತೊಡಗಿದರು. ಕೆಲಜನ ಫಿರಂಗೀ ಬಾಲಕರೊಡನೆ
ಗಣೋಬನೇ ಪಟಹಾರಿಸುತ್ತಿರುವನೆಂಬದು ಆತನಿಗೆ ನಂಬಿಕೆಯಾಯಿತು.
ಕೂಡಲೆ ಅವನು ದಿನ್ನೆಯ ಮೇಲಿಂದ ಕೆಳಗಿಳಿದು ಬಂದು—ಸರಕಾರ! ನನ್ನ
ನಿಮ್ಮ ತರ್ಕವು ನಿಜವಿರುತ್ತದೆ. ಗಣೋಬನೇ ಗುಪ್ತಸಂಗತಿಗಳನ್ನು ತಿಳಿ
ಸುವದಕ್ಕಾಗಿ ಪಟ ಹಾರಿಸುತ್ತಿರುವನು. ಇನ್ನು ಸ್ವಲ್ಪ ಹೊತ್ತಿನಲ್ಲಿ
ಅವನು ಪಟವನ್ನು ಹಾರಿಸಿ ದಾರ ಹರಿದು ಅಥವಾ ಕೈಬಿಟ್ಟು ಪಟವು ನೆಲಕ್ಕೆ
ಬೀಳುವಂತೆ ಮಾಡಬಹುದು. ಇಗೋ ನೋಡಿರಿ. ಗಾಳಿಯ ಅನುಕೂಲತೆ
ಯಿಂದ ಪಟವು ಎಷ್ಟು ದೂರ ಹರಿ ನಮ್ಮ ಪಾಳೆಯವನ್ನು ಲಕ್ಷವಿಟ್ಟು
ನೋಡುತ್ತಿರುವದು? ನಾವು ಈಗಲೇ ಪಟ ಕೆಳಗೆ ಬೀಳಬಹುದಾದ
ಸ್ಥಳಕ್ಕೆ ಯಾರನ್ನಾದರೂ ಕಳಿಸಿದರೆ ನಮಗೆ ಗುಪ್ತಸಂಗತಿಯು ಪಟದಿಂದ
ತಿಳಿದು ಬರುವದು ಎಂದು ನುಡಿದು ಅಪ್ಪಾನ ಅಪ್ಪಣೆಯಂತೆ ನಾಲ್ಕಾರು
ಜನ ವಿಶ್ವಾಸುಕರಾದ ರಾವುತರನ್ನು ಆ ಪಟಬೀಳಬಹುದಾದ ಸ್ಥಳಕ್ಕೆ
ಹೋಗಿನಿಲ್ಲಲು ಕಳಿಸಿಕೊಟ್ಟನು. ಬಳಿಕ ತುಳಾಜಿ ಹಾಗು ಅಪ್ಪಾ ಇವ
ರಿಬ್ಬರೂ ಆ ಪಟವನ್ನೇ ನಿರೀಕ್ಷಿಸುತ್ತ ಕುಳಿತುಕೊಂಡರು.

ಕಿಲ್ಲೆಯಲ್ಲಿ ಪಟಹಾರಿಸುವ ತರುಣನು ತುಳಾಜಿಯ ತರ್ಕದಂತೆ
ಮರಾಟರ ಗುಪ್ತಹೇರನಾದ ಗಣೋಬನೇ ಆಗಿದ್ದನು. ಆತನು ಯುಕ್ತಿ
ಯಿಂದ ಫಿರಂಗೀ ಅಧಿಕಾರಿಗಳ ಒಲುಮೆಯನ್ನು ಸಂಪಾದಿಸಿ ಅವರ ಮನೆ
ತನದ ಚಾಕರನಾಗಿದ್ದನು. ಗಣೋಬನ ಸ್ವಭಾವವು ಒಳ್ಳೇ ವಿನೋದ
ಪ್ರಿಯವಿದ್ದದರಿಂದ ಆತನು ಬಗೆಬಗೆಯ ಆಟಗಳಿಂದ ಫಿರಂಗೀ ಬಾಲಕರ

ಮನಸ್ಸನ್ನು ರಮಿಸುತ್ತಿದ್ದನು. ಆದ್ದರಿಂದ ಎಲ್ಲ ಫಿರಂಗೀ ಬಾಲಕರೂ ಗಣೋಬನನ್ನು ಆಶ್ರಯಿಸಿದ್ದರು. ಅವನು ಈ ದಿನ ಆ ಬಾಲಕರ ಸಂ-ತೋಷಾರ್ಥವಾಗಿಯೇ ಎಂದು ಫಿರಂಗೀ ಸ್ತ್ರೀಯರ ಸಮ್ಮತಿಯಿಂದ ಈ ದಿನ ಗಾಳೀಪಟಹಾರಿಸುವದಕ್ಕೆ ಕಿಲ್ಲೆಯ ಮೇಲೆ ಬಂದಿದ್ದನು. ತನಗೆ ತಿಳಿದ ಗುಪ್ತಸಂಗತಿಗಳನ್ನು ಪಟದ ಮುಖಾಂತರವಾಗಿ ತನ್ನ ಯಜಮಾನನಿಗೆ ತಿಳಿಸಬೇಕೆಂಬ ಕುತೂಹಲವು ಹೆಚ್ಚಾದ್ದರಿಂದ ಅವನು ಈ ಗಾಳೀಪಟದ ಯುಕ್ತಿಯನ್ನು ಬುದ್ಧಿಪೂರ್ವಕವಾಗಿಯೇ ಹುಡುಕಿದ್ದನು.

ಹೀಗೆ ಬೇರೊಂದು ಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡು ಗಾಳೀಪಟವನ್ನು ಹಾರಿಸಬಂದ ಗಣೋಬನು ಹೊತ್ತು ಮುಳುಗುವವರೆಗೆ ಪಟವನ್ನು ಆಡಿಸಿದನು. ಫಿರಂಗೀ ಬಾಲಕರು ಮನಸದಣೀ ತೃಪ್ತರಾದರು. ಮಬ್ಬುಗತ್ತಲಾಗುತ್ತ ಬಂದಿತು. ಆಗ ಗಣೋಬನು ಪಟವನ್ನು ಒಳ್ಳೇ ಮೇಲಕ್ಕೇರಿಸಿ ಕೈಯೊಳಗಿನ ಹುರಿಯಲ್ಲ ತೀರಿದ ಬಳಿಕ ಒಮ್ಮೆಲೆ ಕೈಯೊಳಗಿನ ಹುರಿಯನ್ನು ಬಿಟ್ಟುಬಿಟ್ಟನು. ಪಟವು ಸ್ವಾಮಿಕಾರ್ಯಸಾಧನಕ್ಕಾಗಿ ಆಕಾಶದಲ್ಲಿ ಉಡ್ಡಾಣ ಮಾಡುತ್ತ ಬಹುದೂರ ಹೋಗಿ ಕೆಳಗಿಳಿಯುತ್ತ ಎತ್ತರವಾದ ಒಂದು ವೃಕ್ಷವನ್ನು ಆಶ್ರಯಿಸಿತು. ಇತ್ತ ಕೈಯೊಳಗಿನ ಪಟವು ಒಮ್ಮೆಲೆ ಕೊಸರಿಕೊಂಡು ಹೋಯಿತೆಂದು ಗಣೋಬನು ಚಡಪಡಿಸ ಹತ್ತಿದನು. ಆ ಫಿರಂಗೀ ಬಾಲಕರೂ ನಿರುತ್ಸಾಹಿಗಳಾದರು

ಗಣೋಬನಿಂದ ಬಿಡಲ್ಪಟ್ಟ ಗಾಳೀಪಟವು ಧರಿತ್ರಿಯನ್ನು ಆಶ್ರಯಿಸುವಾಗ ನಡುವೇ ವೃಕ್ಷವು ಅದನ್ನು ಅಡ್ಡಗಟ್ಟಲು ತುಳಜಾಜಿಯ ಸೇವಕರು ಕುದುರೆಗಳನ್ನೋಡಿಸುತ್ತ ಅಲ್ಲಿಗೆ ಹೋದರು. ವೃಕ್ಷವು ಎತ್ತರವಾಗಿದ್ದು ಅದರ ಕೊಂಬೆಯ ಮೇಲೆ ಪಟವು ಸಿಕ್ಕಿಕೊಂಡದ್ದರಿಂದ ವೃಕ್ಷವನ್ನೇರದೆ ಪಟವು ಸಿಕ್ಕುವಹಾಗಿರಲಿಲ್ಲ. ಆಗ ಒಬ್ಬ ಸೇವಕನು ವೃಕ್ಷವನ್ನೇರಿ ಉದ್ದವಾದ ಭಾಲೆಗಣೆಯಿಂದ ಅದನ್ನು ನೆಲಕ್ಕೆ ಕೆಡವಿದನು. ಬಳಿಕ ಅದನ್ನು ಇದ್ದಕ್ಕಿದ್ದ ಹಾಗೆ ತಕ್ಕೊಂಡು ಎಲ್ಲ ಸೇವಕರೂ ಪಾಳಯಕ್ಕೆ ಬಂದು ತು-ಳಜಾಜಿಯ ಕೈಯಲ್ಲಿ ಕೊಟ್ಟರು. ತುಳಜಾಜಿಯು ಆ ಮಹತ್ವದ ಗಾಳೀಪಟವನ್ನು ತಕ್ಕೊಂಡು ಅಪ್ಪಾಜಿಯ ಬಳಿಗೆ ಹೋದನು. ಬಳಿಕ ಆತನು ಏಕಾಂತಸ್ಥಳದಲ್ಲಿ ಅಪ್ಪಾಜಿಯೊಡನೆ ದೀಪದ ಬೆಳಕಿನಲ್ಲಿ ಸೂಕ್ಷ್ಮರೀತಿಯಿಂದ ಆ ಪಟವನ್ನು ಪರೀಕ್ಷಿಸತೊಡಗಿದನು. ಅದನ್ನು ಎತ್ತ ತಿರುವಿ

ನೋಡಿದರೂ ಅದರಲ್ಲಿ ಅಕ್ಷರಗಳೇನೂ ಕಾಣದ್ದರಿಂದ ತುಳಾಜಿಯು ನಿರುತ್ಸಾಹಿಯಾದನು. ಅಷ್ಟರಲ್ಲಿ ಚಿಮಣಾಜಿ ಅಪ್ಪಾಜಿಯ ಲಕ್ಷದಲ್ಲಿ ಪಟಕ್ಕೆ ಒಳಗೆ ಪಡಿಪದರು ಇರುವದೆಂಬದು ಬಂದಿತು. ಆದ್ದರಿಂದ ಆತನು ಪಟವನ್ನು ಸೂಕ್ಷ್ಮರೀತಿಯಿಂದ ಕತ್ತರಿಸುವಂತೆ ತುಳಾಜಿಗೆ ಹೇಳಿದನು. ತುಳಾಜಿಯು ಬಹುದಕ್ಷತೆಯಿಂದ ಪಟವನ್ನು ಕತ್ತರಿಸಲು ಪಟವು ಎರಡು ಪಕಳಿಯಾಯಿತು. ಆ ಪಕಳಿಯ ಮಧ್ಯದಲ್ಲಿ ಒಂದು ಮಡಿಚಿದ ಕಾಗದವಿತ್ತು. ಅದನ್ನು ತುಳಾಜಿಯು ಕೈಯಲ್ಲಿ ತಕ್ಕೊಂಡು ಓದಲಾರಂಭಿಸಿದನು. ಓದಿ ಓದಿದಂತೆ ಅವನಿಗೆ ಆನಂದವೆನಿಸಿತು. ಆಗ ಅಪ್ಪಾಜಿಯು ಪತ್ರವನ್ನು ನನಗೆ ಕೇಳುವಂತೆ ಮೆಲ್ಲಗೇ ಓದು ಎಂದು ನುಡಿಯಲು ತುಳಾಜಿಯು ಮೊದಲಿನಿಂದ ಪತ್ರ ಓದುವದಕ್ಕಾರಂಭ ಮಾಡಿದನು. ಆ ಪತ್ರದಲ್ಲಿ ಬರೆದಿದ್ದ ಸಂಗತಿಯೇನಂದರೆ—

"ಫಿರಂಗಿಗಳಲ್ಲಿ ಅಂಜಿಕೆಯುತ್ಪನ್ನವಾಗಿರುವದು. ನಾಳೆ ರಾತ್ರಿಯಲ್ಲಿ ಕಿಲ್ಲೆಯೊಳಗಿನ ಹೆಂಗಸರನ್ನೂ-ಹುಡುಗರನ್ನೂ ಗೋವೆಗೆ ಕಳುಹಿಸುವದು ನಿರ್ಧಾರವಾಗಿರುವದು. ಒಂದೂಸಿಪಾಯಿಗಳು ಕೈಕಾಲುಗೆಟ್ಟು ಕುಳಿತಿರುವರು. ಅನ್ನದ ಸಾಮುಗ್ರಿಯು ತೀರುತ್ತ ಅರೆಗೂಳಿಗೆ ಪ್ರಾರಂಭವಾಗಿದೆ. ನಾಲ್ಕಾರು ದಿನಗಳಿಗೆ ಈ ಅರೆಗೂಳು ಸಹ ಬಂದಾಗುವದೆಂದು ವದಂತಿಯಿದೆ. ರಘುನಾಥನು ಸಮುದ್ರದಲ್ಲಿರುವನು; ಸದಾಶಿವನು ಮದ್ದಿನ ಉಗ್ರಾಣದಲ್ಲಿರುವನು; ಬಾಳಾಜಿಯು ಎಲ್ಲೆಡೆಗಳಲ್ಲಿ ಅಲೆದಾಡುವನು; ಗಣು ಸಣ್ಣ ಹುಡುಗರೊಡನೆ ಆಡುತ್ತಿರುವನು; ಸೂರ್ಯಾಜಿಯ ಮರಿಗಳು ನೆಟ್ಟಗಿರುವವು."

ಈಮೇರೆಗಿರುವ ಪತ್ರವನ್ನು ತಿಳಿದು, ಚಿಮಣಾಜಿಯು ಬಹಳವಾಗಿ ಸಂತೋಷವನ್ನು ಹೊಂದಿದನು. ಗಣೋಬನು ಗುಪ್ತಹೇರರ ಕೆಲಸವನ್ನು ಮಾಡಲಿಕ್ಕೆ ಯೋಗ್ಯನಿರುವನೆಂದು ತಿಳಿದು ಆನಂದೋದ್ಗಾರಗಳನ್ನು ತೆಗೆದನು. ಆ ಗಾಳೀಪಟದಿಂದ ಆ ದಿನ ಚಿಮಣಾಜಿಯಲ್ಲಿಯೂ, ತುಳಾಜಿಯಲ್ಲಿಯೂ ಒಳ್ಳೇ ಹುರುಪು ಬಂದಿತು. ಶತ್ರುಬಲವು ಕುಗ್ಗುತ್ತ ನಡೆದದ್ದರಿಂದ ನಾವು ನಿಶ್ಚಯವಾಗಿಯೂ ಯಶಸ್ವೀಗಳಾಗುವೆವೆಂದು ನಿಶ್ಚಯಿಸಿದರು. ಆಗ ತುಳಾಜಿಯು ಗೋವೆಗೆ ಹೋಗುವ ಜನರನ್ನು ಸೆರೆಹಿಡಿಯುವದಕ್ಕೆ ಪ್ರಯತ್ನಪಡಬೇಕೆಂದು ಸೂಚಿಸಿದನು. ಆದರೆ ಆ ಸೂಚ

ನೆಯು ಅಪ್ಪಾಜಿಯ ಮನಸ್ಸಿಗೆ ಬರಲಿಲ್ಲ. ಆ ಪಾಪಭೀರುವು ಹೆಂಗಸ ರನ್ನೂ ಹುಡುಗರನ್ನೂ ಸೆರೆಹಿಡಿಯುವದು ಪಾಪಕರವು. ಆದ್ದರಿಂದ ಅಂಥ ಪಾಪೀ ಕೆಲಸವು ನಮಗೆ ಬೇಡ, ಎಂದು ನುಡಿದನು. ಶ್ರೀಮಂತರ ದರ್ಪ ವನ್ನು ತಿಳಿದು ತುಳಾಜಿಯು ಸುಮ್ಮನಾದನು.

## ೧೭ ವಿಧರ್ಮಿಗಳು ಬುದ್ಧಿಗಲಿಯಬೇಕು.

ಒಳ್ಳೇ ನಸಕು; ಒಬ್ಬರ ಮೋರೆ ಮತ್ತೊಬ್ಬರಿಗೆ ಸ್ಪಷ್ಟವಾಗಿ ಕಾಣಿಸುತ್ತಿರಲಿಲ್ಲ. ಮರಾಟರ ಪಾಳಯದಲ್ಲಿ ಎಲ್ಲ ಸೈನಿಕರೂ ಎದ್ದು, ತಮ್ಮ ತಮ್ಮ ಕುದುರೆಗಳ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದರು. ಕಾಲಾಳುಗಳು ಬೆಳಗಿನ ನ್ಯಾರಿಯನ್ನು ಮಾಡಲಾರಂಭಿಸಿದ್ದರು. ಈ ಸಮ ಯದಲ್ಲಿ ಚಿಮಣಾಜಿಅಪ್ಪಾಜಿಯು ಸ್ನಾನ ಮಾಡಿ ನಿತ್ಯಸಿಧಿಗಳನ್ನು ತೀರಿಸಿ ಕೊಂಡು ಅಶ್ವಾರೂಢನಾಗಿ ಪಾಳಯವನ್ನು ನೋಡಹೊರಟಿದ್ದನು. ಈ ವೀರಸೇನಾಪತಿಯು ದಿನಾಲು ನೋಡಬರುವನೆಂಬ ಅಂಜಿಕೆಯಿಂದ ಯಾವ ಸೈನಿಕನೂ ಮಲಗಿರಲಿಲ್ಲ. ಅಪ್ಪಾಜಿಯು ತನ್ನ ಖಾಸ ಸೈನ್ಯವನ್ನು ನೋಡಿ ಬಳಿಕ ಮಲ್ಹಾರರಾಯನ ಸೈನ್ಯದ ಕಡೆಗೆ ತಿರುಗಿದನು. ಇದರಂತೆ ಆತನು ಎಲ್ಲ ಸರದಾರರ ಸೈನಿಕರನ್ನು ನೋಡುತ್ತ ಕಡೆಯ ಉಕ್ಕಡಕ್ಕೆ ಬಂದನು. ಅಷ್ಟರಲ್ಲಿ ಸೂರ್ಯೋದಯ ಸಮವಾಗಿತ್ತು. ಇನ್ನು ಅಪ್ಪಾ ಜಿಯು ತನ್ನ ಶಿಬಿರಕ್ಕೆ ತಿರುಗೆತಕ್ಕವನು; ಅಷ್ಟರಲ್ಲಿ ದೂರದಲ್ಲಿ ನೂರಾರು ಜನರು ತಮ್ಮ ಪಾಳಯದ ಕಡೆಗೆ ಬರುವರೆಂಬದು ಕಂಡುಬಂದಿತು. ಈ ಜನರು ಯಾರಾಗಿರಬಹುದೆಂದು ಅಪ್ಪಾಜಿಯು ಯೋಚಿಸುತ್ತ ಅಲ್ಲಿಯೇ ನಿಂತನು. ಶತ್ರುಸೈನ್ಯವಾಗಿದ್ದರೆ ಅವರ ಸಮಾಚಾರವನ್ನು ತಕ್ಕೊಂಡೇ ಶಿಬಿರವನ್ನು ಪ್ರವೇಶ ಮಾಡಬೇಕೆಂದು ಆ ವೀರನು ನಿಶ್ಚಯಿಸಿದಂತೆ ತೋ ರಿತು. ನೋಡನೋಡುವಷ್ಟರಲ್ಲಿ ಆ ಜನರು ತೀರ ಸಮೀಪಕ್ಕೆ ಬಂದರು. ಗಿಡಗಳ ಗುಂಪಿನೊಳಗಿಂದ ಆ ಜನರು ಇಂಥವರೇ ಎಂದು ಸ್ಪಷ್ಟವಾಗಿ ತೋರತೊಡಗಿತು. ಆಗ ಅಪ್ಪಾಜಿಯು—ಎಲಾ! ಇವರೇಕೆ ಇಲ್ಲಿಗೆ ಬಂದರು? ಎಂದು ಉದ್ಗಾರ ತೆಗೆದನು.

ಆಕಡೆಯ ಉಕ್ಕಡದ ಸೇನಾಧಿಪತ್ಯವು ಯಶವಂತರಾಯನ ಕಡೆಗೆ ಇದ್ದದರಿಂದ ಅವನು ಶ್ರೀಮಂತರು ಯಾಕೆ ನಿಂತಿರುವರೆಂದು ಅವರ ಬಳಿಗೆ ಧಾವಿಸಿ ಬಂದನು. ಆಗೆ ಅಪ್ಪಾಜಿಯು ಅವನಿಗೆ ಆ ಜನರ ಬಳಿಗೆ ಹೋಗಿ ಎಲ್ಲ ಸಂಗತಿ ಕೇಳಿಕೊಂಡು ಬರಲು ಆಜ್ಞಾಪಿಸಿದನು. ಅಪ್ಪಣೆಯ ಮೇರೆಗೆ ಯಶವಂತರಾಯನು ಕುದುರೆಯನ್ನೋಡಿಸುತ್ತ ಅಪ್ಪಾಜಿಯ ಶಿಬಿರದ ಕಡೆಗೆ ನಡೆದಿದ್ದ ಆ ಜನರ ಬಳಿಗೆ ಹೋಗಿ ಅವರನ್ನು ಅಲ್ಲಿಯೇ ತರುಬಿ ಅವರ ಆಗಮನದ ಕಾರಣವನ್ನು ವಿಚಾರಿಸತೊಡಗಿದನು. ಆ ಬಂದಜನರು ಒಳ್ಳೇ ಉಬ್ಬಿನಲ್ಲಿದ್ದರು. ಯಾವದೋ ಒಂದು ಉತ್ಸಾಹವು ಅವರನ್ನು ಹುರಿದುಂಬಿಸುತ್ತಿತ್ತು. ಅವರು ಚಿಮಣಾಜಿ ಅಪ್ಪಾಜಿಯುವರನ್ನು ಯಾವಾಗೆ ಕಾಣುವೆವೋ ಎಂದು ತವಕಿಸುತ್ತಿದ್ದರು. ಅವರು ದಾರಿಯಲ್ಲಿ ಸ್ವಲ್ಪವೂ ಕಾಲವಿಲಂಬ ಮಾಡಬಾರದೆಂದು ನಿಶ್ಚಯಿಸಿದಂತೆ ತೋರುತ್ತಿತ್ತು. ಯಶವಂತರಾಯನ ಪ್ರಶ್ನಗಳಿಗೆ ಅವರಲ್ಲಿ ಒಬ್ಬನೂ ಉತ್ತರ ಕೊಡಲಿಲ್ಲ. ಅವರು ಹಾಗೇ ಭರದಿಂದ ದಾರಿಯನ್ನು ಕ್ರಮಿಸಲಾರಂಭಿಸಿದರು. ಅವರ ಉತ್ಸುಕತೆಯನ್ನು ಯಶವಂತರಾಯನು ಕಂಡು ಹಿಡಿದು ಮತ್ತೊಮ್ಮೆ ಅವರನ್ನು ಅಡ್ಡಗಟ್ಟಿ— ಶ್ರೀಮಂತ ಅಪ್ಪಾಜಿಯುವರು ಇಲ್ಲಿಯೇ ಪಾಳಯದ ಕಡೇ ಉಕ್ಕಡದಲ್ಲಿರುವರು. ಅವರು ನಿಮ್ಮನ್ನು ನೋಡಿ ವಾರ್ತೆಯನ್ನು ತಿಳಿದು ಬರಲು ನನಗೆ ಆಜ್ಞಾಪಿಸಿದ್ದರಿಂದ ನಾನು ನಿಮ್ಮ ಬಳಿಗೆ ಬಂದಿರುವೆನು. ನಿಮ್ಮ ಸಂಗತಿಯನ್ನು ಹೇಳಿ ಮುಂದೆ ಹೋಗುವದಾದರೆ ಹೋಗಬಹುದು ಎಂದು ನುಡಿದನು. ಶ್ರೀಮಂತ ಅಪ್ಪಾಜಿಯುವರು ಇಲ್ಲಿಯೇ ಇರುವರು ಎಂಬ ಮಾತನ್ನು ಕೇಳಿ ಆ ಜನರು ಅಂತ್ಯಂತ ಉತ್ಸಾಹಗೊಂಡು ತಟ್ಟನೆ ಅಲ್ಲಿಯೇ ನಿಂತು "ಎಲ್ಲಿರುವರು ಬೇಗನೆ ಹೇಳಿರಿ." ಎಂದು ನುಡಿದರು. ಆಗೆ ಯಶವಂತರಾಯನು ನನ್ನ ಹಿಂದಿನಿಂದ ಬನ್ನಿರಿ ತೋರಿಸುವೆನು ಎಂದು ನುಡಿಯುತ್ತ ಕುದುರೆಯನ್ನು ಪಾಳಯದ ಕಡೆಗೆ ತಿರುಗಿಸಿದನು.

ಸ್ವಲ್ಪ ಹೊತ್ತಿನಲ್ಲಿ ಅವರೆಲ್ಲರೊಡನೆ ಯಶವಂತರಾಯನು ಪಾಳಯವನ್ನು ಮುಟ್ಟಿದನು. ಅಪ್ಪಾಜಿಯು ಇನ್ನೂ ಯಶವಂತರಾಯನ ದಾರಿಯನ್ನು ಕಾಯುತ್ತಲೇ ಇದ್ದನು. ಆತನು ಕುದುರೆಯನ್ನು ಕೂಡಾ ಇಳಿದಿರಲಿಲ್ಲ. ಆತನ ಬಳಿಯಲ್ಲಿ ಯಶವಂತರಾಯನ ಸೈನಿಕರು ಒಳ್ಳೇ ಠೀವಿ

ಯಿಂದ ನಿಂತುಕೊಂಡಿದ್ದರು. ಯಶವಂತರಾಯನು ಬಂದವನೇ ಕುದುರೆ ಯನ್ನಿಳಿದು ಶ್ರೀಮಂತರಿಗೆ ಮುಜುರೆ ಮಾಡಿ, ಈ ಜನರು ತಮ್ಮ ದರ್ಶನ ಕ್ಕಾಗಿಯೇ ಉತ್ಸುಕರಾಗಿ ಬಂದಿರುವರು, ಎಂದು ನುಡಿದು ಬಂದ ಜನರ ಕಡೆಗೆ ಬೆರಳು ಮಾಡಿ ತೋರಿಸಿದನು. ಆಗ ಇವರೇ ಶ್ರೀಮಂತ ಅಪ್ಪಾಜಿ ಯವರೆಂಬದು ತಿಳಿಯಲು, ಆ ಜನರು ಪದ್ಧತಿಯಂತೆ ಮುಜುರೆಮಾಡಿ ತಾವು ತಂದ ಕಾಣಿಕೆಯನ್ನು ಅತ್ಯಂತ ಉತ್ಸಾಹದಿಂದ ಸಮರ್ಪಣೆ ಮಾಡಿದರು. ಅವರು ಅರ್ಪಿಸಿದ ಕಾಣಿಕೆಯನ್ನು ನೋಡಿ ಅಪ್ಪಾಜಿಗೆ ಸಂತೋಷವಾಗುವ ದರ ಬದಲು ಅನಿವಾರವಾದ ಕ್ರೋಧವುಂಟಾಯಿತು. ಆತನಿಗೆ ಸಿಟ್ಟು ಬಂದ ಲಕ್ಷಣಗಳು ಬಹಿರಂಗದಲ್ಲಿ ವ್ಯಕ್ತವಾಗತೊಡಗಿದವು. ಅವನ ಹಣೆಗೆ ಬಲವಾದ ನೀರಿಗೆಗಳು ಬಿದ್ದವು. ಹುಬ್ಬುಗಳು ಸಂಕುಚಿತವಾ ದವು. ಕಣ್ಣುಗಳು ಆರಕ್ತವಾದವು. ತುಟಿಗಳು ನಡುಗಲಾರಂಭಿಸಿದವು. ಒಮ್ಮಿಂದೊಮ್ಮೆ ಅಪ್ಪಾಜಿಯವರ ಶಾಂತಸ್ವರೂಪವು ರೌದ್ರರೂಪದಲ್ಲಿ ರೂಪಾಂತರ ಹೊಂದಲು, ಬಂದ ಆ ಜನರು ಗಾಬರಿಯಾದರು. ಅವರಿಗೆ ಮುಂದೇನು ಮಾಡಬೇಕೆಂಬದು ತಿಳಿಯದಾಯಿತು. ಕ್ಷಣ ಹೊತ್ತಿನವರೆಗೆ ಎಲ್ಲರೂಸುಮ್ಮನಿದ್ದ ಬಳಿಕ ಅಪ್ಪಾಜಿಯು ಗೊಗ್ಗರ ದನಿಯಿಂದ ನುಡಿದನೇನಂ ದರೆ—“ಆಂಗ್ರೆ ಬಂಧುಗಳೇ, ನೀವು ಈ ಕಾಣಿಕೆಯನ್ನು ಯಾರಿಗೋಸ್ಕರ ವಾಗಿ ತಂದಿರುವಿರಿ? ನಿಮಗೆ ಈ ಅಧಿಕಪ್ರಸಂಗತನವನ್ನು ಯಾರು ಮಾಡ ಹೇಳಿದರು? ಇದೊಂದುಸಾರೆ ನಿಮ್ಮ ಈ ತಪ್ಪನ್ನು ಕ್ಷಮಿಸುತ್ತೇನೆ. ಇಂಥ ಕಾಣಿಕೆಗಳನ್ನು ಇನ್ನು ಮುಂದೆ ಯಾರಿಗೂ ಸಮರ್ಪಿಸುವ ಹವ್ಯಾಸಕ್ಕೆ ಬೀಳಬೇಡಿರಿ. ಇದರಿಂದ ಅಧರ್ಮದ ಪ್ರಸಾರವಾಗುತ್ತದೆ. ಅನೀತಿಯು ಅಭಿವೃದ್ಧಿಯಾಗುತ್ತದೆ. ರಾಷ್ಟ್ರಶಿಕ್ಷಕರಾದವರೇ ಹೀಗೆ ಮಾಡುತ್ತಿರುವ ರೆಂದ ಬಳಿಕ ನಮಗೇನೆಂದು ಪ್ರಜೆಗಳು ಉಚ್ಛೃಂಖಲರಾಗುವರು. ನೀವು ವಿಜಯದ ಉಬ್ಬಿನಿಂದ ನನ್ನ ಬಳಿಗೆ ಬಂದಿರಿ. ಆದರೆ ನೀವು ತಂದ ಕಾಣಿಕೆ ಯನ್ನು ಸ್ವೀಕರಿಸಲಿಲ್ಲೆಂದು ಅಸಮಾಧಾನಪಡಬೇಡಿರಿ. ಈ ಜನರೊಡನೆ ನಡೆಯಿರಿ. ನಮ್ಮ ಶಿಬಿರಕ್ಕೆ!

ಈ ಪ್ರಕಾರ ಮಾತನಾಡಿ ಚಿಮಣಾಜಿಯು ಯಶವಂತರಾಯನ ಕಡೆಗೆ ನೋಡಿದನು. ಕೂಡಲೆ ಯಶವಂತರಾಯನು ಆ ಎಲ್ಲ ಜನರನ್ನು ಸನ್ಮಾನದಿಂದ ಕರೆದುಕೊಂಡು ಶ್ರೀಮಂತರ ಶಿಬಿರಕ್ಕೆ ನಡೆದನು. ಇತ್ತ ಅಪ್ಪಾಜಿಯು ಕುದುರೆಯನ್ನು ಚಪ್ಪರಿಸಿ ಶಿಬಿರದ ಕಡೆಗೆ ಹೊರಟನು.

ಪ್ರಿಯವಾಚಕರೇ, ಚಿಮಣಾಜಿ ಅಪ್ಪಾನಿಗೆ ಈ ಮೇರೆಗೆ ಸಿಟ್ಟು ಬರುವಂಥ ಕಾಣಿಕೆಯು ಅದಾವದಿರಬಹುದು? ಆಂಗ್ರೆಬಂಧುಗಳು ಅಂಥ ಯಾವ ಕಾಣಿಕೆಯನ್ನು ಶ್ರೀಮಂತರ ಬಳಿಗೆ ಕಳಿಸಿರಬಹುದು? ಶ್ರೀಮಂತ ಚಿಮಣಾಜಿಅಪ್ಪಾನಿಗೆ ಯಾವ ಸಂಗತಿಯು ನಿಂದ್ಯವಾಗಿ ತೋರುತ್ತಿತ್ತೋ ಆ ಸಂಗತಿಯನ್ನೇ ಆಂಗ್ರೆಬಂಧುಗಳು ಆಚರಿಸಿದ್ದರು. ವಸಯೀಕಿಲ್ಲೆಯಿಂದ ಗೋವೆಗೆ ಹೋಗುವ ಫಿರಂಗೀಜನರ ಜಹಾಜುಗಳನ್ನು ಆಂಗ್ರೇಬಂಧುಗಳು ಬಹು ಕಷ್ಟಬಟ್ಟು ಹಿಡಿದರು. ಈ ಜಹಾಜುಗಳನ್ನು ಹಿಡಿಯುವ ಕೆಲಸದಲ್ಲಿ ಫಿರಂಗಿಜನರ ಬಳಿಯಲ್ಲಿ ಗುಪ್ತಹೇರನಾಗಿದ್ದ ರಘುನಾಥನಿಂದ ಬಹಳ ಸಹಾಯವಾಯಿತು. ಆದರೆ ರಘುನಾಥನಿಗೆ ಚಿಮಣಾಜಿ ಅಪ್ಪಾನ ಸ್ವಭಾವವು ಚನ್ನಾಗಿ ಗೊತ್ತಿದ್ದದ್ದರಿಂದ ಅವನು ಸೆರೆಯಾಳುಗಳೊಡನೆ ಅಪ್ಪಾಜಿಯ ಭೆಟ್ಟಿಗೆ ಹೋಗುವ ಸಾಹಸ ಮಾಡಲಿಲ್ಲ. ಮುಖ್ಯ ಆಂಗ್ರೇಬಂಧುಗಳನ್ನೂ ಕಳಿಸಲಿಲ್ಲ. ಆಂಗ್ರೇಬಂಧುಗಳ ಮುಖ್ಯ ಅಧಿಕಾರಿಗಳನ್ನು ಮಾತ್ರ ಕಳುಹಿಸಿದ್ದನು.

ಆಂಗ್ರೇಬಂಧುಗಳು ಹಿಡಿದ ಜಹಾಜುಗಳಲ್ಲಿ ೩೦ ಜನ ಸ್ತ್ರೀಯರೂ ೧೫ ಜನ ಹುಡುಗರೂ ನಾಲ್ವರು ವೃದ್ಧರೂ ಫಿರಂಗಿಗಳ ಧರ್ಮಾಧಿಕಾರಿಯೂ ಹೀಗೆ ಜನರಿದ್ದರು. ಈ ಜಹಾಜುಗಳನ್ನು ಸಂರಕ್ಷಿಸಲಿಕ್ಕೆ ೧೫ ಜನ ಫಿರಂಗೀದಂಡಾಳುಗಳಿದ್ದ ಬೇರೊಂದು ಜಹಾಜವು ಇತ್ತು. ಆದರೆ ಆಂಗ್ರೇಬಂಧುಗಳೊಡನೆ ಬಡಿದಾಡುವಾಗ ಆ ಹದಿನೈದು ಜನರೂ ಕ್ರಿಸ್ತಲೋಕವನ್ನು ಕುರಿತು ತೆರಳಿದರು. ರಘುನಾಥನು ಆಂಗ್ರೇಬಂಧುಗಳಿಗೆ ಆಯತಸಮಯಕ್ಕೆ ಸಹಾಯ ಮಾಡದಿದ್ದರೆ ಫಿರಂಗೀಜಹಾಜುಗಳು ಅವರ ಕೈಗೆ ಸಿಗುತ್ತಿರಲಿಲ್ಲ; ಇರಲಿ.

ಈ ಮೇರೆಗೆ ಸಮುದ್ರದಲ್ಲಿ ದೊರೆತ ವಿಜಯದಿಂದ ಆಂಗ್ರೇಬಂಧುಗಳು ಆನಂದದಿಂದ ಉಬ್ಬಿದರು. ಯುದ್ಧದಲ್ಲಿ ಸೆರೆಸಿಕ್ಕವರನ್ನು ಬೇಕಾದ ಹಾಗೆ ನಡಿಸಿಕೊಳ್ಳಲಿಕ್ಕೆ ಬರುತ್ತದೆಂದು ಬಹುಜನ ಯೋದ್ಧಾಗಳು ತಿಳಿಯುತ್ತಿರುವರು. ಆದರೆ ಈ ಮಾತಿಗೆ ಅಪವಾದವಾಗಿ ನಡೆದವರೆಂದರೆ ಪ್ರಸ್ತುತದ ಕಾದಂಬರೀನಾಯಕನೊಬ್ಬನು. ಇನ್ನೊಬ್ಬನು ಛತ್ರಪತಿ ಶಿವಾಜಿಮಹಾರಾಜನು; ಈ ವಿಷಯದಲ್ಲಿ ಇವರ ಕೀರ್ತಿಯು ಅಪ್ರತಿಮವಾಗಿರುವದು. ಅಂತೇ ಇವರಿಗೆ ದೇವಾಂಶರೆಂದು ಕರೆಯುವ ವಾಡಿಕೆ

ಯುಂಟಾಗಿರುವದು.

ಯುದ್ಧದಲ್ಲಿ ಸೆರೆಸಿಕ್ಕ ಸುಂದರ ಸ್ತ್ರೀಯರನ್ನು ವರಿಷ್ಟರಿಗೆ ಕಾಣಿಕೆಯಾಗಿ ಸಮರ್ಪಿಸುವ ರೂಢಿಯು ವಿಷಯಲಂಪಟರ ಕಾಲದಿಂದ ನಡೆದು ಬಂದಿರುವದು. ವಿಷಯಲಂಪಟರಾದ ವರಿಷ್ಟರು ಇಂಥ ಕಾಣಿಕೆಗಳನ್ನು ಆನಂದದಿಂದ ಸ್ವೀಕರಿಸಿ ಕಾಣಿಕೆ ಕಳಿಸಿದವರಿಗೆ ಬಹು ಸನ್ಮಾನವನ್ನು ಮಾಡುತ್ತಿದ್ದರು. ಈ ರೂಢಿಗೆ ಹೊರತಾಗಿ ನಡೆಯದೆ ಅನಾಯಾಸ ಒದಗಿದ ಪ್ರಸಂಗದಿಂದ ಶ್ರೀಮಂತರ ವಿಶೇಷ ಪ್ರೇಮವನ್ನು ಸಂಪಾದಿಸಬೇಕೆಂದು ಆಂಗ್ರೆಬಂಧುಗಳ ಮನಸ್ಸಿನಲ್ಲಿ ಬಂದಿತು. ಅಪ್ಪಾಜಿಯಿಂದ ಪ್ರೇರಿತರಾಗಿ ಅವರು ಸಮುದ್ರವನ್ನು ಕಾಯಹತ್ತಿದ ಬಳಿಕ ಅವರಿಗೆ ಫಿರಂಗಿಗಳೊಡನೆ ಪ್ರತ್ಯಕ್ಷ ಯುದ್ಧಮಾಡುವ ಪ್ರಸಂಗವು ಬಂದದ್ದೆಂದರೆ ಇದೇ ಮೊದಲು ; ಈ ಮೊದಲು ಸಾರೆಗೇ ಅವರಿಗೆ ಕಲ್ಪನಾತೀತವಾದ ವಿಜಯವು ಪ್ರಾಪ್ತವಾಗಿ ಫಿರಂಗೀಅಧಿಕಾರಿಗಳ ಮನೆಯ ಹೆಂಗಸರು ಸೆರೆಸಿಕ್ಕದ್ದರಿಂದ ಅವರ ವಿಜಯದ ಉಬ್ಬು ಅತಿರೇಕವಾಗಿತ್ತು. ರಘುನಾಥನಂತೂ ವಸಯೀಕಿಲ್ಲೆಯು ಹಸ್ತಗತವಾದಷ್ಟು ಸಂಭ್ರಮ ತಾಳಿದ್ದನು.

ಈ ವಿಜಯದ ಸುದ್ದಿಯನ್ನು ತಮ್ಮ ಸ್ವಾಮಿಯಾದ ಚಿಮಣಾಜಿಗೆ ಯಾವಾಗ ತಿಳಿಸೇವೆಂಬ ಆತುರತೆಯು ಅವರಲ್ಲುತ್ಪನ್ನವಾದದ್ದು ಸ್ವಾಭಾವಿಕವೇ ಸರಿ! ತಮ್ಮಿಂದ ಈ ಮಹಾಕಾರ್ಯವು ಆದದ್ದಕ್ಕೆ ಅವರು ತಮ್ಮ ಪ್ರಸ್ತುತಿಯನ್ನು ತಾವೇ ಮಾಡಿಕೊಳ್ಳಲಾರಂಭಿಸಿದರು. ಈ ಸುದ್ದಿಯ ಶ್ರವಣದಿಂದ ಅಪ್ಪಾಜಿಯು ತಮ್ಮನ್ನು ಬಹುವಿಧವಾಗಿ ಗೌರವಿಸುವನೆಂದು ಆ ಆಂಗ್ರೆಬಂಧುಗಳು ತಿಳಿದರು. ಆದರೆ ಅಪ್ಪಾಜಿಯ ಸ್ವಭಾವವು ಎಂತಹದು, ಆತನಿಗೆ ಯಾವ ಸಂಗತಿಯು ಪ್ರಿಯವು ಯಾವದು ಅಪ್ರಿಯವು, ಎಂಬದನ್ನು ಅವರು ವಿಚಾರಿಸುವ ಗೊಡವೆಗೆ ಹೋಗಲಿಲ್ಲ. ರಘುನಾಥನಿಗೆ ಎಲ್ಲ ವಿಷಯ ಗೊತ್ತಿದ್ದರೂ ಅವನು ಆ ಆಂಗ್ರೆಬಂಧುಗಳಿಗೆ ತಿಳಿಸಿ ಅವರ ಉತ್ಸಾಹ ಭಂಗಮಾಡುವ ಗೊಡವೆಗೆ ಹೋಗಲಿಲ್ಲ.

ಸೆರೆಸಿಕ್ಕ ೩೦ ಜನ ಸ್ತ್ರೀಯರಲ್ಲಿ ಇಪ್ಪತ್ತುಜನರು ಯುವತಿಯರಾಗಿದ್ದರು. ಈ ಇಪ್ಪತ್ತು ಜನ ಹರೆಯದ ಹೆಂಗಸರಲ್ಲಿ ಒಬ್ಬಳ ರೂಪವು ಮಾತ್ರ ಅತ್ಯಂತ ಮೋಹಕವಿತ್ತು. ಆಯುವತಿಯ ವಯಸ್ಸು ಬಹಳಿರಲಿಲ್ಲ. ಇಪ್ಪತ್ತೆರಡರ ಒಳ-ಹೊರಗೆ ಇರಬಹುದು. ಅವಳ ಆ ಸುರೂಪವನ್ನು

ನೋಡಿ ಆಂಗ್ರೇಬಂಧುಗಳು ಮೋಹಗೊಂಡರು. ಫಿರಂಗೀಜನರಲ್ಲಿ ಇಂಥ ಸುಂದರ ಸ್ತ್ರೀಯರಿರಬಹುದೆಂಬ ಕಲ್ಪನೆಯು ಕೂಡಾ ಅವರಲ್ಲಿದ್ದಿಲ್ಲ. ಹೊನ್ನು-ಹೆಣ್ಣೆಂದರೆ ಹೆಣವು ಕೂಡಾ ಎದ್ದು ಕೂಡ್ರುತ್ತಿರುವಾಗ ಆಂಗ್ರೆ ಬಂಧುಗಳಲ್ಲಿ ಆ ಸುಂದರ ಯುವತಿಯು ದರ್ಶನದಿಂದ ಮೋಹಪ್ರವೃತ್ತಿಯುಂ ಟಾದ್ದು ಆಶ್ಚರ್ಯವಲ್ಲ. ಅವರನ್ನು ಮೋಹದಲ್ಲಿ ಕೆಡಹಿದ ಆ ಫಿರಂಗೀ ಯುವತಿಯು ವಸಯೀಕಿಲ್ಲೇದಾರನ ಹೆಂಡತಿಯಾಗಿದ್ದಳು. ಆಗ ಆಂಗ್ರೆ ಬಂಧುಗಳು ತಮ್ಮತಮ್ಮೊಳಗೆ ಆಲೋಚಿಸಿ ಈ ಸುಂದರಿಯನ್ನು ಚಿಮ ಣಾಜಿಅಪ್ಪಾಜಿಗೆ ಕಾಣಿಕೆ ಸಮರ್ಪಿಸಬೇಕೆಂದು ನಿರ್ಧರಿಸಿದರು.

ಮನುಷ್ಯನಿಗೆ ಸ್ವಪ್ರತಿಷ್ಠಾಕಾಂಕ್ಷೆಯೂ ಗೌರವಾಭಿಲಾಷೆಯೂ ಅನಿವಾರವಾದದ್ದು; ಅವನ್ನು ಸಂಪಾದಿಸುವದಕ್ಕಾಗಿ ಅವನು ಹಗಲು ರಾತ್ರಿಗಳಲ್ಲಿ ಹೆಣಗುತ್ತಿರುವನು. ಸರಿಕರಲ್ಲಿ ತಾನು ಮೇಲಾಗಬೇಕೆಂತಲೂ ಬಯಸುತ್ತಿರುವನು. ಇಂಥ ಸ್ವಾರ್ಥಪರ ಪ್ರತಿಷ್ಠೆಯ ಹವ್ಯಾಸದಿಂದ ಎಷ್ಟೋ ಜನರು ಅಕಾರ್ಯಗಳನ್ನು ಕೂಡಾ ಆಚರಿಸಿ ಬಿಡುವರು. ಇದ ರಂತೆ ಪ್ರಸ್ತುತದಲ್ಲಿ ಆಂಗ್ರೆಬಂಧುಗಳ ಸ್ಥಿತಿಯೂ ಆಯಿತು. ಅವರು ತಾವು ಮಾಡುವ ಕೆಲಸವು ಸರಿಯಾದದ್ದೋ ಇಲ್ಲವೋ ಎಂಬದನ್ನು ಕೂಡಾ ಯೋಚಿಸಿ ನೋಡಲಿಲ್ಲ. ಆಗ ಅವರು ತಮ್ಮ ಓರ್ವ ಸಜಾತೀಯ ಹಾಗು ವಿಶ್ವಾಸುಕ ಅಧಿಕಾರಿಯೊಡನೆ ಕೆಲ ಸೈನ್ಯವನ್ನು ಕೊಟ್ಟು ಮೇಲೆ ಹೇಳಿದಂತೆ ಆ ಸುಂದರ ತರುಣಿಯನ್ನು ಶ್ರೀಮಂತರಿಗೆ ಕಾಣಿಕೆಯಾಗಿ ಸಮರ್ಪಿಸಬೇಕೆಂದು ಕಳಿಸಿ ಕೊಟ್ಟರು. ಈ ಕಾಣಿಕೆಯನ್ನು ನೋಡಿಯೇ ಚಿಮಣಾಜಿಅಪ್ಪಾಜಿಯು ಕಿಡಿಕಿಡಿಯಾದನು.

ಚಿಮಣಾಜಿಅಪ್ಪಾಜಿಯು ಬಹು ಧಾರ್ಮಿಕ ಪುರುಷನಾಗಿದ್ದನು. ಆತನ ಏಕಪತ್ನೀವ್ರತವು ಬಹು ಖ್ಯಾತವಾಗಿತ್ತು. ಅಣ್ಣನಾದ ಬಾಜೀ ರಾವ ಪೇಶ್ವೆಯು ಮಸ್ತಾನಿ ಎಂಬ ಮುಸಲ್ಮಾನ ಸ್ತ್ರೀಯನ್ನು ಬಳಿಯಲ್ಲಿ ಇಟ್ಟುಕೊಂಡದ್ದಕ್ಕೆ ಆತನು ಸ್ವಲ್ಪಮಾತ್ರವೂ ಸೇರುತ್ತಿದ್ದಿಲ್ಲ. ಆದರೆ ಹಿರಿ ಯರಿಗೆ ಬುದ್ಧಿವಾದವ ಹೇಳುವದು ಧರ್ಮವಿರೋಧ ಸಂಗತಿಯೆಂದು ಆ ಧಾರ್ಮಿಕನು ಮೌನದಿಂದ ಸಹನಮಾಡುತ್ತಿದ್ದನು. ಬಾಜೀರಾವ ಪೇಶ್ವೆ ಯು ಚಿಮಣಾಜಿಗೆ ಹಿರಿಯನಾಗದೆ ಚಿಕ್ಕವನಾಗಿದ್ದರೆ, ಆ ಧಾರ್ಮಿಕ ವಸ್ತಾದಿಯು ಇಂಥ ಅಧಾರ್ಮಿಕ ಕೆಲಸವನ್ನು ಎಂದೂ ನಡೆಯಗೊಡು

ತ್ತಿದ್ದಿಲ್ಲ. ಆತನು ಇಂದಿನವರೆಗೆ ಅನೇಕ ಯುದ್ಧಗಳಲ್ಲಿ ವಿಜಯ ಸಂಪಾದಿಸಿದ್ದರೂ, ಸ್ತ್ರೀಯರ ಅಪಹರಣವನ್ನು ಎಂದೂ ಮಾಡಿದ್ದಿಲ್ಲ. ಇಷ್ಟೇ ಅಲ್ಲ; ಮನಸ್ಸಿನಲ್ಲಿ ಕೂಡಾ ಸುಂದರ ಸ್ತ್ರೀಯರ ಮೇಲೆ ಪಾಪವಾಸನೆಯನ್ನು ತಾಳಿದ್ದಿಲ್ಲ. ಇಂಥ ಧಾರ್ಮಿಕ ಪುರುಷನು ಈ ದಿನ ಫಿರಂಗೀ ತರುಣಸ್ತ್ರೀಯ ಕಾಣಿಕೆಯನ್ನು ಸ್ವೀಕರಿಸಬಹುದೇ? ಯುದ್ಧದ ಪ್ರಸಕ್ತಿಯಿರದಿದ್ದರೆ ಆ ಧರ್ಮವೀರನು ಆ ಕಾಣಿಕೆ ಕಳಿಸಿದವರ ಪಾರುಪತ್ಯ ಮಾಡದೆ ಬಿಡುತ್ತಿದ್ದಿಲ್ಲ. ಆದರೆ ಪ್ರಬಲ ಶತ್ರುಗಳೊಡನೆ ಯುದ್ಧದ ಪ್ರಸಕ್ತಿಯಿದ್ದದರಿಂದ ಆತನು ಅಷ್ಟೊಂದು ಪ್ರಚಂಡ ಕೋಪವನ್ನು ತಾಳಲಿಲ್ಲ.

ಚಿಮಣಾಜಿಯು ಯಶವಂತರಾಯನು ಬರುವಷ್ಟರಲ್ಲಿಯೇ ತನ್ನ ಶಿಬಿರವನ್ನು ಮುಟ್ಟಿದ್ದನು. ಮತ್ತು ಆ ಜನರು ಬರುವ ದಾರಿಯನ್ನು ಕಾಯುತ್ತ ಕುಳಿತುಕೊಂಡಿದ್ದನು. ಅಷ್ಟರಲ್ಲಿ ಯಶವಂತರಾಯನು ಆಂಗ್ರೆ ಸೈನಿಕರೊಡನೆ ಅಲ್ಲಿಗೆ ಬಂದನು. ಬಳಿಕ ಚಿಮಣಾಜಿಯು ಆಂಗ್ರೇ ಅಧಿಕಾರಿಯನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು ನಡೆದ ಸಂಗತಿಯನ್ನೆಲ್ಲ ವಿಚಾರಿಸಿದನು. ಆಗ ಆತನು ಆಂಗ್ರೆ ಬಂಧುಗಳು ವಸಯಿ ಕಿಲ್ಲೆಯಿಂದ ಕೆಲ ಅಂತರದ ಮೇಲೆ ಫಿರಂಗೀ ಜನರ ಜಹಾಜುಗಳನ್ನು ಮುತ್ತಿದ್ದೂ, ಅವರೊಡನೆ ಯುದ್ಧಮಾಡಿ ವಿಜಯ ಸಂಪಾದಿಸಿದ್ದೂ ಇವೇ ಮೊದಲಾದ ಸಮಸ್ತ ಸಂಗತಿಗಳನ್ನು ನಿವೇದಿಸಿದನು. ಆಂಗ್ರೆ ಬಂಧುಗಳ ಕರ್ತೃತ್ವಶಕ್ತಿಯ ವಿಷಯವಾಗಿ ಚಿಮಣಾಜಿಯಲ್ಲಿ ಅತ್ಯಂತ ಅಭಿಮಾನವುಂಟಾಯಿತು. ರಾತ್ರಿಯಲ್ಲಿ ಹೊಂಚುಹಾಕಿ ಶತ್ರುಗಳ ಮೇಲೆ ಬಿದ್ದು, ವಿಜಯ ಸಂಪಾದನೆ ಮಾಡಿದ್ದು ಯೋಗ್ಯವಾಗಿದ್ದರೂ, ಹೆಂಗಸರನ್ನೂ-ಹುಡುಗರನ್ನೂ ಸೆರೆಹಿಡಿದದ್ದು ಅಯೋಗ್ಯವಾಯಿತೆಂಬ ಉದ್ಗಾರವು ಸಹಜವಾಗಿ ಆತನ ಮುಖದಿಂದ ಹೊರಟಿತು. ಆ ಉದ್ಗಾರವನ್ನು ಕೇಳಿ ಆ ಆಂಗ್ರೆ ಅಧಿಕಾರಿಯು ನಾಚಿಕೊಂಡನು. ಬಳಿಕ ಶ್ರೀಮಂತ ಅಪ್ಪಾಜಿಯು ಆ ಅಧಿಕಾರಿಯನ್ನು ಗೌರವಿಸಿ, ಒಂದು ಪತ್ರ ಬರೆದು ಆಂಗ್ರೆ ಬಂಧುಗಳ ಕೈಯಲ್ಲಿ ಕೊಡುವದಕ್ಕಾಗಿ ಅವನ ಕೈಯಲ್ಲಿ ಕೊಟ್ಟನು. ಆ ಪತ್ರದಲ್ಲಿ ಚಿಮಣಾಜಿಯು ಆಂಗ್ರೆ ಬಂಧುಗಳ ಸಾಹಸವನ್ನು ಹೊಗಳಿದ್ದಲ್ಲದೆ, ಅವರಿಗೆ ಅನೀತಿಯ ಕೆಲಸದಲ್ಲಿ ಪ್ರವೇಶಮಾಡಕೂಡದೆಂದು ಸದುಪದೇಶವನ್ನು ಮಾಡಿದ್ದನು. ಮತ್ತು

ಸೆರೆ ಸಿಕ್ಕವರಲ್ಲಿ ಗಂಡಸರನ್ನಷ್ಟೇ ಇಟ್ಟುಕೊಂಡು ಎಲ್ಲ ಹೆಂಗಸರನ್ನೂ, ಹುಡುಗರನ್ನೂ ತಿರುಗಿ ವಸಯಿೂ ಕಿಲ್ಲೆಗೆ ಕಳಿಸಬೇಕೆಂದು ಸ್ಪಷ್ಟವಾಗಿ ಬರೆದಿದ್ದನು. ಹಾಗು ನಿಮ್ಮಿಂದಾಗಲಿ ಅಥವಾ ಸೈನಿಕರಿಂದಾಗಲಿ ಶತ್ರುಗಳ ಸ್ತ್ರೀಯರ ಅಪಮಾನವು ಆಗಕೂಡದೆಂದು ಕಟ್ಟಪ್ಪಣೆ ಮಾಡಿದ್ದನು. ಈ ಮೇಲೆಗಿರುವ ಪತ್ರವನ್ನು ತಕ್ಕೊಂಡು ಆ ಆಂಗ್ರೆ ಅಧಿಕಾರಿಯು ಸಸೈನ್ಯವಾಗಿ ಚಿಮಣಾಜಿಯ ಅಪ್ಪಣೆ ಪಡೆದು ಹೊರಟು ಹೋದನು.

ಬಳಿಕ ಇತ್ತ ಚಿಮಣಾಜಿಯು ಆ ಫಿರಂಗೀ ತರುಣಿಯನ್ನು ಗೌರವಿಸಿ ಯೋಗ್ಯ ಬಂದೋಬಸ್ತಿನೊಡನೆ ಅವಳನ್ನು ವಸಯಿಾ ಕಿಲ್ಲೆಗೆ ಕಳಿಸಿಕೊಟ್ಟನು. ಚಿಮಣಾಜಿಯ ಈ ಪಾಪಭೀರುತನವನ್ನೂ, ಧಾರ್ಮಿಕ ಬುದ್ಧಿಯನ್ನೂ, ಪರನಾರೀ ಸೋದರತ್ವವನ್ನೂ ತಿಳಿದು ಅವನ ದಂಡಿನವರಿಗೆಲ್ಲ ಪರಮಾಶ್ಚರ್ಯವಾಯಿತು. ಆಪ್ಪಾನ ಸ್ಥಳದಲ್ಲಿ ಮತ್ತಾವನಾದರೂ ವಿಷಯಲಂಪಟನಿದ್ದರೆ ಇಂಥ ಸುಂದರ ತರುಣಿಯನ್ನು ತಿರುಗಿ ಕಳಿಸಬಹುದೇ? ಎಂದು ಅಂದುಕೊಂಡರು. ಅಪ್ಪಾನ ಈ ಘನವಂತಿಕೆಯು ಆ ಜನರ ಮನಸ್ಸಿನ ಮೇಲೆ ಒಳ್ಳೇ ಪರಿಣಾಮವನ್ನುಂಟುಮಾಡಿತು.

ಚಿಮಣಾಜಿಅಪ್ಪಾನಿಂದ ಕಳಿಸಲ್ಪಟ್ಟ ಕಿಲ್ಲೇದಾರನ ಹೆಂಡತಿಯು ವಸಯಿೂ ಕೋಟೆಯನ್ನು ಮುಟ್ಟಿ ಗಂಡನ ಬಳಿಗೆ ಹೋದಳು. ಅವಳು ಆ ಮರಾಟಾವೀರನ ಉದಾರತನವನ್ನು ಬಹು ಸರಸವಾಗಿ ವರ್ಣಿಸಿ ಇಂಥ ಘನವಂತ ಮನುಷ್ಯನ ಸಂಗಡ ಯುದ್ಧಮಾಡಿ ನೀವು ಪಾರಾಗಲಾರರಿ, ಎಂದು ಖಂಡಿತವಾಗಿ ಹೇಳಿದಳು. ಪಾತಿವ್ರತ್ಯವೆಂಬದು ಎಲ್ಲ ಧರ್ಮಗಳಲ್ಲಿಯೂ ಒಂದೇ ಇರುತ್ತದೆ. ಸಚ್ಛೀಲ ಸ್ತ್ರೀಯರು ಯಾವ ಧರ್ಮದಲ್ಲಿ ಹುಟ್ಟಿದ್ದರೂ ಅವರು ತಮ್ಮ ಶೀಲವನ್ನು ಕಾಯ್ದುಕೊಳ್ಳುವರು. ಆದ್ದರಿಂದ ಆ ಫಿರಂಗೀ ತರುಣಿಗೆ ತನ್ನ ಪಾತಿವ್ರತ್ಯ ರಕ್ಷಣವಾದದ್ದಕ್ಕೆ ತುಂಬಾ ಸಂತೋಷವಾಗಿತ್ತು. ಮರಾಟರು ಅಡವೀ ಮನುಷ್ಯರಿದ್ದು, ತನ್ನ ಪಾತಿವ್ರತ್ಯವನ್ನು ಎಲ್ಲಿ ಸೂರೆಗೊಳ್ಳುವರೋ ಎಂದು ಆ ತರುಣಿಯು ಗಾಬರಿಯಾಗಿದ್ದಳು. ಸ್ತ್ರೀಯರಿಗೆ ರೂಪವು ಶತ್ರು ಸದೃಶವಾಗಿರುತ್ತದೆ. ಸುಂದರ ಯುವತಿಯರ ಮೇಲೆ ಪಾಪಿಷ್ಠರ ಲಕ್ಷವು ವಿಶೇಷವಾಗಿ ಬೀಳುತ್ತದೆ. ಆದ್ದರಿಂದ ಅವರು ಸರ್ವದಾ ಜಾಗರೂಕರಾಗಿರಬೇಕಾಗುತ್ತದೆ. ಯುದ್ಧ ಮುಂತಾದವುಗಳಲ್ಲಂತೂ ಆ ಜನರ ಹಲ್ಲಣವೇ ಹಾರಿಹೋಗುತ್ತದೆ.

ನಮ್ಮ ಭರತಖಂಡದಲ್ಲಿ ಕೋಟ್ಯವಧಿ ಸುಂದರ ತರುಣಿಯರು ರೂಪವೆಂಬ ಶತ್ರುವಿನಗೋಸ್ಕರ ಆತ್ಮಾಹುತಿಯನ್ನು ಕೊಟ್ಟರುತ್ತಾರೆ. ಇರಲಿ.

ಕಿಲ್ಲೇದಾರನು ತನ್ನ ಹೆಂಡತಿಯನ್ನು ಗೌರವಿಸಿ ತನ್ನ ಬಳಿಗೆ ತಿರುಗಿ ಕಳಿಸಿದ್ದಕ್ಕಾಗಿ ಮರಾಟರನ್ನು ಬಹಳವಾಗಿ ಹೊಗಳಿದನು. ಮರಾಟರು ಸೈತಾನರಾಗದೆ ಪವಿತ್ರ ಹಾಗು ಧಾರ್ಮಿಕ ಜನರಿರುವರೆಂದು ಅವನ ನಂಬಿಕೆಯಾಯಿತು. ಧರ್ಮ ಹಾಗು ಪವಿತ್ರತೆಗಳಿದ್ದಲ್ಲಿ ಜಯವು ನಿಶ್ಚಯವಾಗಿ ಸಿಕ್ಕುವದರಿಂದ ಕೋಟೆಯು ನಿಶ್ಚಯವಾಗಿ ಅವರ ಕೈಸೇರುವದೆಂದು ಭಾವಿಸಿದನು. ಆತನು ಮರಾಟರ ಈ ಔದಾರ್ಯವನ್ನು ಪೆರೆರಾ ಮೊದಲಾದ ಅಧಿಕಾರಿಗಳಿಗೆ ತಿಳಿಸಬೇಕೆನ್ನುವಷ್ಟರಲ್ಲಿ ಕಿಲ್ಲೆಯ ಬಳಿಯಲ್ಲಿ ಎರಡು ಮೂರು ಜಹಾಜುಗಳು ಬಂದಿವೆಯೆಂಬ ಸುದ್ದಿಯು ಬಂದಿತು. ಆಗ ಅವನು ಹೋಗಿ ನೋಡಲು, ಶತ್ರುಗಳ ಸೆರೆಸಿಕ್ಕ ತಮ್ಮ ಸ್ತ್ರೀಯರೆಲ್ಲರೂ ಬಂದಿದ್ದರು. ಅದನ್ನು ಕಂಡು ಆತನಿಗೆ ತುಂಬಾ ಸಂತೋಷವಾಯಿತು ಅಷ್ಟರಲ್ಲಿ ಪೆರೆರಾ ಮೊದಲಾದ ಎಲ್ಲ ಅಧಿಕಾರಿಗಳೂ ಬಂದರು. ಎಲ್ಲರಿಗೂ ತುಂಬಾ ಆಶ್ಚರ್ಯವಾಯಿತು. ಶತ್ರುಗಳ ಸೆರೆಯಲ್ಲಿ ಎಲ್ಲ ಅಧಿಕಾರಿಗಳ ಹೆಂಡರೂ- ಮಕ್ಕಳೂ ಸಿಕ್ಕಿದ್ದರು. ಆದ್ದರಿಂದ ಅವರೆಲ್ಲರೂ ಉದಾಸೀನರಾಗಿದ್ದರು. ಜೀವಿತದ ಮೇಲೆ ಅವರಿಗೆ ಆಶೆಯೇ ಉಳಿದಿರಲಿಲ್ಲ. ಹೀಗಿರಲು ಮೊಸಳೆಯ ಬಾಯೊಳಗಿಂದ ಪಾರಾಗಿ ಬಂದಂತೆ ತಮ್ಮ ಹೆಂಡಿರು-ಮಕ್ಕಳು ಅಕಸ್ಮಾತ್ತಾಗಿ ಬರಲು, ಅವರಿಗೆ ಹೋದ ಜೀವವು ತಿರುಗಿಬಂ-ದಷ್ಟು ಸಂಭ್ರಮವಾಯಿತು. ಸೆರೆಸಿಕ್ಕ ಆ ಜನರು ಮರಾಟರ ದಯಾಬುದ್ಧಿಯನ್ನು ವರ್ಣಿಸಿದ ಬಳಿಕಂತೂ ಆ ಫಿರಂಗೀ ಅಧಿಕಾರಿಗಳು ನಾಚಿಕೊಂಡರು. ಮರಾಟರ ಈ ಉದಾತ್ತ ಆಚರಣೆಯ ನಿರೀಕ್ಷಣೆಯಿಂದ ವಿಧರ್ಮಿಗಳಾದ ನಾವು ತುಂಬಾ ಬುದ್ಧಿಗೇಡಿಗಳೆಂಬ ಉದ್ಗಾರವು ಪ್ರತಿಯೊಬ್ಬ ಫಿರಂಗೀ ಅಧಿಕಾರಿಯ ಬಾಯಿಯಿಂದ ಹೊರಟಿತು. ಧನ್ಯ! ಚಿಮಣಾಜಿ!! ನಿನ್ನ ಧಾರ್ಮಿಕ ತೇಜಸ್ಸು ಧನ್ಯವು!!!



# (೧೮) ಜೀವವು ಬೆಲ್ಲಕ್ಕಿಂತಲೂ ಸವಿ!

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಚಿಮಣಾಜಿ ಅಪ್ಪಾನ ಔದಾರ್ಯ ದಿಂದ ಫಿರಂಗೀ ಸ್ತ್ರೀ-ಬಾಲಕರೆಲ್ಲರೂ ವಸಯಿಾ ಕಿಲ್ಲೆಗೆ ಕಳಿಸಲ್ಪಟ್ಟ ಬಳಿಕ ಆಂಗ್ರೆಯವರ ಸೆರೆಯಲ್ಲಿ ಫಿರಂಗೀ ಗಂಡಸರಷ್ಟೇ ಉಳಿದರು. ಅವರಲ್ಲಿ ಫಿರಂಗೀ ಧರ್ಮಾಧಿಕಾರಿಯಾದ "ಬಾರ್ಬಾರೋಸೋ ವ್ಹೆನ್ಜನ್ಸೊ" ಎಂಬ ವನೂ ಇದ್ದನು. ಈ ಧರ್ಮಾಧಿಕಾರಿಯು ಅತ್ಯಂತ್ಯ ಪುಕ್ಕನಿದ್ದನೆಂಬದು ನಮ್ಮ ವಾಚಕರ ಸ್ಮರಣೆಯಲ್ಲಿರಬಹುದು. ಅವನು ಮರಾಟರು ಮುತ್ತಿಗೆ ಹಾಕಿದ್ದಕ್ಕೆ ಮೊದಲೇ ಅಂಜಿಕೊಂಡಿದ್ದನು. ತನ್ನ ಮೈಮೇಲೆ ಗಂಡಾಂ ತರ ಪ್ರಸಂಗವು ಬಂದರೆ ಹ್ಯಾಗೆಂದು ಚಿಂತಾತುರನಾಗಿದ್ದನು. ಆದರೆ ಕಿಲ್ಲೆಯ ಅಧಿಕಾರಿಗಳ ಆಲೋಚನೆಯಂತೆ ತಾನು ಗೋವೆಗೆ ಹೋಗುವೆ ನೆಂದು ಸಮಾಧಾನವ ತಾಳಿದ್ದನು. ತಾನು ಒಮ್ಮೆ ಸುರಕ್ಷಿತವಾಗಿ ಗೋವೆಗೆ ಮುಟ್ಟಿದೆನೆಂದರೆ ಮರಾಟರ ಕೈಯೊಳಗಿಂದ ಪಾರಾದಂತಾಯಿ ತೆಂದು ಅವನು ಮನಸ್ಸಿನಲ್ಲಿಯೇ ಎಣಿಕೆ ಹಾಕುತ್ತಿದ್ದನು. ಮುಖ್ಯವಾಗಿ ತನ್ನ ಜೀವ ಬದುಕಿಸಿಕೊಳ್ಳುವ ಉಪಾಯವೊಂದನ್ನೇ ಆತನು ಚಿಂತಿಸು ತ್ತಿದ್ದನು. ಕೋಟೆಯ ರಕ್ಷಣೆಯ ಚಿಂತೆಯು ಅವನಿಗೆ ಸ್ವಲ್ಪಮಾತ್ರಕ್ಕೂ ಇದ್ದಿಲ್ಲ. ಜೀವಗಳ್ಳರಾದವರು ಬೇರೆ ಯಾವದನ್ನೂ ನೋಡುವದಿಲ್ಲ. ತಮ್ಮ ಬಾಂಧವರು ಎಂಥ ಗಂಡಾಂತರದಲ್ಲಿ ಸಿಕ್ಕಿರುವರೆಂಬದರ ಕಡೆಗೆ ಸ್ವಲ್ಪವೂ ಲಕ್ಷಗೊಡುವದಿಲ್ಲ. ತಾವೊಂದು ಬದುಕಿದರೆ ಜಗತ್ತೇ ಬದುಕಿದಂತಾಯಿ ತೆಂದು ಅವರು ತಿಳಿಯುತ್ತಿರುವರು. ಪ್ರಸ್ತುತದಲ್ಲಿ ಆ ಧರ್ಮಾಧಿಕಾರಿ ಯು ಹೀಗೆಯೇ ತಿಳಿಯುತ್ತಿದ್ದನು. ಕೋಟೆಯ ಗೊಡವೆ ನನಗೇನು? ನಾನೊಬ್ಬನು ಜೀವದಿಂದ ಪಾರಾಗಬೇಕು. ಮಹಾತ್ಮಾ ಏಸುವು ನನ್ನ ಈ ಮೊರೆಯನ್ನು ಕೇಳಬೇಕು, ಎಂಬದನ್ನೇ ಅವನು ಧ್ಯಾನಿಸುತ್ತಿದ್ದನು. ಆದರೆ ಅವನು ದುರ್ದೈವದಿಂದ ಗೋವೆಗೆ ಹೋಗುವದರ ಬದಲು ಆಂಗ್ರೆ ಯವರ ಸೆರೆಯಲ್ಲಿ ಬೀಳಬೇಕಾಯಿತು.

ಗೋವೆಗೆ ಹೊರಟ ಜಹಾಜುಗಳು ಆಂಗ್ರೆಯವರ ಸೆರೆ ಸಿಕ್ಕಾಗಲೇ ಆ ಧರ್ಮಾಧಿಕಾರಿಯ ಹಲ್ಲಣವು ಹಾರಿತ್ತು. ಮರಾಟರ ಕೈಯೊಳಗಿಂದ

ಇನ್ನು ತಾನು ಪಾರಾಗಲಾರೆನೆಂದು ಅವನು ಖಂಡಿತವಾಗಿ ತಿಳಿದನು. ಧರ್ಮಾಂತರ ಮಾಡಿಸುವ ಕೆಲಸದಲ್ಲಿ ತಾನು ಮರಾಟರಿಗೆ ಚಿತ್ರಹಿಂಸೆ ಕೊಟ್ಟಿದ್ದರಿಂದ ಅದರ ಸೇಡು ತೀರಿಸಿಕೊಳ್ಳದೆ ಅವರು ಬಿಡಲಿಕ್ಕಿಲ್ಲೆಂಬ ವಿಚಾರಗಳು ಅವನಲ್ಲುಂಟಾಗಲು, ಅವನ ಕಣ್ಣುಗಳಲ್ಲಿ ದುಃಖಾಶ್ರುಗಳು ಧಾರೆಗಟ್ಟಿ ಸುರಿಯತೊಡಗಿದವು. ಮರಾಟರು ತನ್ನನ್ನು ಒಮ್ಮೆಲೆ ಕೊಲ್ಲದೆ ಒಂದು ದಿನ ಕಾಲನ್ನು ಕಡಿದು, ಮತ್ತೊಂದು ದಿನ ಕೈಯನ್ನು ಕಡಿದು, ಇನ್ನೊಂದು ದಿನ ಕಿವಿ-ಮೂಗುಗಳನ್ನು ಕೊಯ್ದು, ತನ್ನನ್ನು ಬಹು ವಿಧವಾಗಿ ಗೋಳಾಡಿಸಿ ವಿಲಿವಿಲಿ ಒದ್ದಾಡಿಸಿ ಕಡೆಗೆ ಕೊಲ್ಲುವ ರೆಂದು ತಿಳಿದು ಆ ಕಾಲ್ಪನಿಕ ಚಿತ್ರಹಿಂಸೆಯನ್ನು ಸ್ಮರಿಸಿ ಗಡಗುಟ್ಟಿ ನಡುಗ ಲಾರಂಭಿಸಿದನು. ತಾನು ಮರಾಟರಿಗೆ ಇಷ್ಟು ದಿನ ಮಾಡಿದ್ದೇ ಈ ದಿನ ತನಗೆ ತಿರುಗುವದೆಂದು ಅವನು ತೀರಕ್ಕೈ-ಕಾಲುಬಿಟ್ಟನು. ಶತ್ರುಗಳ ಕೈಸೆರೆ ಯಾಗಿ ಚಿತ್ರಹಿಂಸೆಯನ್ನು ಅನುಭವಿಸಿ ಸಾಯುವದಕ್ಕಿಂತ ಒಮ್ಮೆಲೆ ಸಮುದ್ರದಲ್ಲಿ ಹಾರಿ ಸಾಯುವದು ಲೇಸೆಂಬ ವಿಚಾರಗಳೂ ಅವನ ಮನ ಸ್ಸಿನಲ್ಲಿ ಬಂದವು. ಆದರೆ ಜೀವಗಳ್ಳರಿಗೆ ಸಾಯುವ ಧೈರ್ಯವೆಲ್ಲಿ? ನಾನು ಸಮುದ್ರದಲ್ಲಿ ಹಾರಿಕೊಂಡರೆ ಬದುಕುವ ಆಶೆಯೇ ಇಲ್ಲ. ಆದರೆ ಹೀಗೇ ಶತ್ರುಗಳ ಸೆರೆಯಲ್ಲಿದ್ದರೆ ಒಂದುವೇಳೆ ನಮ್ಮವರು ನಮ್ಮನ್ನು ಬಿಡಿಸಿ ಕೊಂಡು ಹೋಗಬಹುದು. ಹಾಗಾಗದ ಪಕ್ಷದಲ್ಲಿ ನಾನಾದರೂ ಶತ್ರುಗಳ ಕೈಕಾಲುಕಟ್ಟಿಕೊಂಡು ಜೀವವುಳಿಸಿಕೊಳ್ಳಬಹುದು. ಆದ್ದರಿಂದ ಈಗಲೇ ಸಮುದ್ರದಲ್ಲಿ ಹಾರಿ ಪ್ರಾಣ ಕಳಕೊಳ್ಳುವದು ವಿಹಿತವಲ್ಲ, ಎಂಬ ಆಶಾ ವಾದಿತ್ವವು ಅವನಲ್ಲಿ ಉತ್ಪನ್ನವಾಗಲು, ಅವನಿಗೆ ಸ್ವಲ್ಪ ಸಮಾಧಾನವು ಆಗುತ್ತಿತ್ತು.

ಹೀಗೆ ಆ ಪುಕ್ಕ ಫಿರಂಗೀ ಧರ್ಮಾಧಿಕಾರಿಯು ಜೀವವುಳಿಸಿಕೊಳ್ಳುವ ಯೋಚನೆಯನ್ನು ಮಾಡುತ್ತಿರಲು, ಫಿರಂಗೀ ಹೆಂಗಸರೂ, ಹುಡುಗರೂ ಸೆರೆಯಿಂದ ಮುಕ್ತರಾದದ್ದನ್ನು ನೋಡಿ ತಮ್ಮನ್ನೂ ಬಿಡಬಹುದೆಂದು ಮನ ದಲ್ಲಿ ಸಂತೋಷವ ತಾಳಿದನು. ಅವನಿಗೆ ಮರಾಠಿಯಾಗಲಿ, ಹಿಂದಿಯಾಗಲಿ ಹಿಂದುಸ್ಥಾನದ ಯಾವ ಭಾಷೆಯೂ ಬಾರದ್ದರಿಂದ ಮರಾಟರು ಏನೇನು ಮಾತಾಡುತ್ತಾರೆಂಬದು ಅವನಿಗೆ ತಿಳಿಯದಾಯಿತು. ಸುಮ್ಮನೆ ದೀನವದನದಿಂದ ಅವರ ಮುಖಗಳನ್ನು ಮಾತ್ರ ನೋಡುತ್ತಿದ್ದನು.

ಆ ಫಿರಂಗೀ ಧರ್ಮಾಧಿಕಾರಿಯ ಮೇಲೆ ರಘುನಾಥನು ಅತ್ಯಂತ ಕೋಪ ತಾಳಿದ್ದನು. ಯಾಕಂದರೆ, ಕಿಲ್ಲೆಯಲ್ಲಿ ಅವನು ಮರಾಟರಿಗೆ ಹ್ಯಾಗೆ ಹಿಂಸೆ ಕೊಡುತ್ತಿದ್ದನೆಂಬದು ಅವನಿಗೆ ಗೊತ್ತಿತ್ತು. ಆದ್ದರಿಂದ ರಘುನಾಥನು ಆ ಧರ್ಮಾಧಿಕಾರಿಯನ್ನು ನೋಡಿದಾಗೆಲ್ಲ ಸಿಟ್ಟಿ ಬೆಂಕಿಯಾಗುತ್ತಿದ್ದನು; ಮತ್ತು ಏನಾದರೂ ಮಾತಾಡಬೇಕಾದರೆ, ಹಲ್ಲು ಕಡಿಯುತ್ತ ಮಾತಾಡುತ್ತಿದ್ದನು. ರಘುನಾಥನು ಹೀಗೆ ತನ್ನನ್ನು ಕಂಡರೆ ಕೆಂಗಣ್ಣು ತೆಗೆಯುವದನ್ನು ಕಂಡು ಆ ಧರ್ಮಾಧಿಕಾರಿಯ ಜೀವವು ತಲ್ಲಣಿಸುತ್ತಿತ್ತು. ಈತನಿಂದಲೇ ಆದರೆ ತನ್ನ ಘಾತವಾಗಬಹುದೆಂದು ಅವನು ತಳಮಳಿಸುತ್ತಿದ್ದನು.

ಫಿರಂಗಿ ಸ್ತ್ರೀಯರೂ, ಹುಡುಗರೂ ಸೆರೆಯಿಂದ ಮುಕ್ತರಾಗಿ ಎರಡು ದಿನಗಳಾದರೂ ತಮ್ಮ ಬಿಡುಗಡೆಯ ಸುದ್ದಿಯಿಲ್ಲದ್ದರಿಂದ, ಆ ಬಾರ್ಬಾರೋಸೊ ವ್ಹಿನ್ಸನ್ನನು ಮತ್ತಿಷ್ಟು ಗಾಬರಿಯಾದನು. ಸೆರೆಯಲ್ಲಿ ಸಿಕ್ಕುಳಿದ ಯಾವ ಜನರೂ ಇವನಷ್ಟು ಚಿಂತೆ ಮಾಡುತ್ತಿರಲಿಲ್ಲ. ಯಾವ ಮಾತು ಅಶಕ್ಯವಿರುವದೋ, ಅಂಥ ಮಾತಿನ ಸಲುವಾಗಿ ವೃಥಾ ಚಿಂತೆ ಮಾಡಿ ಪ್ರಯೋಜನವೇನೆಂದು ಕೆಲವರು ತಿಳಿಯುವರು. ಆದರೆ ಕೆಲವು ಜನ ಅಂಜುಬುರುಕರು ಕೈಲಾಗದ ಮಾತಿಗೆ ಸುಮ್ಮನೆ ಚಿಂತಿಸಿ, ಶಕ್ತಿಪಾತವನ್ನು ಮಾಡಿಕೊಳ್ಳುವರು. ಬಾರ್ಬಾರೋಸೊವ್ಹಿನ್ಸನ್ನನು ಇಂಥ ಜನರಲ್ಲಿಯೇ ಒಬ್ಬನಾಗಿದ್ದನು. ಅವನಿಗೆ ಎಳ್ಳಷ್ಟೂ ಸಮಾಧಾನವಿದ್ದಿಲ್ಲ. ಕೂತರೆ ಚಿಂತೆ; ನಿಂತರೆ ಚಿಂತೆ; ಮಲಗಿದರೆ ಚಿಂತೆ; ಸರ್ವದಾ ಚಿಂತೆಯೆಂಬ ಚಿತೆಯಿಂದ ಅವನ ಶರೀರವು ಬೆಯ್ಯಲಾರಂಭಿಸಿತು. ಅವನು ಧರ್ಮಾಂತರ ಮಾಡುವಾಗ ಹಿಂದುಗಳಿಗೆ ಯಾವ ಹಿಂಸೆ ಕೊಟ್ಟಿದ್ದನೋ, ಅದರ ಯೋಗ್ಯ ಪ್ರತಿಫಲವು ಈಗ ಅವನಿಗೆ ಅಶಾಂತಿಯ ರೂಪದಿಂದ ದೊರಕಿದಹಾಗಾಗಿತ್ತು.

ಒಂದು ದಿನ ಕೈದಿಗಳಿಗೆ ಅನ್ನ-ನೀರು ಕೊಡಹೋದಾಗ ರಘುನಾಥನೂ ಹೋಗಿದ್ದನು; ಹಾಗು ಅವನ ಸಂಗಡ ಆಂಗ್ರೇಬಂಧುಗಳು ಕೈದಿಗಳ ಸ್ಥಿತಿಯನ್ನು ನೋಡಹೋಗಿದ್ದರು. ರಘುನಾಥನು ಆ ಕ್ರಿಸ್ತಿಧರ್ಮಾಧಿಕಾರಿಯನ್ನು ಅವರಿಗೆ ತೋರಿಸಿ— ಈ ಗಡ್ಡದ ಮನುಷ್ಯನು ಮಹಾನೀಚನಾಗಿದ್ದಾನೆ. ನಾವು ಕಿಲ್ಲೆಯಲ್ಲಿ ಗುಪ್ತಹೇರರಾಗಿದ್ದಾಗ ಈತನ ದುಷ್ಕೃತಿ

ಗಳನ್ನು ದಿನಾಲು ನೋಡುತ್ತಿದ್ದೆವು. ಹಿಂದೂ ಕೈದಿಗಳಿಗೆ ಇವನು ಕೊಡು ತ್ತಿದ್ದ ಹಿಂಸೆಯು ವರ್ಣಿಸಲಶಕ್ಯವಾಗಿರುವದು. ಹಾಯ್! ಹಾಯ್! ಇವನಂಥ ಕಟುಕನು ಹುಟ್ಟಿ ಬೆಳೆಯಲಿಕ್ಕೆ ಅಪರೂಪವೇ ಸರಿ! ಇಂಥವನು ಹ್ಯಾಗೆ ಧರ್ಮಾಧಿಕಾರಿ ಪದವಿಗೆ ಬಂದಿರುವನೋ ತಿಳಿಯದು! ಎಂದು ಹೇಳಿದನು. ಆಗ ಆ ಆಂಗ್ರೆ ಬಂಧುಗಳು:—

"ಈ ಜನರಿಗೆ ಧರ್ಮದ ಹುಚ್ಚು ಬಹಳ; ಸ್ವಧರ್ಮವನ್ನು ಹಬ್ಬಿಸು ವದಕ್ಕೆ ಇವರು ಅನ್ಯ ಧರ್ಮದವರನ್ನು ಕಾಡುವರು. ಕೆಲವು ತಾಮಸೀ ಸ್ವಭಾವದವರು ಕ್ರೂರ ಕೃತ್ಯಗಳನ್ನಾದರೂ ಆಚರಿಸಿ, ತಮ್ಮ ಧರ್ಮದ ಪ್ರಸಾರವನ್ನು ಮಾಡಹೋಗುವರು ಹ್ಯಾಗಾದರೂ ಆಗಲಿ ತಮ್ಮ ಧರ್ಮ ವನ್ನು ಬಹು ಜನರು ಸ್ವೀಕರಿಸಿದರೆ ತೀರಿತೆಂದು ಅವರ ಅಭಿಪ್ರಾಯವು."

ಛೇ, ಛೇ, ಇಂಥ ಧರ್ಮಹುಚ್ಚರನ್ನು ನಾನು ನೋಡಿದ್ದು ಇದೇ ಮೊದಲು. ಫಿರಂಗೀ ಜನರು ತಮ್ಮ ಧರ್ಮಪ್ರಸಾರಕ್ಕಾಗಿ ಹಿಂದೂ ಜನ ರಿಗೆ ಹೀಗೆ ಹಿಂಸೆ ಕೊಡುವರೆಂಬದರ ಕಲ್ಪನೆಯೇ ನನಗಿದ್ದಿಲ್ಲ. ಪ್ರತ್ಯಕ್ಷ ನೋಡಿ ಬಹಳ ಸಂತಾಪವಾಯಿತು. ಈ ಗಡ್ಡದವನನ್ನು ಚಿತ್ರಹಿಂಸೆ ಪಡಿಸಿ ಕೊಲ್ಲಬೇಕೆಂಬ ಸಿಟ್ಟು ನನಗುಂಟಾಗಿದೆ."

ಈ ಮೇರೆಗೆ ರಘುನಾಥನು ಮಾತಾಡುತ್ತಿರಲು, ಅವನ ಮೋರೆಯು ಅತ್ಯುಗ್ರವಾಯಿತು. ಅವನ ಕಣ್ಣುಗಳು ಆರಕ್ತವಾದವು. ತುಟಿಗಳು ನಡುಗಲಾರಂಭಿಸಿದವು. ಈಗಲೆ ಆ ಫಿರಂಗೀ ಧರ್ಮಾಧಿಕಾರಿಯ ಪಾರು ಪತ್ಯ ಮಾಡಿಬಿಡುವನೋ ಎಂಬಂತೆ ತೋರಿದನು. ರಘುನಾಥನು ಹೀಗೆ ಉಗ್ರನಾದದ್ದನ್ನು ನೋಡಿ, ಆ ಕ್ರಿಸ್ತಿ ಧರ್ಮಾಧಿಕಾರಿಯು ಅಂಜಿದನು. ರಘುನಾಥನು ತನ್ನ ಬಳಿಗೆ ಬಂದನೆಂದರೆ ಲಕ್ಷವೆಲ್ಲ ಅವನ ಕಡೆಗೇ ಇರು ತ್ತಿತ್ತು. ಈ ಮಹಾರಾಯನು ಏನು ಮಾಡುವನೋ ಎಂದು ಅವನು ಬಹಳವಾಗಿ ಅಂಜುತ್ತಿದ್ದನು. ಹೀಗಿರಲು ಈದಿನ ರಘುನಾಥನು ಅತ್ಯುಗ್ರ ನಾಗಿ ತೋರಲು, ಆ ಗಡ್ಡದ ಧರ್ಮಾಧಿಕಾರಿಯು ಬಹಳವಾಗಿ ಅಂಜಿ ದನು. ಈದಿನ ತನ್ನ ಅಂತವಾಗುವದೆಂದು ಅವನು ಖಂಡಿತವಾಗಿ ತಿಳಿ ದನು. ಇಷ್ಟೊಂದು ಸಿಟ್ಟಿಗೆದ್ದ ರಘುನಾಥನು ತನ್ನನ್ನು ಸಂಹರಿಸದೆ ಬಿಡ ಲಾರನೆಂಬ ದೃಢಭಾವನೆಯು ಅವನಲ್ಲುದಯಿಸಿತು. ಕೂಡಲೆ ಅವನ ಮುಖವು ದೀನವಾಯಿತು. ಕಣ್ಣುಗಳಲ್ಲಿ ಅಶ್ರುಗಳಾಡಿದವು. ಏನೋ

ಮಾತಾಡಬೇಕೆಂದು ನಾಲಿಗೆಯು ಹಾತೊರೆಯಲಾರಂಭಿಸಿತು. ಆದರೆ ತನ್ನ ಮಾತು ಈ ಜನರಿಗೆ ತಿಳಿಯುತ್ತದೋ ಇಲ್ಲವೋ ಎಂಬ ಸಂಶಯವು ಬರಲು, ಅವನು ಮಾತಾಡುವ ಗೊಡವೆಯನ್ನು ಬಿಟ್ಟು ಬರಿಯ ಸನ್ನೆಯಿಂದ ತನ್ನ ಮನದಾಸೆ ತಿಳಿಸುವ ಸಾಹಸಕ್ಕೆ ಬಿದ್ದನು. ಆಗಲವನು ರಘುನಾಥನ ಚರಣಗಳನ್ನು ಹಿಡಿಯ ಹವಣಿಸಿ ಶೃಂಖಲೆಯಿಂದ ಪರಾಧೀನನಾಗಿದ್ದರೂ, ಕಷ್ಟಬಟ್ಟು ಅವನ ಬಳಿಗೆ ಬಂದು ಅವನ ಮುಂದೆ ದೈನ್ಯದಿಂದ ಉರುಳಾಡಹತ್ತಿದನು; ಹಾಗು ನೆಲಕ್ಕೆ ಕೈಹಚ್ಚಿ ತನ್ನ ಹಣೆಗೆ ಹಚ್ಚಿಕೊಳ್ಳಲಾರಂಭಿಸಿದನು; ಮತ್ತು ತನಗೆ ಯಾವ ರೀತಿಯಿಂದಲೂ ಅಪಾಯ ಮಾಡದೆ ಜೀವದಾನ ಕೊಡಬೇಕೆಂಬ ಭಾವವನ್ನು ತೋರ್ಪಡಿಸಲಾರಂಭಿಸಿದನು. ಅವನು ಮಾಡುವ ಆ ಹಾವಭಾವಗಳನ್ನು ತಿಳಿದು ರಘುನಾಥನಿಗೂ, ಆಂಗ್ರೇ ಬಂಧುಗಳಿಗೂ ಹುಚ್ಚು ನಗೆ ಬಂದಿತು. ಅವರು ಜೀವಗಳ್ಳರ ಸ್ಥಿತಿಯು ಹ್ಯಾಗಿರುತ್ತದೆಂಬದನ್ನು ನೋಡಿ ಹಾಸ್ಯಮಾಡಲಾರಂಭಿಸಿದರು. ಅವರು ಹಾಸ್ಯಮಾಡಿದ ಹಾಗೆ ಆ ಜೀವಗಳ್ಳ ಧರ್ಮಾಧಿಕಾರಿಯ ಸ್ಥಿತಿಯು ಮತ್ತಿಷ್ಟು ಶೋಚನೀಯವಾಗತೊಡಗಿತು. ಅವರು ಯಾಕೆ ನಗುವರೆಂಬ ಕಾರಣವು ಅವನಿಗೆ ಗೊತ್ತಾಗದ್ದರಿಂದ ತನ್ನ ಶಿರಚ್ಛೇದವನ್ನು ಮಾಡಲು ಅವರು ಇಷ್ಟೊಂದು ಹರುಷಪಡುವರೋ ಹ್ಯಾಗೆಂಬದು ಅವನಿಗೆ ಸಂಶಯು ಬರಲಾರಂಭಿಸಿತು. ಇದರಿಂದ ಅವನು ಅತ್ಯಂತ ದೈನ್ಯವನ್ನು ತಾಳಿದನು. ಬಾಯಿಂದ ದೈನ್ಯೋಕ್ತಿಗಳನ್ನಾಡತೊಡಗಿದನು. ಆದರೆ ಅವನ ಭಾಷೆಯು ಅವರಿಗೆ ತಿಳಿಯದ್ದರಿಂದ ಅವರ ವಿನೋದಕ್ಕೆ ಮತ್ತಿಷ್ಟು ಕಳೆಯೇರಿತು. ಈ ಮರ್ಕಟನು ಹ್ಯಾಗೆ ಹಲ್ಲು ತೆಗೆದು ಮಾತಾಡುವನು? ತನ್ನ ಜೀವದ ಮೇಲೆ ಈಗ ಪ್ರಸಂಗ ಬಂದದ್ದರಿಂದ ಹ್ಯಾಗೆ ದೈನ್ಯ ತೋರಿಸುವನು? ಎಂದು ನುಡಿಯುತ್ತ ರಘುನಾಥನು ಕೈಯೊಳಗಿನ ಕೋಲಿನಿಂದ ಆತನಿಗೆ ಒಂದು ಏಟನ್ನು ಕೊಟ್ಟನು. ಮತ್ತು ಬಾಯಿಂದ—ಮೂರ್ಖಾ, ಸುಮ್ಮನೆ ಯಾಕೆ ದೈನ್ಯ ತೋರಿಸುವೆ? ನಿನ್ನನ್ನು ನಾವೇನು ಈಗ ಕೊಲ್ಲುವದಿಲ್ಲ. ನಿನ್ನನ್ನು ಕೊಲ್ಲುವ ಮುಹೂರ್ತವು ಇನ್ನೂ ದೂರವದೆ. ಈಗ ನಿನಗೆ ಹ್ಯಾಗೆ ದುಃಖವಾಗುವದೋ ಹಾಗೆ ನೀನು ಹಿಂಸೆಪಡಿಸುವಾಗ ಹಿಂದುಗಳಿಗೂ ದುಃಖವಾಗುತ್ತಿರಬಹುದೆಂಬ ಕಲ್ಪನೆಯು ನಿನ್ನಲ್ಲಿ ಉದಯಿಸಿದ್ದರೆ ಇಷ್ಟೆಲ್ಲ ಅನರ್ಥವೆಲ್ಲಿಯಾಗುತ್ತಿತ್ತು? ದೇವರು ನ್ಯಾಯಿಯಿರು

ಪನು. ಅವನು ಅನ್ಯಾಯಗಳನ್ನು ನಡೆಯಗೊಡಲಾರನು. ಅನ್ಯಾಯವನ್ನು ಅವಲಂಬಿಸಿದವರು ಇಂದಿಲ್ಲ ನಾಳೆಯಾದರೂ ದುಃಖಭಾಗಿಗಳಾಗುವದು ನಿಶ್ಚಿತವು. ನಿನ್ನ ಕರ್ಮವೇ ನಿನಗೆ ಹಿಂಸೆ ಕೊಡುತ್ತದಲ್ಲದೆ, ಅನ್ಯರಾರೂ ನಿನಗೆ ಹಿಂಸೆ ಕೊಡಲಾರರು, ಎಂದು ನುಡಿದನು. ರಘುನಾಥನು ಈ ಭಾಷಣವನ್ನು ಹಿಂದಿಯಲ್ಲಿ ಮಾಡಿದನು. ಹಿಂದಿಯು ಆ ಧರ್ಮಾಧಿಕಾರಿಗೆ ತಿಳಿಯದಿದ್ದರೂ, ಆ ಫಿರಂಗೀ ಸೆರೆಯಾಳುಗಳಲ್ಲಿ ಒಬ್ಬನಿಗೆ ತಿಳಿಯುತ್ತಿತ್ತು. ಆದ್ದರಿಂದ ಅವನು ಅಲ್ಲಿಂದಲೇ ರಘುನಾಥನಿಗೆ ಸಲಾಮು ಮಾಡಿ ವಿನಯದಿಂದ—ನೀವು ದಯಾಳುಗಳಿರುವಿರಿ. ಯಾಕಂದರೆ ನೀವು ನಮ್ಮ ಫಿರಂಗೀ ಸ್ತ್ರೀಯರನ್ನೂ, ಹುಡುಗರನ್ನೂ ಬಂಧಮುಕ್ತಮಾಡಿ ನಿಮ್ಮ ಔದಾರ್ಯವನ್ನು ವ್ಯಕ್ತಗೊಳಿಸಿರುತ್ತೀರಿ. ಈಬಗ್ಗೆ ನಾವು ನಿಮಗೆ ತುಂಬಾ ಕೃತಜ್ಞರಾಗಿರುವೆವು. ನೀವು ಸೆರೆ ಸಿಕ್ಕ ನಮ್ಮನ್ನು ಕೊಂದರೂ ನಮಗೆ ಸಂತೋಷವು; ಬಿಟ್ಟರೂ ಸಂತೋಷವು. ನಮ್ಮ ಜೀವದ ಅಂಜಿಕೆಯು ನಮಗಿಲ್ಲ. ಮುಖ್ಯವಾಗಿ ನೀವು ಶತ್ರುಗಳಾದರೂ ನಿಮ್ಮ ಶೀಲವು ನಮ್ಮ ಮನಸ್ಸಿಗೆ ತುಂಬಾ ಬಂದಿರುತ್ತದೆ. ನಿಮ್ಮಷ್ಟು ದಯಾಳುತನವನ್ನು ನಾವು ಯುದ್ಧದಲ್ಲಿ ಸೆರೆ ಸಿಕ್ಕವರ ವಿಷಯವಾಗಿ ತೋರಿಸಲಾರೆವು. ಇದು ನಿಜವಾದದ್ದು; ಈ ಮಾತನ್ನು ನಿಮ್ಮ ಸಂತೋಷಾರ್ಥವಾಗಿ ಆಡುತ್ತೇನೆಂದು ಮಾತ್ರ ತಿಳಿಯಬೇಡಿರಿ. ಇದ್ದ ಸ್ಥಿತಿಯನ್ನು ಆಡಿರುವೆನು. ಈ ನಮ್ಮ ಧರ್ಮಾಧಿಕಾರಿಗಳು ಮಾತ್ರ ಬಹಳ ಅಂಜುಬುರುಕರಿರುತ್ತಾರೆ. ಇವರಿಗೆ ಜೀವವು ಬೆಲ್ಲಕ್ಕಿಂತಲೂ ಸವಿಯಾಗಿ ತೋರುತ್ತದೆ. ಯಾಕಂದರೆ ಇವರಲ್ಲಿ ಶೌರ್ಯವು ಇಲ್ಲ; ಪೌರುಷವಿಲ್ಲ; ಸದಭಿಮಾನವಿಲ್ಲ; ಧರ್ಮದ ದುರಭಿಮಾನ ಮಾತ್ರ ತುಂಬಿಕೊಂಡಿರುತ್ತದೆ. ಈ ಮಹಾರಾಯನಿಂದಲೇ ನಾವು ನಿಮಗೆ ದ್ವೇಷಿಗಳಾಗಬೇಕಾಯಿತು. ಇವರು ಧರ್ಮದ ದುರಭಿಮಾನಕ್ಕೆ ಬಿದ್ದು ಹಿಂದುಗಳಿಗೆ ಹಿಂಸೆ ಕೊಡದಿದ್ದರೆ, ನಮ್ಮ ಗೊಡವೆಗೆ ನೀವು ಬರುತ್ತಿದ್ದಿಲ್ಲ. ಇರಲಿ, ಆದ ಮಾತಿಗೆ ಚಿಂತಿಸಿ ಪ್ರಯೋಜನವಿಲ್ಲ. ಈಗ ನಿಮಗೆ ನಾವು ಹೇಳಿಕೊಳ್ಳುವದೇನೂ ಇರುವದಿಲ್ಲ. ಹೀಗೆ ಹೇಳಿಕೊಳ್ಳುವದು ಶೂರರ ಕೆಲಸವೂ ಅಲ್ಲ. ಹೇಡಿಗಳು ಮಾತ್ರ ಬದುಕಬೇಕೆಂಬ ಆಶೆಯಿಂದ ಹೇಳಿಕೊಳ್ಳುವರು. ನಮ್ಮಲ್ಲಿ ಈ ಧರ್ಮಾಧಿಕಾರಿಯೊಬ್ಬನು ಇಂಥ ಸ್ವಭಾವದವನಿರುತ್ತಾನೆ. ಈತನು ಪುರುಷನಾಗಿದ್ದರೂ, ಹೆಂಗಸರಿಗಿಂ

ತಲೂ ಕಡೆಯಾಗಿರುವನು. ಈತನೊಬ್ಬನನ್ನು ಸ್ತ್ರೀಯೆಂದು ತಿಳಿದು ಬಂಧ ಮುಕ್ತಮಾಡಿಬಿಡುವದು ಯುಕ್ತವಾಗಿದೆ. ನಿಮ್ಮ ಮನಸ್ಸಿಗೆ ಬಂದರೆ ಈ ಕೆಲಸ ಮಾಡಬಹುದು; ಇಲ್ಲದಿದ್ದರೆ ಬಿಡಬಹುದು. ನಾವು ಸೂಚನೆ ಮಾತ್ರ ನಿಮಗೆ ಕೊಟ್ಟಿರುತ್ತೇವೆ. ಇಂಥ ರಣಹೇಡಿಯನ್ನು ಸೆರೆಯಿರಿಸಿ ದರೆ ನಿಮಗೆ ಆಗುವ ಪ್ರಯೋಜನವಾದರೂ ಏನು?'' ಎಂದು ನುಡಿದನು.

ಆ ಫಿರಂಗೀ ಸೆರೆಯಾಳುವು ಹೀಗೆ ಹಿಂದೀಭಾಷೆಯಲ್ಲಿಯೇ ಮಾತ ನಾಡಲು ರಘುನಾಥನಿಗೂ ಆಂಗ್ರೆಬಂಧುಗಳಿಗೂ ತುಂಬಾ ಆಶ್ಚರ್ಯವಾ ಯಿತು. ಸೆರೆಸಿಕ್ಕ ಈ ಜನರು ಹೀಗೆ ಮಾತಾಡುವದೆಂದರೆ ಇವರಲ್ಲಿ ಸ್ವಾಭಿಮಾನ ಪೌರುಷ ಪ್ರಿಯತೆಗಳು ಎಷ್ಟಿರಬಹುದು? ಇಂಥವರು ಕೋಟೆ ಯನ್ನು ನಿರಾಯಾಸವಾಗಿ ಕೈಸೇರಗೊಡಬಹುದೇ? ಇವರು ಇಷ್ಟು ಧೈರ್ಯ ಶಾಲಿಗಳಿರುವರೆಂತಲೇ ಸಾವಿರಾರು ಮೈಲುಗಳಾಚೆಯಿಂದ ಇಲ್ಲಿಗೆ ಬಂದಿರು ವರು. ಶಾಬಾಸ್! ಇವರ ಈ ವೀರವೃತ್ತಿಯನ್ನು ಹೊಗಳಬಹುದು. ಎಂದು ತಮ್ಮತಮ್ಮೊಳಗೆ ಮಾತನಾಡಿಕೊಂಡು ಆ ಫಿರಂಗೀ ಸೆರೆಯಾಳನ್ನು ಕುರಿತು—ಈ ಗಡ್ಡದವನು ನಿಮ್ಮ ಧರ್ಮಗುರುವೇನು? ಇವನು ಏನು ಅನ್ನುವನು? ಇದನ್ನು ನಮಗೆ ಸ್ಪಷ್ಟವಾಗಿ ತಿಳಿಸು ಎಂದು ನುಡಿದರು. ಆಗ ಆ ಸೆರೆಯಾಳುವು—ಈತನಿಗೆ ಬೇರೆ ಏನು ಬೇಕಾಗಿರುವದಿಲ್ಲ. ಜೀವ ದಾನವು ಬೇಕು. ಅದಕ್ಕಾಗಿಯೇ ಅಂಗಲಾಚಿ ನಿಮಗೆ ಬೇಡಿಕೊಳ್ಳುತ್ತಿರು ವನು. ಎಂದು ನುಡಿದನು.

ಆ ಧರ್ಮಾಧಿಕಾರಿಯು ಸಾವಿಗೆ ಅಂಜಿ ಹೀಗೆ ಕೈಕಾಲು ಕಟ್ಟಿಕೊ ಳ್ಳುವನೆಂಬದು ರಘುನಾಥನಿಗೆ ಗೊತ್ತಾಗಿದ್ದರೂ ಆ ಫಿರಂಗೀ ಸೆರೆಯಾಳು ವಿನ ಮಾತಿನಿಂದ ನಿಸ್ಸಂಶಯವಾಯಿತು. ಆಗ ರಘುನಾಥನ ಮನಸ್ಸಿನಲ್ಲಿ ಆ ಪುಕ್ಕಗಡ್ಡದವನನ್ನು ಮತ್ತಿಷ್ಟು ಅಂಜಿಸಬೇಕೆಂಬ ವಿಚಾರವು ಬಂದಿತು. ಅಂಜುವವರ ಮೈಮೇಲೆ ಕಪ್ಪೆ ಚಲ್ಲಹೋಗುವದು ವಿನೋದೀ ಸ್ವಭಾವದ ವರಿಗೆ ಒಳ್ಳೇ ಪ್ರೀತಿಯ ಕೆಲಸವಷ್ಟೇ; ಅದರಂತೆ ವಿನೋದಪ್ರಿಯನಾದ ರಘುನಾಥನ ಹೌಸು ಹೆಚ್ಚಿತು. ಬೆಕ್ಕಿಗೆ ಆಟ ಇಲಿಗೆ ಪ್ರಾಣಸಂಕಟವೆಂಬ ಗಾದೆಯು ಸಮಾಚಾರವಾಯಿತು. ರಘುನಾಥನಿಗೆ ಆಟವಾದರೂ ಆ ಬಾರ್ಥಾರೋಸೋವ್ಹೆನ್ಸ್ಝನಿಗೆ ಪ್ರಾಣಸಂಕಟವಾಗಿ ಪರಿಣಮಿಸಿತು. ಕೂಡಲೆ ರಘುನಾಥನು ಆಂಗ್ರೆಬಂಧುಗಳನ್ನು ಅಲ್ಲಿಯೇ ಕುಳ್ಳಿರಿಸಿ ತಾನು ಖಡ್ಗವನ್ನು

ತಂದದ್ದಲ್ಲದೆ ಭಯಂಕರಆಕಾರದ ಎರಡು ನಾಯಿಗಳನ್ನೂ ಹಿಡಿದುತಂದನು. ಅವನು ಆ ಖಡ್ಗವನ್ನು ಆ ಧರ್ಮಾಧಿಕಾರಿಯ ಬಳಿಗೆ ತರಲು ಅದನ್ನೂ ಆ ನಾಯಿಗಳನ್ನೂ ನೋಡಿ ಆತನ ಹಲ್ಲಣವೇ ಹಾರಿಹೋಯಿತು. ಇನ್ನು ಇವನು ಖಡ್ಗದಿಂದ ತನ್ನ ಅವಯವಗಳನ್ನು ಛೇದಿಸಿ ಈ ನಾಯಿಗಳಿಗೆ ತಿನ್ನಿಸುವನು ಇಲ್ಲವೆ ಈ ನಾಯಿಗಳಿಂದಲೇ ನನ್ನ ಮಾಂಸರಕ್ತಗಳನ್ನು ಹೀರಿಸುವನು ಎಂಬ ಭಯಂಕರ ಕಲ್ಪನೆಗಳು ಅವನಲ್ಲುತ್ಪನ್ನವಾದವು. ಕ್ಷಣ ಹೊತ್ತು ಅವನು ಮೂರ್ಛಾವಸ್ಥೆಯನ್ನು ಹೊಂದಿದನು. ಬಳಿಕ ಅವನು ಕಣ್ಣು ತೆರೆದು ನೋಡಲು ಮತ್ತೆ ಖಡ್ಗ ಹಾಗು ನಾಯಿಗಳು ದೃಷ್ಟಿಗೆ ಬಿದ್ದವು. ಆಗ ಅವನಿಂದ ಭಾವೀ ದುಃಖವನ್ನು ಸಹಿಸುವದಾಗಲಿಲ್ಲ. ಮರ್ಕಟನಂತೆ ಹಲ್ಲುಕಿರಿದು ದೊಡ್ಡ ದನಿಯಿಂದ ಅಳಲಾರಂಭಿಸಿದನು. ಎರಡೂ ಕೈಗಳನ್ನು ಮೇಲಕ್ಕೆತ್ತಿ ರಘುನಾಥನ ಮುಂದೆಬಿದ್ದು ಹೊರಳಾಡಲಾರಂಭಿಸಿದನು. ನನ್ನನ್ನು ಕೊಲ್ಲಬೇಡಿರಿ, ಸರ್ವಥಾ ಕೊಲ್ಲಬೇಡಿರಿ. ಈ ನಾಯಿಗಳಿಂದ ನನ್ನ ಮಾಂಸ ರಕ್ತಗಳನ್ನು ಹರಿಸಬೇಡಿರಿ, ಎಂದು ನುಡಿಯುತ್ತ ವಿಲಕ್ಷಣ ದೈನ್ಯವನ್ನು ವ್ಯಕ್ತಪಡಿಸಲಾರಂಭಿಸಿದನು. ಅವನ ಅಧೀರತನವನ್ನು ನೋಡಿ ರಘುನಾಥನು ಬಿದ್ದು ಬಿದ್ದು ನಗಲಾರಂಭಿಸಿದನು. ಆಗ ಆತನ ದೈನ್ಯವನ್ನು ನೋಡಿ ಆಂಗ್ರೆಬಂಧುಗಳಿಗೆ ಕರುಣೆ ಹುಟ್ಟಿತು. ಹಾಯ್! ಹಾಯ್! ಪ್ರಾಣಿಗಳಿಗೆ ಬದುಕಬೇಕೆಂಬ ಆಶೆ ಬಹಳ, ಎಂಥ ಅಸಹ್ಯ ವೇದನೆಗಳನ್ನು ಸಹಿಸಿಯಾದರೂ ಮನುಷ್ಯನು ಜೀವಿಸಲು ಸಿದ್ಧನಾಗಿರುವನು. ಅಂದಬಳಿಕ ಈ ಗಡ್ಡದ ಫಿರಂಗಿಯು ಮರಣಕ್ಕೆ ಅಂಜಿ ಹೀಗೆ ದೈನ್ಯ ತೋರಿಸುತ್ತಿರುವದರಲ್ಲಿ ಆಶ್ಚರ್ಯವೇನು? ಎಲ್ಲರಿಗೂ ಜೀವವು ಬೆಲ್ಲಕ್ಕಿಂತಲೂ ಸವಿ. ಎಂದು ಯೋಚಿಸಿ ರಘುನಾಥನಿಗೆ ಸನ್ನೆ ಮಾಡಿ ಆತನನ್ನು ಅಲ್ಲಿಂದ ಕರೆದುಕೊಂಡು ನಡೆದರು. ಇತ್ತ ಆ ಧರ್ಮಾಧಿಕಾರಿಯು ಗದಗದ ನಡುಗುತ್ತ ಈ ರಾಕ್ಷಸರ ಕೈಯೊಳಗಿಂದ ಹ್ಯಾಗೆ ಪಾರಾದೇನು? ಎಂದು ಚಿಂತಿಸುತ್ತ ಪ್ರಸ್ತುತದಲ್ಲಿಯ ಸಂಕಟವು ನಿವಾರಣವಾದದ್ದಕ್ಕೆ ಸ್ವಲ್ಪ ಸಮಾಧಾನವನ್ನು ಹೊಂದಿದನು.

---

# (೧೯) ಗುಪ್ತಕಾರಸ್ಥಾನ.

ಚಿಮಣಾಜಿ ಅಪ್ಪಾಜಿಯ ಬಲವಾದ ಮುತ್ತಿಗೆಯಿಂದ ಕೋಟೆಯೊಳಗಿನ ಫಿರಂಗಿಗಳು ತತ್ತರಿಸುತ್ತಿರಲು ಅವರಿಗೆ ಅನ್ನಸಾಮಗ್ರಿಯ ಕೊರತೆಯು ಬಹಳವಾಯಿತು. ಚಲೋ ಆಹಾರವು ಸಿಗದ್ದರಿಂದ ದಂಡಾಳುಗಳಲ್ಲಿ ಅವ್ಯವಸ್ಥೆಯುಂಟಾಗಲಾರಂಭಿಸಿತು. ಮರಾಟರೊಡನೆ ಯುದ್ಧವ ಮಾಡಿ ಪಾರಾಗಲಾರೆವೆಂಬ ಅರಿವು ಎಲ್ಲ ಫಿರಂಗಿಗಳಿಗೆ ಉಂಟಾಗಿದ್ದರೂ ಅವರು ಸ್ವಾಭಿಮಾನಕ್ಕೆ ಬಿದ್ದು ಬಡಿದಾಡುವದನ್ನು ನಿಶ್ಚಯಿಸಿದ್ದರಿಂದ ಬಂದ ಕಷ್ಟವನ್ನು ಅನುಭವಿಸಲೇಬೇಕಾಗಿತ್ತು. ಕೋಟೆಯ ಬಾಗಿಲ ತೆರೆದು ಎಲ್ಲರೂ ಒಮ್ಮೆಲೆ ಶತ್ರುಗಳ ಮೈಮೇಲೆ ಬಿದ್ದು ಧಾರಾತೀರ್ಥದಲ್ಲಿ ಪತನ ಹೊಂದಬೇಕು, ಎಂಬ ವಿಚಾರಗಳು ಒಮ್ಮೊಮ್ಮೆ ಅವರ ಮನಸ್ಸಿನಲ್ಲಿ ಬರುತ್ತಿದ್ದವು. ಆದರೆ ರಜಪೂತ ವೀರರಂತೆ ಹಾಗೆ ಮಾಡುವ ಧೈರ್ಯವು ಅವರಿಗೆ ಉಂಟಾಗಲಿಲ್ಲ. ಶತ್ರುಗಳನ್ನು ಹ್ಯಾಗೆ ಹಣ್ಣಿಗೆ ತರಬೇಕೆಂದು ಅವರು ಬಗೆ ಬಗೆಯ ಹಂಚಿಕೆಗಳನ್ನು ಹಾಕಲಾರಂಭಿಸಿದರು.

ಹೀಗೆ ಕಿಲ್ಲೆಯೊಳಗಿನ ಫಿರಂಗಿಗಳು ಶತ್ರುಗಳನ್ನು ಜೇರಿಗೆ ತರುವ ಉಪಾಯಗಳನ್ನು ಚಿಂತಿಸುತ್ತಿರಲು, ಕಿಲ್ಲೆಯೊಳಗೆ ಒಂದು ಬಗೆಯಿಂದ ಅರಾಜಕತೆಯೇ ಉಂಟಾದಂತಾಗಿತ್ತು. ಕೈದಖಾನೆಯ ಜನರನ್ನೆಲ್ಲ ಅವರವರ ಯೋಗ್ಯತೆಯಂತೆ ದುಡಿಯಲಿಕ್ಕೆ ಹಚ್ಚಿದ್ದರು. ನಮ್ಮ ಪಿಂಪಳ ಗ್ರಾಮದ ನಿಳೋಜಿಗೂ, ಪುರುಷವೇಷಧಾರಿಣಿಯಾದ ಚಂದ್ರಾತರುಣಿಗೂ ಮದ್ದಿನ ಖಜಾನೆಯ ಸಂರಕ್ಷಣೆಯ ಕೆಲಸವನ್ನು ಕೊಟ್ಟಿದ್ದರು. ಸೆರೆಯಾಳುಗಳಾದ ಇವರಿಗೆ ಇಂಥ ಮಹತ್ವದ ಕೆಲಸವನ್ನು ಒಪ್ಪಿಸಬಹುದೋ ಎಂಬ ವಿಚಾರಗಳು ಯಾರ ಲಕ್ಷದಲ್ಲಿಯೂ ಬರಲಿಲ್ಲ. ಮೈಮೇಲೆ ಕಠಿಣ ಪ್ರಸಂಗ ಬಂದಾಗ ಎಂಥ ಮನುಷ್ಯನಾದರೂ ಗಾಬರಿಯಾಗುವದು ಸ್ವಾಭಾವಿಕವು. ಆದರೆ ಆ ಗಾಬರಿಯಲ್ಲಿ ಮಾಡಬಾರದ ಕೆಲಸಗಳನ್ನು ಮಾಡಿದರೆ ಕಡೆಗೆ ಅಧಃಪತನವೇ ಗತಿಯಾಗುತ್ತದೆ. ಅದರಂತೆ ಕಿಲ್ಲೆಯೊಳಗಿನ ಫಿರಂಗಿಗಳು ಗಾಬರಿಯಿಂದ ಹಿತಾಹಿತಗಳ ವಿಚಾರವಿಲ್ಲದೆ ಕೆಲಸಮಾಡಿ ಮುಂದಿನ ಅನರ್ಥಕ್ಕೆ ಆಮಂತ್ರಣ ಕೊಟ್ಟುಬಿಟ್ಟರು.

ನಿಳೋಜಿ ಹಾಗು ಚಂದ್ರಾತ್ರರುಣಿಯರು ಮದ್ದಿನ ಖಜಾನೆಯ ಸಂರಕ್ಷಣೆಗೆ ಅಣಿಯಾದರು. ಇಪ್ಪತ್ತು ನಾಲ್ಕು ತಾಸುಗಳ ಪರಿಗೂ ಅವರು ಅಲ್ಲಿಯೇ ಇರಬೇಕಾದ್ದರಿಂದ ಅವರ ಬಿಡಾರವೇ ಆ ಮದ್ದಿನ ಖಜಾನೆಯಾ ಯಿತು. ದಂಡಾಳುಗಳಿಗೆ ಕಿಲ್ಲೇದಾರನ ಅಪ್ಪಣೆಯಂತೆ ಮದ್ದು ತುಂಬಿ ಕೊಡುವ ಕೆಲಸವನ್ನು ನಿಳೋಜಿಯೇ ಮಾಡುತ್ತಿದ್ದನು. ನಿಳೋಜಿ-ಚಂದ್ರಾತ್ರರುಣಿಯರ ಹೊರತು ಆ ಮದ್ದಿನ ಖಜಾನೆಯಲ್ಲಿ ಯಾರೂ ಇಳಿ ಯುತ್ತಿದ್ದಿಲ್ಲ. ದಿನವೊಂದಕ್ಕೆ ಅನುಕೂಲವಾದಾಗ ಮೇನೇಸೀಝುನಾಗಲಿ, ಪೆರಿರಾ ಎಂಬವನಾಗಲಿ ಬಂದು, ಮದ್ದಿನ ಶಿಲಕು ಎಷ್ಟೆಷ್ಟು ಉಳಿಯಿತೆಂಬ ದನ್ನು ಮಾತ್ರ ನೋಡಿ ಹೋಗುತ್ತಲಿದ್ದರು. ಮಿಕ್ಕವರಿಗೆ ಊಟಕ್ಕೆ ಅವ ಕಾಶವಿರದ್ದರಿಂದ ಯಾರೂ ಇತ್ತ ಕಡೆಗೆ ಸುಳಿಯುತ್ತಿದ್ದಿಲ್ಲ.

ವಸಯಿ ಕಿಲ್ಲೆಯೊಳಗಿನ ಮದ್ದಿನ ಖಜಾನೆಯು ಈಶಾನ್ಯಮೂಲೆ ಯಲ್ಲಿತ್ತು. ಅದು ಕೋಟೆಯ ಹೊರಗೋಡೆಗೆ ಹೊಂದಿ ಬಹು ಆಳವಾದ ನೆಲಮನೆಯಾಗಿತ್ತು. ಶತ್ರುಗಳ ತೋಫುಗಳ ಬೆಂಕಿಯ ಮಳೆಯಿಂದ ಮದ್ದಿನ ಸಂಚಯಕ್ಕೆ ಅಪಾಯ ತಟ್ಟಬಾರದೆಂದು ಮದ್ದಿನ ಖಜಾನೆ ಯನ್ನು ಬಹು ಭದ್ರವಾದ ಸ್ಥಳದಲ್ಲಿ ಕಟ್ಟುವರು. ಅದರಂತೆ ವಸಯಿ ಕಿಲ್ಲೆಯಲ್ಲಿಯೂ ಮದ್ದಿನ ಖಜಾನೆಯ ವ್ಯವಸ್ಥೆಯನ್ನು ಬಹು ಭದ್ರವಾಗಿ ಮಾಡಿದ್ದರು. ಪೂರ್ವದ ಆ ಮದ್ದಿನ ಖಜಾನೆಯನ್ನೇ ಫಿರಂಗಿಗಳು ಸರಿ ಪಡಿಸಿಕೊಂಡು ಅಲ್ಲಿ ಮದ್ದಿನ ಸಂಚಯ ಮಾಡಿದ್ದರು. ಆ ಮದ್ದಿನ ಖಜಾ ನೆಯು ಬಹು ವಿಸ್ತೃತವಾದದ್ದಿತ್ತು. ನೆಲದಲ್ಲಿ ಬಹು ಆಳವಾಗಿದ್ದು, ಮೇಲ್ಭಾಗದಲ್ಲಿ ಉತ್ತಮ ಗಚ್ಚಿನಿಂದ ಬಲವಾದ ಗುಮ್ಮಟವನ್ನು ಕಟ್ಟಿ ದ್ದರು. ತೋಫಿನ ಪ್ರಚಂಡ ಆಘಾತಕ್ಕೂ ಆ ಗುಮ್ಮಟವು ಹಣಿಯ ದಷ್ಟು ಭದ್ರವಾಗಿತ್ತು. ಒಳಭಾಗದಲ್ಲಿ ಬಹು ದೊಡ್ಡ ಕಲ್ಲುಗಳನ್ನು ಹಾಕಿ ಗಚ್ಚಿನಿಂದ ಭದ್ರಗೊಳಿಸಿದ್ದರು. ಅದರಲ್ಲಿ ಇಳಿಯಲಿಕ್ಕೆ ಒಂದೇ ಒಂದು ಮುಖವನ್ನು ಬಿಟ್ಟಿದ್ದರು. ಗುಹೆಯ ಮುಖದಂತಿರುವ ಆ ಬಾಗಿಲಲ್ಲಿ ಹೋದ ಮನುಷ್ಯನು ಮೆಟ್ಟಲುಗಳನ್ನಿಳಿದು ಒಳಗೆ ಹೋಗಬೇಕಾಗು ತ್ತಿತ್ತು. ಆ ಖಜಾನೆಯಲ್ಲಿ ಸೂರ್ಯನ ಕಿರಣಗಳ ಪ್ರವೇಶಕ್ಕೆ ಆಸ್ಪದವೇ ಇದ್ದಿಲ್ಲ.

ಇಂತಿರುವ ಆ ಮದ್ದಿನ ಖಜಾನೆಯ ರಕ್ಷಣೆಯ ಕೆಲಸವು ನಿಳೋಜಿಯ

ಪಾಲಿಗೆ ಬರಲು ಅವನು ತಮ್ಮ ಜನರಿಗೆ ಸಹಾಯ ಮಾಡಬೇಕೆಂದು ಯುಕ್ತಿ ಹಾಕಲಾರಂಭಿಸಿದನು. ಮುದ್ದಿನ ಖಜಾನೆಯಲ್ಲಿ ಎಣ್ಣೆಸುರುವಿ ಇಲ್ಲವೆ ಒಮ್ಮೆಲೆ ಕೊಳ್ಳಿಕೊಟ್ಟು ಕೈತೋರಿಸಬೇಕೆಂಬ ವಿಚಾರವು ಬಂದಿತು. ಆದರೆ ಹೀಗೆ ಮಾಡುವದರಿಂದ ವಿಶೇಷ ಪ್ರಯೋಜನವಾಗದೆ ತನಗೆಮಾತ್ರ ಪ್ರಾಣಾಂತಿಕ ಆಪತ್ತು ಪ್ರಾಪ್ತವಾಗುವದು ಎಂಬ ಸಂಶಯವು ಬರಲು ಆತನು ಆ ಆಲೋಚನೆಯನ್ನು ಬಿಟ್ಟು ಬೇರೆ ಹಂಚಿಕೆಹುಡುಕಲಾರಂಭಿಸಿದನು. ಅವನಿಗೆ ಒಂದು ಯುಕ್ತಿಯು ತೋಚಿತು. ಅದನ್ನು ಅವನು ತನ್ನ ತಂಗಿಗೆ ಹೇಳಿದನು. ಆಕೆಗೂ ಅದು ಒಪ್ಪಿಗೆಯಾಯಿತು. ಅದರಂತೆ ಕೆಲಸ ನಡಿ ಸುವದನ್ನು ನಿರ್ಧರಿಸಿದನು.

ನಿಳೋಜಿಯು ಒಳ್ಳೇ ಕಸುವಿನ ಆಳೆಂಬದು ನಮ್ಮ ವಾಚಕರಿಗೆ ಅರಿಯದ ಸಂಗತಿಯಲ್ಲ. ಹಿಂದಕ್ಕೆ ಅವನು ಸೆರೆಮನೆಯಲ್ಲಿದ್ದಾಗ ತಂಗಿಯ ಬಂಧಮುಕ್ತತೆಗಾಗಿ ಕಬ್ಬಿಣಕಟಾಂಜನಗಳನ್ನೇ ಮುರಿದು ಹೊರಬಿದ್ದದ್ದನ್ನು ನಮ್ಮ ವಾಚಕರು ಮರೆತಿರಲಿಕ್ಕಿಲ್ಲ. ಇಂಥ ಸಾಮರ್ಥ್ಯ ಸಂಪನ್ನನಾದ ಅವನು ತನ್ನ ಸಾಮರ್ಥ್ಯಕ್ಕೆ ಅನುರೂಪವಾದ ಕೆಲಸವನ್ನೇ ಆರಿಸಿಕೊಂಡಿದ್ದನು. ಆ ಕೆಲಸಕ್ಕೆ ಬೇಕಾಗುವ ಉಪಕರಣಗಳು ಅವನಿಗೆ ಸುಲಭವಾಗಿ ದೊರೆತವು. ತಾನು ಸಾಮರ್ಥ್ಯಸಂಪನ್ನನಿರುವೆನೆಂಬದು ಅವನಿಗೆ ನಂಬಿಗೆಯಿದ್ದರೂ ಕೆಲಸವು ಒಳ್ಳೇ ಕಠಿಣವಿದ್ದದರಿಂದ ಅವನು ಯೋಚನೆಗೆ ಒಳಗಾದನು. ಆದರೆ ಬಹಳ ಹೊತ್ತು ಯೋಚನೆ ಮಾಡುವಷ್ಟು ದುರ್ಬಲ ಸ್ವಭಾವವು ಅವನಲ್ಲಿಲ್ಲದ್ದರಿಂದ ಕೂಡಲೆ ಆ ಯೋಚನೆಯನ್ನು ಧಿಕ್ಕರಿಸಿ ಇದರಲ್ಲಿ ಯಶಸ್ಸು ನಿಶ್ಚಯವಾಗಿ ಸಿಗುವದೆಂಬ ಭರವಸೆಯಿಂದ ಕೆಲಸಕ್ಕೆ ಪ್ರಾರಂಭಿಸಿದನು. ಮನುಷ್ಯನಿಂದ ಮಹತ್ತರ ಕಾರ್ಯಗಳು ನೆರವೇರಬೇಕಾದರೆ ಅವನಲ್ಲಿ ಅಷ್ಟೊಂದು ಪ್ರಬಲವಾದ ಆತ್ಮವಿಶ್ವಾಸವೇ ಇರಬೇಕಾಗುತ್ತದೆ. ಆತ್ಮವಿಶ್ವಾಸವಿಲ್ಲದೆ ಕಾರ್ಯಮಾಡ ಹೋಗುವವನು ಕೊನೆಮುಟ್ಟಲಾರನು. ನಿಳೋಜಿಯ ಆ ಮಹತ್ವದ ಕಾರ್ಯವೆಂದರೆ ಮುದ್ದಿನ ಖಜಾನೆಯ ಉತ್ತರಭಾಗದ ಗೋಡೆಯನ್ನು ಅಗಿದು ಕೋಟೆಯ ಹೊರಗೆ ಹೋಗುವಂತೆ ಮಾರ್ಗವ ಸಿದ್ಧಪಡಿಸುವದು!

ನಿಜವಾಗಿ ನೋಡಿದರೆ ಈ ಕೆಲಸವು ಅತ್ಯಂತ ಕಠಿಣವಾದದ್ದು, ಸುರಂಗಕ್ಕೆ ಹಣಿಯುದಂಥ ಗೋಡೆಯನ್ನು ಅಗಿದು ಖಂಡಿಯನ್ನು ಕೆಡವುವ

ದೆಂದರೆ ನಿಳೋಜಿಯ ಶಕ್ತಿಗೆ ಮೀರಿದ ಕೆಲಸವಾಗಿತ್ತು. ಆದರೆ ಅತುಲ ವಾದ ದೇಶಭಕ್ತಿಯಿಂದ ಪ್ರೇರಿತನಾದ ಅವನು ತನ್ನ ದೇಹದ ಪರವಿಯ ನ್ನು ಬಿಟ್ಟುಬಿಟ್ಟಿದ್ದನು. ತನ್ನ ಬಾಂಧವರನ್ನು ವಿಲಿವಿಲಿ ಒದ್ದಾಡಿಸಿದ ಈ ಫಿರಂಗೀಜನರ ಪಾರುಪತ್ಯಮಾಡಿ ಸ್ವದೇಶಕ್ಕೆ ಕಲ್ಯಾಣವನ್ನುಂಟುಮಾಡ ಬೇಕೆಂಬ ಉತ್ಕಟೇಚ್ಛೆಯು ಅವನಲ್ಲಿ ನೆಲೆಗೊಂಡಿತ್ತು. ಈ ಉತ್ಕಟೇ ಚ್ಛೆಯಿಂದಲೇ ಅವನು ಆ ಮಹಾಕಾರ್ಯಕ್ಕೆ ಕೈಹಾಕಿದ್ದನು.

ನಿಳೋಜಿಯ ಸ್ವದೇಶವಾತ್ಸಲ್ಯಕ್ಕಿಂತ ಚಂದ್ರಾತರುಣಿಯ ಸ್ವದೇಶ ವಾತ್ಸಲ್ಯವು ವಿಶೇಷವಾಗಿತ್ತು. ಆಕೆಯು ಈ ಕೆಲಸದಲ್ಲಿ ದೇಹಪಾತವಾ ಗುವವರೆಗೆ ಪ್ರಯತ್ನ ಮಾಡಬೇಕೆಂದು ಅಣ್ಣನಿಗೆ ಪ್ರೋತ್ಸಾಹವನ್ನುಂಟು ಮಾಡಿದಳು. ಇಷ್ಟೇ ಅಲ್ಲ ಆಕೆಯು ಅಣ್ಣನಿಗಿಂತಲೂ ಮುಂಚಿತವಾಗಿಯೇ ಒಂದು ದಿನ ರಾತ್ರಿಯಲ್ಲಿ ಆ ಮದ್ದಿನ ಖಜಾನೆಯ ಉತ್ತರಗೋಡೆಯನ್ನು ತೋಡಲಿಕ್ಕೆ ಪ್ರಾರಂಭ ಮಾಡಿದಳು ಆಕೆಯು ಸ್ತ್ರೀಯಾಗಿದ್ದರೂ ಒಳ್ಳೇ ಸಾಹಸಿಯೂ, ಶಕ್ತಿಸಂಪನ್ನಳೂ ಆಗಿದ್ದಳು. ಆಕೆಯು ಯುಕ್ತಿಯಿಂದ ಒಂದೇ ರಾತ್ರಿಯಲ್ಲಿ ಆ ಗೋಡೆಗೆ ಒಂದು ಚಚ್ಚೌಕು ಮೊಳ ಬೊಗದೆಯ ನ್ನು ಕೆಡವಿದಳು. ಆಕೆಯ ಈ ಸಾಹಸದಿಂದ ನಿಳೋಜಿಗೆ ವಿಲಕ್ಷಣ ಸ್ಫೂರ್ತಿಯುಂಟಾಯಿತು. ಬಹು ಬಲವಾದ ಗಚ್ಚಿನ ಗೋಡೆಗೆ ತನ್ನ ತಂಗಿಯು ತೋಡಿದ ಬೊಗದೆಯನ್ನು ನೋಡಿ ಅವನಲ್ಲಿ ಆನಂದ ಆಶ್ಚರ್ಯ ಗಳು ಏಕಕಾಲಕ್ಕೆ ಉಂಟಾದವು. ನಾ ನಾ ಅನ್ನುವ ಗಂಡಸರು ಹದನಾದ ಭಾರವುಳ್ಳ ಹಾರಿಯಿಂದ ಹೊಡೆದರೆ ಒಂದು ಪಣಕಿ ಸಹ ಹಾರದ ಗೋ- ಡೆಗೆ ಚಂದ್ರಾತರುಣಿಯು ಹೀಗೆ ಸಹಜವಾಗಿ ಬೊಗದೆ ತೋಡಬೇಕಾದರೆ ಏನು ಯುಕ್ತಿ ಮಾಡಿರುವಳೋ ಎಂದು ಯೋಚಿಸಿ ಅವನು ಆ ವಿಷಯ ದಲ್ಲಿ ತಂಗಿಯನ್ನು ವಿಚಾರಿಸಿದನು. ತನ್ನ ಕೆಲಸವು ಯಶಸ್ವೀ ಆದದ್ದ ರಿಂದ ಆ ತರುಣಿಯೂ ವಿಲಕ್ಷಣ ಸಂತೋಷವನ್ನು ತಾಳಿದ್ದಳು. ಅಣ್ಣ ನಿಗೆ ತನ್ನ ಯುಕ್ತಿಯನ್ನು ರಹಸ್ಯವಾಗಿ ತಿಳಿಸಬೇಕೆಂದು ಹಾತೊರೆಯುತ್ತಿ ದ್ದಳು. ಆದರೆ ಅಣ್ಣನೇ ಈ ಪ್ರಶ್ನೆಯನ್ನು ಮಾಡಿದ್ದರಿಂದ ಆಕೆಯ ಸಂ- ತೋಷವು ದ್ವಿಗುಣಿತವಾಗಿ ಅವಳು ತನ್ನ ಸಂಗತಿಯನ್ನು ಹೇಳತೊಡಗಿದಳು.

ಗುಡ್ಡುಗಾಡ ಪ್ರದೇಶದವರಿಗೆ ನಾನಾತರದ ವನಸ್ಪತಿಗಳ ಪರಿಚಯ ವಿರುತ್ತದೆ. ಚಿಕಿತ್ಸಕ ಬುದ್ಧಿಯವರಂತೂ ವನಸ್ಪತಿಗಳ ಗುಣಧರ್ಮಗಳನ್ನು

ಚನ್ನಾಗಿ ತಿಳಿದುಕೊಂಡು ಅದರಿಂದ ವ್ಯವಹಾರದಲ್ಲಿ ವಿಶೇಷ ಲಾಭವನ್ನು ಮಾಡಿಕೊಳ್ಳುವರು. ಗುಡ್ಡುಗಾಡು ಪ್ರದೇಶದವಳಾದ ಚಂದ್ರಾತ್ರತರುಣಿಗೆ ಕೆಲವು ವನಸ್ಪತಿಗಳು ಗೊತ್ತಿದ್ದವು. ಅವುಗಳಲ್ಲಿ ಒಂದು ವನಸ್ಪತಿಯು ಕಲ್ಲು ಗಚ್ಚುಗಳಮೇಲೆ ಪ್ರಯೋಗಿಸಿದರೆ ಅವುಗಳ ಕಾಠಿಣ್ಯವು ಅಳಿದು ಹೋಗುವ ಗುಣಧರ್ಮವುಳ್ಳದ್ದಿತ್ತು. ಆ ವನಸ್ಪತಿಯು ಆ ಕಿಲ್ಲೆಯಲ್ಲಿಯೇ ದೊರೆ ತದ್ದರಿಂದ ಚಂದ್ರಾತ್ರತರುಣಿಯು ಅದರ ಸಹಾಯದಿಂದ ಬಲವಾದ ಗಚ್ಚಿನ ಗೋಡೆಗೆ ಬೊಗದೆಯನ್ನು ತೋಡಿದ್ದಳು. ತಂಗಿಯ ಈ ಕುಶಲತೆಗೆ ಬೆರ ಗಾಗಿ ನಿಳೋಜಿಯು ಆ ವನಸ್ಪತಿಯ ಪ್ರಯೋಗದಿಂದಲೇ ಆ ಬೊಗದೆ ಯನ್ನು ಪಾರುಗಾಣಿಸುವ ಸಂಕಲ್ಪವನ್ನು ಮಾಡಿದನು. ರಾತ್ರಿಯಲ್ಲಿ ಇಬ್ಬರೂ ಎಚ್ಚತ್ತು ಬೆಳಗಾಗುವವರೆಗೆ ಬೊಗದೆ ತೋಡುವ ಕೆಲಸಮಾಡ ಬೇಕೆಂದು ನಿರ್ಧರಿಸಿದರು. ಹಗಲಲ್ಲಿ ಮದ್ದಿನ ಖಜಾನೆಯನ್ನು ಕಾಯು ವದು, ರಾತ್ರಿಯಲ್ಲಿ ಬೊಗದೆ ತೋಡುವದು; ಈ ಮೇರೆಗೆ ಅವರ ಕೆಲಸವು ನಾಲ್ಕೈದು ದಿನಗಳವರೆಗೆ ಅವ್ಯಾಹತವಾಗಿ ಸಾಗಿತು. ಇನ್ನು ನಾಲ್ಕೆಂಟು ದಿನಗಳಲ್ಲಿ ಬೊಗದೆಯು ಪಾರಾಗಬಹುದೆಂದು ಕಂಡುಬಂದಿತು. ಆದರೆ ರಾತ್ರಿಯಲ್ಲಿ ಇಬ್ಬರೂ ನಿದ್ದೆಗೆಡುವದೂ ಹಗಲಿನಲ್ಲಿ ಕೆಲಸಮಾಡುವದೂ ಅಶಕ್ಯವಾದ್ದರಿಂದ ನಿಳೋಜಿಯು ಯೋಚನೆಗೊಳಗಾದನು. ಯಾರಾ ದರೂ ಅಮಲ್ದಾರರು ತಪಾಸಿಗಾಗಿ ಬಂದಾಗ ತನಗೆ ನಿದ್ದೆಬಂದಿದ್ದರೆ ಅದ ರಿಂದ ಅನರ್ಥವುಂಟಾಗಬಹುದೆಂಬ ಕಲ್ಪನೆಯು ಅವನಲ್ಲಿ ಉಂಟಾಯಿತು. ರಾತ್ರಿಗಿಂತ ಹಗಲಲ್ಲಿ ಯಾರೂ ಒಳಗೆ ಹೋಗದಂತೆ ಜಾಗರೂಕತೆಯಿಂದ ಗುಹೆಯನ್ನು ಕಾಯುವದು ಬಹಳ ಮಹತ್ವದ್ದಾಗಿತ್ತು. ಆದ್ದರಿಂದ ಅವನು ದಿನಾಲು ಇಬ್ಬರೂ ನಿದ್ದೆಗೆಡುವದು ಉಚಿತವಲ್ಲೆಂದು ಒಂದುದಿನ ಚಂದ್ರಾತ್ರತರುಣಿಯು ನಿದ್ದೆಗೆಡಬೇಕು, ಒಂದುದಿನ ತಾನು ನಿದ್ದೆಗೆಡಬೇಕು ಎಂದು ಗೊತ್ತುಮಾಡಿದನು. ಇದರಿಂದ ಬೊಗದೆಯು ಪಾರಾಗಲಿಕ್ಕೆ ಹೆಚ್ಚುದಿನಗಳು ಬೇಕಾಗುವವೆಂಬದು ಸ್ಪಷ್ಟವು. ಆದರೂ ಮಾಡಿದ ಗುಪ್ತಕೆಲಸವು ಕೊನೆಯವರೆಗೂ ಗುಪ್ತವಾಗಿಯೇ ಪಾರಾಗಬೇಕೆಂದು ಆತನು ಹೀಗೆ ಹಂಚಿಕೆ ಮಾಡಿದನು.

ಮದ್ದಿನ ಖಜಾನೆಯಲ್ಲಿ ಬೊಗದೆ ತೋಡುವ ನಿಳೋಜಿಯ ಈ ಗುಪ್ತ ಕಾರಸ್ಥಾನವು ನಿರ್ವಿಘ್ನದಿಂದ ಸಾಗಿತು. ನಿಳೋಜಿಯು ಕಿಲ್ಲೇ

ದಾರನ ಮೇಲೆ ಒಳ್ಳೇ ವಿಶ್ವಾಸವನ್ನು ತೋರಿಸುತ್ತಿದ್ದದರಿಂದ ಅವನು ಆತನ ನಂಬಿಗೆಗೆ ಪಾತ್ರನಾಗಿದ್ದನು. ಮತ್ತು ಯಾವಾಗ ತಪಾಸಿಗೆ ಬಂದರೂ, ನಿಳೋಜಿಯಾಗಲಿ, ಚಂದ್ರಾತರುಣಿಯಾಗಲಿ ಜಾಗರೂಕತೆಯಿಂದ ಪಹರೆ ಮಾಡುತ್ತಿರುವರೆಂಬದು ಆತನಿಗೆ ಗೊತ್ತಾಗಿ ಹೋಗಿತ್ತು. ಅದ್ದರಿಂದ ಅವನು ನಿಳೋಜಿಯ ಮಾತಿನಿಂದಲೇ ಮದ್ದು ಎಷ್ಟು ಸಿಲ್ಕು ಅದೆ, ಎಂಬದನ್ನು ತಿಳಿದುಕೊಂಡು ಹೋಗಲಾರಂಭಿಸಿದನು. ಒಂದುವೇಳೆ ನೆಲಮನೆಯೊಳಗೆ ಇಳಿದರೂ ಮುಂದುಗಡೆಯಲ್ಲಿಯೇ ನಿಂತು ನೋಡಿಹೋಗುತ್ತಿದ್ದನು. ಇದರಿಂದ ನಿಳೋಜಿಯು ತೋಡುತ್ತಿದ್ದ ಬೊಗದೆಯ ವಿಷಯವು ಯಾರ ಲಕ್ಷ್ಯದಲ್ಲಿಯೂ ಬರಲಿಕ್ಕೆ ಆಸ್ಪದವು ಇಲ್ಲದಾಯಿತು.

ವಾಸ್ತವವಾಗಿ ವಿಚಾರಿಸಿದರೆ ಕಿಲ್ಲೆಯೊಳಗೆ ಯಾರಿಗೂ ಸಮಾಧಾನವಿದ್ದಿಲ್ಲ. ಕಿಲ್ಲೇದಾರನೂ, ಪೆರೆರಾ ಮೊದಲಾದವರೂ ಕೇವಲ ಕಡದಿಗೆ ಬಿದ್ದು ಓಡಾಡುತ್ತಿದ್ದರಲ್ಲದೆ, ಅವರಲ್ಲಿ ಸ್ವಲ್ಪಮಾತ್ರಕ್ಕೂ ಸಮಾಧಾನವಿದ್ದಿಲ್ಲ. ಇಷ್ಟೇ ಅಲ್ಲ; ನಾವು ಈಗ ಏನು ಮಾಡುತ್ತೇವೆಂಬ ಅವಧಾನವು ಕೂಡಾ ಅವರಿಗೆ ಉಳಿದಿದ್ದಿಲ್ಲ. ಮುಖ್ಯಮನುಷ್ಯರಲ್ಲೇ ಇಷ್ಟೊಂದು ಗಾಬರಿಯುಂಟಾಗಿರಲು, ಬೇರೆ ಜನರ ಕಥೆಯನ್ನು ಕೇಳುವವರೇ ಇಲ್ಲ. ಕಿಲ್ಲೆಯ ಹೊರಗೆ ಮರಾಟರು ತೋಫುಗಳ ಮುಖಾಂತರವಾಗಿ ಬೆಂಕಿಯ ಮಳೆಗರೆಯಲಾರಂಭಿಸಿದ್ದರು. ಕೋಟೆಯ ಬುಡದಲ್ಲಿ ಸುರಂಗ ಹಾಕುವ ಕೆಲಸವಂತೂ ನಡೆದೇ ಇತ್ತು. ಅದರಿಂದ ಕೋಟೆಗೆ ಕಿಂಡಿ ಬೀಳದಿದ್ದರೂ ಅಲ್ಲಲ್ಲಿ ಅಲ್ಪ ಸ್ವಲ್ಪ ಗೋಡೆಯು ಬಿದ್ದು, ಶತ್ರುಗಳಲ್ಲಿ ಆಶೆಯನ್ನುಂಟುಮಾಡಿತ್ತು. ಶತ್ರುಗಳಲ್ಲುಂಟಾದ ಈ ಆಶೆಯಿಂದ ಫಿರಂಗೀಜನರು ಕೋಟೆಗೆ ಇಂದಿಲ್ಲ ನಾಳೆ ಖಿಂಡಿ ಬೀಳುವದೆಂದು ಕೈಕಾಲು ಬಿಟ್ಟಿದ್ದರು. ಇಂಥ ಸ್ಥಿತಿಯಲ್ಲಿ ಕಿಲ್ಲೆಯಲ್ಲಿ ಯಾರು ಏನು ಮಾಡಿದರೂ ಕೇಳುವ ಹಾಗಿದ್ದಿಲ್ಲ. ಅಂದಬಳಿಕ ನಿಳೋಜಿಯು ಮದ್ದಿನ ಖಜಾನೆಯಲ್ಲಿಯ ಗುಪ್ತಕಾರಸ್ಥಾನವನ್ನು ಬೈಲಿಗೆಳೆಯುವವರಾರು? ಸಂಧಿಯು ದೊರೆತದ್ದರಿಂದ ಆ ಮರಾಟ ಬಹಾದ್ದೂರನು ಮುಕ್ಕಾಲುಪಾಲು ಗೋಡೆಯನ್ನು ತೋಡಿದನು. ಆ ಬೊಗೆದೆಯು ಒಬ್ಬ ಮನುಷ್ಯನು ಕುಳಿತುಹೋಗುವಷ್ಟು ಪ್ರಶಸ್ಥವಾಗಿತ್ತು. ಬೊಗದೆಯಲ್ಲಿ ಹೊರಟ ಕಲ್ಲು-ಮಣ್ಣು ಮೊದಲಾದವುಗಳನ್ನು ಅವನು ಆ

ಮದ್ದಿನ ಖಜಾನೆಯಲ್ಲಿಯೇ ಒಟ್ಟುತ್ತಿದ್ದನು. ಆದ್ದರಿಂದಲೇ ಅವನು ಖಜಾನೆಯ ಶೋಧಕ್ಕೆ ಯಾರೂ ಬರದಂತೆ ಜಾಣತನದಿಂದ ನಡೆದುಕೊಳ್ಳುತ್ತಿದ್ದನು.

ನಿಳೋಜಿಯು ಮಹಾಬಲಿಷ್ಠ ಪುರುಷನಾಗಿದ್ದನು. ಆದರೆ ಬೊಗದೆ ತೋಡುವ ಕೆಲಸವನ್ನು ಕೈಕೊಂಡಂದಿನಿಂದ ಅವನಿಗೆ ಆಹಾರದ ಹಾಗು ನಿದ್ದೆಯ ಪರವೆ ಇಲ್ಲದಾಯಿತು. ಇದರಿಂದ ಆತನ ಪ್ರಕೃತಿಯು ಅತ್ಯಂತ ಕ್ಷೀಣವಾಯಿತು. ನಿಳೋಜಿಯು ಹೀಗೆ ಕೃಶನಾದದ್ದಕ್ಕೆ ಆಹಾರದ ಪುರವಠೆಇಲ್ಲದ್ದೇ ಕಾರಣವಿರಬಹುದೆಂದು ಕಿಲ್ಲೇದಾರನು ತರ್ಕಿಸಿದನು. ಆಗ ಕಿಲ್ಲೆಯೊಳಗಿನ ಜನರಿಗೆ ಅರಗೂಳು ಕೊಡುತ್ತಿದ್ದರು. ಫಿರಂಗೀ ಶಿಪಾಯಿಗಳು ಸಹ ಅರೆಗೂಳಿನಿಂದ ಕಾಲಕ್ರಮಣ ಮಾಡಬೇಕಾಗಿತ್ತು. ಗೋವೆಯಿಂದಾಗಲಿ, ಮುಂಬಯಿ ಇಂಗ್ರಜರಿಂದಾಗಲಿ ತಮಗೆ ಸಹಾಯ ಬರುವದೇನೆಂಬ ಭ್ರಾಂತಿಯು ಅಲ್ಲಿಯ ಪೆರೆರಾ ಮೊದಲಾದವರಿಗೆ ಇದ್ದದರಿಂದ ಅವರು ಈ ರೀತಿ ಕಷ್ಟಬಟ್ಟು ದಾರೀ ಕಾಯುತ್ತಿದ್ದರು.

ಒಂದು ದಿನ ತನ್ನ ಈ ಕಾರಸ್ಥಾನವನ್ನು ನಿಳೋಜಿಯು ಗಣೋಬನಿಗೆ ಹೇಳಿದನು. ಇನ್ನು ಎರಡುಮೂರು ದಿನಗಳಲ್ಲಿ ಕೋಟೆಯ ಗೋಡೆಗೆ ಬೊಗದೆ ಬೀಳುವದು. ನೀನು ಯಾವದೊಂದು ಪರ್ಯಾಯದಿಂದ ಈ ಸಂಗತಿಯನ್ನು ಶ್ರೀಮಂತರಿಗೆ ತಿಳಿಸು, ಎಂದನು ನಿಳೋಜಿಯ ಈ ಅದ್ಭುತ ಸಾಮರ್ಥ್ಯವನ್ನು ನೋಡಿ ಗಣೋಬನಿಗೆ ಆಶ್ಚರ್ಯ ಹಾಗೂ ಆನಂದಗಳಾದವು. ಅವನು ಈ ಸಂಗತಿಯನ್ನು ಬಹು ಮಾರ್ಮಿಕವಾಗಿ ಒಂದು ಚೀಟಿಯಲ್ಲಿ ಬರೆದು, ಅದನ್ನು ಪಾರಿವಾಳ ಪಕ್ಷಿಯ ಕಾಲಿಗೆ ಕಟ್ಟಿ ಆ ಪಕ್ಷಿಯನ್ನು ಹಾರಿಬಿಟ್ಟನು. ಆ ಚತುರಪಕ್ಷಿಯು ಸಂಕೇತದಂತೆ ಶ್ರೀಮಂತರ ಪಾಳಯದಲ್ಲಿ ಹೋಗಿ ಇಳಿಯಿತು. ತುಳಾಜಿಯು ಹಕ್ಕಿಯ ಕಾಲಿಗೆ ಚೀಟಿ ಇದ್ದದ್ದನ್ನು ನೋಡಿ ಅದನ್ನು ಹಿಡಿದು ಆ ಚೀಟಿಯನ್ನು ತಕ್ಕೊಂಡು ಓದಿನೋಡಿದನು. ಆನಂದವಾಯಿತು. ಪಿಂಪಳಗ್ರಾಮದ ಆ ತರುಣನು ಮಾಡಿದ ಕರಾಮತಿಗೆ ಅವನು ತುಂಬಾ ಬೆರಗಾದನು. ಆದರೆ ಗಣೋಬನು ಪತ್ರ ಬರೆಯುವಾಗ ಕಿಲ್ಲೆಯ ಇಂಥ ಸ್ಥಳದಲ್ಲಿಯೇ ಮದ್ದಿನ ಖಜಾನೆ ಇರುವದೆಂಬದನ್ನು ಬರೆದಿದ್ದಿಲ್ಲ. ಗಣೋಬನ ಈ ಮರವಿನಿಂದ ಆ ಪತ್ರದಿಂದ ಯಾವ ಲಾಭವು ಶ್ರೀಮಂತರಿಗೆ ಆಗಬೇಕಾಗಿತ್ತೋ ಅದು

ಆಗದಂತಾಯಿತು. ಬಳಿಕ ತುಳಾಜಿಯು ಗಣೋಬನ ಈ ದಡ್ಡತನವನ್ನು ಹೀಯಾಳಿಸಿ ಒಂದು ಚೀಟಿಯನ್ನು ಬರೆದು ಆ ಪಾರಿವಾಳದ ಕಾಲಿಗೆ ಕಟ್ಟಿ ಅದನ್ನು ಹಾರಿಸಿದನು. ಆ ಜಾಣ ಹಕ್ಕಿಯು ನೆಟ್ಟಗೆ ತನ್ನ ಒಡೆಯನ ಬಳಿಗೆ ಬಂದಿತು. ಗಣೋಬನ ಕೈಗೆ ಚೀಟಿಯು ಸಿಗಲು, ಅವನು ಅದನ್ನು ಓದಿ ನಾಚಿಕೊಂಡನು. ಆದರೆ ಪುನಃ ಪ್ರತ್ಯುತ್ತರ ಕೊಡಲಿಕ್ಕೆ ಅವಕಾಶ ಸಾಲದ್ದರಿಂದ ಅವನು ಮನದಲ್ಲಿಯೇ ಮರುಗಲಾರಂಭಿಸಿದನು.

---

## (೨೦) ಚಿಮಣಾಜಿಯ ಕಲಿತನ.



ಗಣೋಬನು ಮತ್ತೆ ಹಕ್ಕಿಯನ್ನು ಕಳಿಸುವನೇನೆಂದು ತುಳಾಜಿಯು ಬಹಳ ಹೊತ್ತಿನವರೆಗೆ ದಾರೀ ನೋಡಿದನು. ಆದರೆ ಎಷ್ಟು ಹೊತ್ತಾದರೂ ಹಕ್ಕಿಯು ಬಾರದ್ದರಿಂದ ಅವನು ಹತಾಶನಾದನು. ಕೈಗೆ ಬಂದ ಪತ್ರದಿಂದ ಏನೂ ಪ್ರಯೋಜನವಾಗಲಿಲ್ಲೆಂದು ಅವನು ನಿರಾಶೆಗೊಂಡು ನಿಂತಿರಲು, ಚಿಮಣಾಜಿಅಪ್ಪಾನು ಅಲ್ಲಿಗೆ ಬಂದನು. ಅವನು ತುಳಾಜಿಯ ಉದಾಸೀನತೆಯ ಕಾರಣವನ್ನು ಕೇಳಲು, ಆತನು ಪತ್ರದ ಸಂಗತಿಯನ್ನು ಹೇಳಿದನು. ತಮ್ಮ ಕಡೆಯ ಗುಪ್ತಹೇರರು ಕಿಲ್ಲೆಯಲ್ಲಿ ಬಗೆಬಗೆಯ ಗುಪ್ತ ಕಾರಸ್ಥಾನಗಳನ್ನು ನಡಿಸಿರುವರೆಂಬದನ್ನು ತಿಳಿದು ಚಿಮಣಾಜಿಗೆ ವಿಲಕ್ಷಣ ಸ್ಫೂರ್ತಿಯಾಯಿತು. ಈ ದಿನವೇ ಕಿಲ್ಲೆಯನ್ನು ಮುತ್ತಿ ಕಿಲ್ಲೆಗೆ ಖಿಂಡಿಯನ್ನು ಕೆಡವಲೇಬೇಕೆಂಬ ಉತ್ಕಟೇಚ್ಛೆಯು ಅವನಲ್ಲುಂಟಾಯಿತು. ವೀರರು ಪ್ರಬಲೇಚ್ಛೆಯುತ್ಪನ್ನವಾದಾಗ ಆ ಇಚ್ಛೆಗೆ ಅಡ್ಡಿಯನ್ನುಂಟು ಮಾಡಹೋಗುವದಿಲ್ಲ. ಯಾಕಂದರೆ ಆ ಉತ್ಕಟ ಇಚ್ಛೆಯಲ್ಲಿ ಅತ್ಯದ್ಭುತ ಶಕ್ತಿಯಿರುತ್ತದೆಂಬದರ ಅನುಭವವು ಅವರಿಗಿರುತ್ತದೆ. ಉತ್ಕಟೇಚ್ಛೆಯಿಲ್ಲದಾಗ ಕಠಿಣ ಕಾರ್ಯವನ್ನು ಮಾಡಹೋಗುವದು ಅಶಕ್ಯವಾಗುವದು. ಆದರೆ ಅದೇ ಉತ್ಕಟೇಚ್ಛೆಯಾದಾಗ ಎಂಥ ಕಠಿಣ ಕೆಲಸಗಳಾದರೂ ಸಹಜವಾಗಿ ಕೈಗೂಡುವವು. ಈ ಉತ್ಕಟೇಚ್ಛೆಯ ಸಾಮರ್ಥ್ಯವನ್ನು ಚಿಮ

ಣಾಜಿಯು ಬಲ್ಲವನಾದ್ದರಿಂದ ತುಳಾಜಿಗೆ ತನ್ನ ಇಚ್ಛೆಯನ್ನು ತಿಳಿಸಿದವನೇ ಸೈನಕ್ಕೆ ಸಜ್ಜಾಗಲು ಅಪ್ಪಣೆ ಕೊಟ್ಟು, ಯುದ್ಧದ ಪೋಷಾಕನ್ನು ಧರಿಸಿ ಕುದುರೆಯನ್ನೇರಿದನು. ಶ್ರೀಮಂತರೇ ಹೀಗೆ ಯುದ್ಧೋನ್ಮುಖರಾಗಿ ಅಶ್ವಾರೂಢರಾಗಲು ಉಳಿದ ಸರದಾರರ ಪಾಡೇನು? ಅವರು ಹಾ ಹಾ ಅನ್ನುವಷ್ಟರಲ್ಲಿ ಸಸೈನ್ಯವಾಗಿ ಅಪ್ಪಾಜಿಯನ್ನು ಹಿಂಬಾಲಿಸಿದರು.

ಚಿಮಣಾಜಿ ಅಪ್ಪಾಜಿಯು ಯುದ್ಧಕ್ಕೆ ಹೊರಟಾಗ ಮಧ್ಯಾಹ್ನದ ಆರು ತಾಸಿನ ಸಮಯವಾಗಿತ್ತು. ಬಿಸಿಲು ಕಿಚ್ಚಿನಂತೆ ಸುರಿಯುತ್ತಿತ್ತು. ತೋಫಿನ ಪೆಟ್ಟುಗಳಿಗೇ ಅಂಜದ ಆ ರಣಧೀರರಿಗೆ ಬಿಸಿಲಿನ ಅಂಜಿಕೆಯೇ? ಆ ಅಂಜಿಕೆಯು ಈಗಿನ ಶ್ರೀಮಂತರಿಗೆ ಮಾತ್ರ. ಮನೆಯಲ್ಲಿ ಸುಗ್ರಾಸ ಭೋಜನ ಮಾಡಿ ಮೆತ್ತನ್ನ ಹಾಸಿಗೆಯ ಮೇಲೆ ಪವಡಿಸುವವರು ಎಂಥ ಕೆಟ್ಟ ಬಿಸಿಲೆನ್ನುವರು. ರಣಭೂಮಿಯಮೇಲೆ ಥೈ ಥೈ ನರ್ತನ ಮಾಡುವ ಚಿಮಣಾಜಿಅಪ್ಪಾನಂಥ ಶ್ರೀಮಂತರಿಗೆ ಬಿಸಿಲು ಬೆಳದಿಂಗಳಂತೆ ಸೀತಲ ವಾಗಿತ್ತು. ನಿಜವಾದ ಸತ್ವಶಾಲಿಗಳಿಗೆ ಅಥವಾ ಕರ್ತವ್ಯನಿಷ್ಠರಿಗೆ ಪಂಚ ಮಹಾಭೂತಗಳಿಂದಲೂ ಉಪಹತಿಯಾಗುವದಿಲ್ಲ. ಕರ್ತವ್ಯಪರಾಙ್ಮುಖ ರಿಗೆ ಮಾತ್ರ ಅಲ್ಪ ಸ್ವಲ್ಪ ಸಂಗತಿಗಳು ಸಹ ಉಪಹತಿ ಮಾಡಲಾರಂಭಿಸು ತ್ತವೆ. ಮನೋದೌರ್ಬಲ್ಯವಿದ್ದವರಿಗೆ ಏನಾದರೆ ತಾನೆ ಧೈರ್ಯವುಂಟಾ ದೀತು? ಇರಲಿ,

ಚಿಮಣಾಜಿಯು ಉತ್ಕಟೇಚ್ಛೆಯಿಂದ ಪ್ರೇರಿತನಾದ್ದರಿಂದ ವೇಳೆ ಅವೇಳೆಗಳನ್ನು ನೋಡಲಿಲ್ಲ. ನೆಟ್ಟಗೆ ಕಿಲ್ಲೆಗೆ ಹೋಗಿ ಇಂಥ ಇಂಥಲ್ಲಿ ತಗ್ಗು ತೋಡಿ ಸುರಂಗ ಹಾಕಿರೆಂದು ಸೇವಕರಿಗೆ ಆಜ್ಞೆ ಮಾಡಿ ಎದುರಿಗೆ ನಿಂತು ಕೆಲಸ ಮಾಡಿಸಲಾರಂಭಿಸಿದನು. ಮರಾಟರ ಅಪಾರ ಸೈನ್ಯವು ಕಿಲ್ಲೆಗೆ ಮುತ್ತಿಗೆ ಹಾಕುವದೆಂದು ತಿಳಿದು ಫಿರಂಗೀಜನರು ಹಿಟ್ಟುಗೂಡಿ ತೋಫನ್ನು ಪ್ರಾರಂಭಿಸಿದರು. ಹಾಗು ಬಂದೂಕುಗಳಿಂದ ಬೆಂಕಿಯ ಮಳೆಗರೆಯಲಾರಂಭಿಸಿದರು. ಅದಕ್ಕೆ ಚಿಮಣಾಜಿಯು ಸ್ವಲ್ಪವೂ ಅಂಜದೆ ಕೆಚ್ಚೆದೆಯಿಂದ ನಿಂತುಕೊಂಡಿದ್ದನು. ಫಿರಂಗಿಗಳ ತೋಫುಗಳಿಗೆ ಮರಾ ಟರ ಸೈನಿಕರಲ್ಲಿ ಕೆಲಕೆಲವರು ಆಹುತಿಯಾದರು. ತೋಫಿನಿಂದ ಶತ್ರು ಸಂಹಾರ ಮಾಡಬೇಕೆಂದು ಬಯಸುತ್ತಿದ್ದ ಫಿರಂಗಿಗಳಿಗೆ ಶತ್ರುಗಳು ತೀರ ಕೋಟೆಯ ಬುಡಕ್ಕೆ ಬಂದು ಸುರಂಗ ಹಾಕುವರೆಂಬದರ ಕಡೆಗೆ ಲಕ್ಷ

ಹೋಗಲಿಲ್ಲ. ಅಲ್ಪಾವಕಾಶದಲ್ಲಿ ಎರಡು ಮೂರು ಸುರಂಗದ ಗುಂಡಿಗಳು ಸಿದ್ಧವಾದವು. ಅಪ್ಪಾಜಿಯು ಅವುಗಳಲ್ಲಿ ಲಗಬಗೆಯಿಂದ ಸುರಂಗ ತುಂಬಿಸಿ ಕೊಳ್ಳಿ ಕೊಡಿಸಿದನು. ಬಳಿಕ ಕೇಳುವದೇನು? ಅಪ್ಪಾಜಿಯೂ ಅವನ ಸೈನಿಕರೂ ಸ್ವಲ್ಪ ಓರೆಯಾಗುವಷ್ಟರಲ್ಲಿ ಆ ಮೂರೂ ಸುರಂಗಗಳು ಒಂದರ ಹಿಂದೊಂದು ಹಾರಿದವು. ಅವುಗಳ ಆಘಾತಕ್ಕೆ ಪೃಥ್ವಿಯು ನಡುಗಿತು. ಕಿಲ್ಲೆಯ ಗೋಡೆಯು ದಡದಡ ಕಡಿದುಕೊಂಡು ಬಿದ್ದಿತು. ಕಿಲ್ಲೆಯ ಮೇಲೆ ನಿಂತು ಮರಾಟರಿಗೆ ಗುಂಡಿನಿಂದ ಹೊಡೆಯುವ ಫಿರಂಗೀಪಕ್ಷದ ನೂರಾರು ಜನ ಸೈನಿಕರು ಆಧಾರತಪ್ಪಿ ಕೋಟೆಯ ಕಲ್ಲುಗಳ ಜೊತೆಗೆ ನೆಲಕ್ಕುರುಳಿ ಗತಪ್ರಾಣರಾದರು. ಎಷ್ಟೋ ಜನರು ಮಣ್ಣಲ್ಲಿ ಮುಚ್ಚಿ ಹೋ-ದರು. ಹೀಗೆ ಕಿಲ್ಲೆಯ ಗೋಡೆಯು ಮೇಲಿನಿಂದ ಕಳಚಿ ಬಿದ್ದು, ಮೇಲೇರಿ ಹೋಗಲಿಕ್ಕೆ ಮಾರ್ಗವಾಗಲು, ಅಪ್ಪಾಜಿಯು ಕುದುರೆಯಿಂದಿಳಿದು ಖಡ್ಗವನ್ನು ತಕ್ಕೊಂಡು, ಹರ ಹರ! ಮಹಾದೇವ!! ಎಂದು ಗರ್ಜಿಸುತ್ತ ಮೇಲಕ್ಕೇರಲಾರಂಭಿಸಿದನು. ಅಪ್ಪಾಜಿಯವರ ಈ ಸಾಹಸವನ್ನು ತಿಳಿದು ಹಲವು ಜನ ಮರಾಟಾ ಸರದಾರರು ನಾ ಮುಂದೆ, ನಾ ಮುಂದೆ ಎಂದು ಕಿಲ್ಲೆಯ ಮೇಲೇರತೊಡಗಿದರು. ಆ ಕಾಲಕ್ಕೆ ಮರಾಟರೆಲ್ಲರೂ ಒಳ್ಳೇ ಆವೇಶಗೊಂಡಿದ್ದರು. ಎದುರಿಗೆ ಎಂಥ ಶತ್ರುವು ಬಂದರೂ ಅವನನ್ನು ತುಂಡರಿಸಿ ಚಲ್ಲುವೆವೆಂಬ ಧೈರ್ಯವು ಪ್ರತಿಯೊಬ್ಬನಲ್ಲಿಯೂ ಜಾಗೃತವಾಗಿತ್ತು. ಶತ್ರುಗಳು ಮೇಲೇರಿ ಬರುವರೆಂದು ತಿಳಿದು ಫಿರಂಗಿಗಳು ಬಂದೂಕಗಳನ್ನು ಹಾರಿಸಲಾರಂಭಿಸಿದರು. ಆ ಬಂದೂಕಗಳ ಪಟುಗಳನ್ನು ತಪ್ಪಿಸಿಕೊಂಡು ಚಿಮಣಾಜಿಯು ೮-೧೦ ಜನ ಸೈನಿಕರೊಡನೆ ಪಟ್ಟಾಕತ್ತಿಯನ್ನು ತಿರುವುತ್ತ ಮೇಲೇರಬೇಕೆನ್ನುವಷ್ಟರಲ್ಲಿ ಕಿಲ್ಲೆಯೊಳಗಿನ ಫಿರಂಗೀ ಜನರು ಒಮ್ಮೆಲೆ ಹೆಬ್ಬಾಗಿಲಗಳನ್ನು ತೆರೆದರು. ಹಾಗು ಕೆಲ ಜನ ಸೈನಿಕರು ಮರಾಟರ ಮೇಲೆ ನುಗ್ಗಿದರು. ಅಪ್ಪಾಜಿಯು ರೊಚ್ಚಿನಿಂದ ಮೇಲೇರಿ ಬರುವದರಿಂದ ಈ ದಿನ ಕಿಲ್ಲೆಯು ಮರಾಟರ ಹಸ್ತಗತವಾಗದೆ ಉಳಿಯುದೆಂದು ಮೇನೇಸೀಝುನು ತಿಳಿದು ಏನೇ ಆಗಲಿ, ಕೋಟೆಯ ಬಾಗಿಲವನ್ನು ತೆರೆದು ಕೊನೆಯ ಯುದ್ಧವ ಮಾಡಬೇಕೆಂದು ನಿರ್ಧರಿಸಿದ್ದನು. ಆದ್ದರಿಂದ ಅವನು ಹೀಗೆ ಸೈನಿಕರಿಗೆ ಅಪ್ಪಣೆಮಾಡಲು, ಅವರು ಒಮ್ಮೆಲೆ ಬಾಗಿಲ ತೆರೆದು ಕಾಳಗಕ್ಕೆ ಅಣಿಯಾದರು.

ಮನುಷ್ಯನು ಸಕಂಟದಲ್ಲಿ ಬಿದ್ದನೆಂದರೆ ಮುಂದುಗಾಣದವನಾಗುತ್ತಾನೆ. ಹ್ಯಾಗಾದರೆ ಪಾರಾದೇವೆಂಬ ಹಂಬಲವೇ ಹತ್ತಿ ಹೋಗುತ್ತದೆ. ಇದರಿಂದ ಆತನು ತನಗೆ ಅಹಿತ ವಾಗುವಂಥ ಆಚರಣೆಯಲ್ಲಿಯೇ ಆಸಕ್ತನಾಗುತ್ತಾನೆ. ಇದರಿಂದ ತನ್ನ ಸರ್ವಸ್ವವೂ ಘಾತವಾದೀತೆಂಬದು ತಿಳಿಯುವದಿಲ್ಲ. ಪ್ರಸ್ತುತದಲ್ಲಿ ಮೇನೇಸೀಝುಸ ಅವಸ್ಥೆಯು ಹೀಗೆಯೇ ಆಯಿತು. ಅವನು ವಿಚಾರವಿಲ್ಲದೆ ಸೈನಿಕರಿಗೆ ಆಜ್ಞೆ ಮಾಡಿದ್ದನು. ಆದರೆ ಹಸಿದ ತೋಳನಂತಿರುವ ಮರಾಟರಿಗೆ ಇದು ಒಳ್ಳೇ ಪಥ್ಯಕರವಾಯಿತು. ಮರಾಟ ಸೈನಿಕರೆಲ್ಲರೂ ಕಿಲ್ಲೆಯ ಬಾಗಿಲ ಬಳಿಗೆ ಒಂದೇ ಹಾರಿಕೆಗೆ ಹಾರಿದರು. ಅಪ್ಪಾಜಿಯು ಕೋಟೆಯ ಗೋಡೆಯನ್ನು ಅರ್ಧದವರೆಗೆ ಏರಿದ್ದನು. ಮುಖ್ಯಸರದಾರರೆಲ್ಲ ಅವನ ಬಳಿಯಲ್ಲಿಯೇ ಇದ್ದರು. ಫಿರಂಗಿಗಳು ಹೆಬ್ಬಾಗಿಲ ತೆರೆದು ಸತ್ವನಾಶ ಮಾಡಿಕೊಳ್ಳುವರೇನೆಂದು ಅವನಿಗೆ ಸಂಶಯ ಬಂದಿತು. ಅದು ವಿಚಾರ ಮಾಡುವ ಸಮಯವಲ್ಲದ್ದರಿಂದ ಸಂಗಡಿಗರೊಡನೆ ಕಿಲ್ಲೆಯ ಬಾಗಿಲವನ್ನೇ ಮುತ್ತಿ ಒಳನುಗ್ಗಬೇಕೆಂದು ಮೇಲೇರತಕ್ಕದ್ದನ್ನು ನಿಲ್ಲಿಸಿ ಹಿಂದಿರುಗಿದನು. ಅವನ ಸಂಗಡಿಗರೂ ಹಿಂದಿರುಗಿದರು. ಮರಾಟರು ಗೋಡೆಯಿಂದ ಕೆಳಗಿಳಿದರೆಂದು ಮೇಲಿನವರಿಗೆ ತಿಳಿಯಲು ಅವರು ಬಂದೂಕ ಹಾರಿಸುವದನ್ನು ನಿಲ್ಲಿಸಿ ಅಲ್ಲಿದ್ದ ಪೆರೆರಾನಿಗೆ ತಿಳಿಸಿದರು. ಪೆರೆರಾ ಸರದಾರನಿಗೆ ಮರಾಟರು ಹೀಗೇಕೆ ಮಾಡಿದರೆಂಬ ಇಂಗಿತವು ತಿಳಿಯದಾಯಿತು. ಅಷ್ಟರಲ್ಲಿ ಹೆಬ್ಬಾಗಿಲ ಬಳಿಯಲ್ಲಿ ಕೋಲಾಹಲಧ್ವನಿಯು ಕೇಳಬರಲು ಅವನು ಅತ್ತಕಡೆಗೆ ಧಾವಿಸಿದನು. ಅವನ ಸಂಗಡಿಗರೂ ಅವನನ್ನು ಹಿಂಬಾಲಿಸಿದರು.

ಹೆಬ್ಬಾಗಿಲಬಳಿಯಲ್ಲಿ ಮರಾಟರಿಗೂ ಫಿರಂಗೀಸೈನಿಕರಿಗೂ ಕಡುಕಾಳಗ ವೆಸಗಿತ್ತು. ಮರಾಟರು ಅಲ್ಪಸಂಖ್ಯಾಕರಿದ್ದರು. ಫಿರಂಗೀಸೈನಿಕರು ಮರಾಟರ ಎರಡಷ್ಟಿದ್ದರು. ಇಷ್ಟೇ ಅಲ್ಲ ಇಂದು ಕೊನೆಯ ಕಾಳಗವೆಂದು ಅವರು ಕಿಲ್ಲೆಯೊಳಗಿನ ಸೈನ್ಯವೆಲ್ಲ ಹೆಬ್ಬಾಗಿಲಬಳಿಗೇ ಬರುವಂತೆ ಏರ್ಪಡಿಸಲಾರಂಭಿಸಿದ್ದರು. ಅಪ್ಪಾಜಿಗೆ ಒಳ್ಳೇ ಹುರುಪು ಬಂದಿತು. ಅವನು ತಾನೇ ಮುಂದರಿದು ಶತ್ರುಸೈನ್ಯದಲ್ಲಿ ಹೊಕ್ಕನು. ತುಳಾಜಿ ಯಶವಂತರಾವ ಮೊದಲಾದ ಸರದಾರರು ಪ್ರಸಂಗವು ಕಠಿಣವಿರುವದೆಂದು ಒಬ್ಬ ರಾಹುತನನ್ನು ಛಾವಣಿಗೆ ಕಳುಹಿಸಿ ಮಲ್ಹಾರರಾಯನಿಗೆ ಐದುಸಾವಿರ ಸೈನ್ಯದೊಡನೆ ಹೊರಟು

ಬರಬೇಕೆಂದು ಸುದ್ದಿಯನ್ನು ತಿಳಿಸುವ ಏರ್ಪಾಟನ್ನು ಮಾಡಿ ಕಾಳಗಕ್ಕೆ ಅಣಿಯಾದರು. ಮೊದಮೊದಲು ಮರಾಟರು ಯಶಸ್ವೀಗಳಾದರೂ ಫಿರಂಗೀ ಜನರಿಗೆ ಒಳಗಿನ ಸೈನ್ಯವು ಸಹಾಯಕ್ಕೆ ಬಂದದ್ದರಿಂದ ಅವರ ಉತ್ಸಾಹವು ಇಮ್ಮಡಿಸಿತು. ಮೇನೇಸೀಝು ಹಾಗು, ಪೆರೆರಾ ಇವರಿಬ್ಬರೂ ಯುದ್ಧ ದಲ್ಲಿ ತೊಡಗಿ ತಮ್ಮ ಸೈನ್ಯಕ್ಕೆ ಒಳ್ಳೇ ಪ್ರೋತ್ಸಾಹವನ್ನುಂಟು ಮಾಡಿದರು. ಉಭಯತರು ಖಡ್ಗ ಯುದ್ಧವನ್ನೇ ಪ್ರಾರಂಭಿಸಿದರು. ಮರಾಟರು ಖಡ್ಗ ಯುದ್ಧದಲ್ಲಿ ಒಳ್ಳೇ ನಿಷ್ಣಾತರು. ಖಡ್ಗವನ್ನು ತಿರುವುದರಲ್ಲಿಯೂ ತಮ್ಮ ಮೈ ಮೇಲೆ ಬರುವ ಶತ್ರುಗಳ ಪೆಟ್ಟನ್ನು ತಪ್ಪಿಸಿಕೊಳ್ಳುವದರಲ್ಲಿಯೂ ಅವರು ಗಟ್ಟಿಗರು. ಆದರೆ ಖಡ್ಗಯುದ್ಧದ ಈ ಜಾಣತನವು ಫಿರಂಗೀ ಸೈನಿಕರಿಗಿದ್ದಿಲ್ಲ. ಅವರು ಬರಿಯ ಬಂದೂಕಿನ ಬಹಾದ್ದೂರರು. ದೂರಿ ನಿಂದಲೇ ಶತ್ರುಗಳ ಮೇಲೆ ಬಂದೂಕನ್ನು ಹಾರಿಸಿ ಜಯವನ್ನು ಸಂಪಾದಿಸ ತಕ್ಕವರು. ಆದರೆ ಈ ದಿನ ಅವರು ಖಡ್ಗಯುದ್ಧಕ್ಕೆ ಪ್ರಾರಂಭಿಸಿದ್ದರಿಂದ ಅವರ ಸತ್ವನಾಶವು ಆಗಲಾರಂಭಿಸಿತು. ತಮ್ಮ ಪಕ್ಷವು ಖಡ್ಗಯುದ್ಧ ದಿಂದ ಹಿಮ್ಮೆಟ್ಟುವದೆಂದು ಕಂಡು ಬಂದ ಕೂಡಲೇ ಮೇನೇಸೀಝುನು ಖಡ್ಗಯುದ್ಧವನ್ನು ನಿಲ್ಲಿಸಿ ಬಂದೂಕಿನ ಯುದ್ಧವನ್ನು ಪ್ರಾರಂಭಿಸ ಬೇಕೆಂದು ಯೋಚಿಸಿದನು. ಆದರೆ ಆ ಮರಾಟರ ಏರಾಟದ ಮುಂದೆ ಅವ ನಿಗೆ ಏನನ್ನೂ ಮಾಡಲಿಕ್ಕೆ ಸಾಧ್ಯವಾಗಲಿಲ್ಲ.

ಈ ಯುದ್ಧದಲ್ಲಿ ಮರಾಟರ ಕಲಿತನವೆಷ್ಟೆಂಬದು ಫಿರಂಗಿಗಳ ಅನು ಭವಕ್ಕೆ ಬಂದಿತು. ಅಪ್ಪಾಜಿಯು ಪ್ರತ್ಯಕ್ಷ ಕಾಲನಂತೆ ಶತ್ರು ಸಂಹಾರ ಮಾಡುತ್ತ ನಿಶ್ಶಂಕೆಯಿಂದ ನಡೆದಿದ್ದನು. ಅವನ ಮೈಗೆ ಶತ್ರುಗಳ ಹೊಡತ ದಿಂದ ಅನೇಕ ಗಾಯಗಳಾಗಿ ಅವುಗಳಿಂದ ರಕ್ತವು ಹೊರಚಿಮ್ಮುತ್ತಿ ದ್ದರೂ, ಆ ಗಾಯಗಳ ಕಡೆಗೆ ಆ ವೀರನು ಸ್ವಲ್ಪವೂ ಲಕ್ಷಗೊಟ್ಟಿದ್ದಿಲ್ಲ. ಶತ್ರುತಂಡವನ್ನು ಬಗೆದು ಸಸೈನ್ಯವಾಗಿ ಕಿಲ್ಲೆಯನ್ನು ಸೇರಬೇಕೆಂಬದೇ ಅವನ ಹವಣಿಕೆಯಾಗಿತ್ತು.

ಅಪ್ಪಾಜಿಯ ಈ ಹವಣಿಕೆಯು ಫಿರಂಗಿಗಳ ಲಕ್ಷದಲ್ಲಿ ಬಾರದೆ ಇರ ಲಿಲ್ಲ. ಪೆರೆರಾ ಸರದಾರನು ಮುಂದುವರೆದು ಅಪ್ಪಾಜಿಯ ಮಾರ್ಗವನ್ನು ನಿರೋಧಿಸಲಾರಂಭಿಸಿದನು. ಅಪ್ಪಾಜಿಯು ಒಳ್ಳೇ ನಿಗ್ರಹದಿಂದ ಕಾದ ಹತ್ತಿದ್ದರಿಂದ ಫಿರಂಗಿಗಳಲ್ಲಿದ್ದ ಹಿಂದೂ ಸೈನಿಕರು ತಳಮಳಿಸುತ್ತ ಕಾಲ್ದೆಗೆ

ದರು. ಆತನ ತೀಕ್ಷ್ಣ ಖಡ್ಗವು ಎಗ್ಗಿಲ್ಲದೆ ಶತ್ರುಗಳ ಆಹುತಿಯನ್ನು ತೆಕ್ಕೊಳ್ಳುವದನ್ನು ಕಂಡು ಸೈನ್ಯದಲ್ಲೆಲ್ಲ ಭಯಂಕರ ಕೋಲಾಹಲವೆದ್ದಿತು. ಹಿಂದೂ ಸೈನಿಕರು ಕಾಲ್ಕಿಗೆದರೆಂದು ತಿಳಿದ ಕೂಡಲೆ ಫಿರಂಗಿಗಳ ಗೋರಾ ಸೈನ್ಯವೇ ಅಪ್ಪಾಜಿಯ ಎದುರಿಗೆ ನಿಂತುಕೊಂಡಿತು. ದೇಹಮಾನದಿಂದ ಫಿರಂಗೀ ಗೋರಾ ಸೈನಿಕರು ಮರಾಟರಿಗಿಂತ ಬಲಿಷ್ಠರಾಗಿದ್ದರು; ಆದರೆ ಮರಾಟರಷ್ಟು ಧೈರ್ಯವು ಅವರಲ್ಲಿರದ್ದರಿಂದ ಅವರ ಪುಷ್ಟ ಶರೀರದಿಂದ ಆವ ಪ್ರಯೋಜನವೂ ಇಲ್ಲವಾಯಿತು. ಖಡ್ಗಯುದ್ಧದಲ್ಲಂತೂ ಅವರು ತೀರ ಅನಭಿಜ್ಞರು. ಅಪ್ಪಾಜಿಯು ವಿಲಕ್ಷಣ ಚಾತುರ್ಯ ಹಾಗು ಶೌರ್ಯವನ್ನು ಪ್ರಕಟಿಸಿ ಗೋರಾ ಸೈನಿಕರನ್ನು ಸಂಹರಿಸಲಾರಂಭಿಸಿದನು. ಆ ಸೈನಿಕರು ಅಪ್ಪಾಜಿಯ ಸಾಹಸಕ್ಕೂ ಅವನ ಅನುಯಾಯಿಗಳ ಸಾಹಸಕ್ಕೂ ದಂಗುಬಡಿದು ಮುಂದುಗಾಣದಾದರು. ಪೆರಿರಾ ಸರದಾರನೂ ಮೇನೇಸೀಝುನೂ ಮುಂಗೈ ಕಚ್ಚುತ್ತ ಒಳ್ಳೇ ಆವೇಶ ತಾಳಿ ತಮ್ಮವರನ್ನು ಹುರಿದುಂಬಿಸಲಾರಂಭಿಸಿದರು. ಕಾಳಗದ ಕಣವು ಅತ್ಯಂತ ಭಯಂಕರವಾಗಿ ತೋರಿತು. ಉಭಯ ಪಕ್ಷಗಳಲ್ಲೂ ಅಸಂಖ್ಯ ಜನರು ಮಡಿದಿದ್ದರು. ಕೆಲವರು ಅರ್ಧಜೀವಿಗಳಾಗಿ ಪ್ರಾಣಾಂತಿಕ ವೇದನೆಯನ್ನು ಸಹಿಸಲಾರದೆ ಕರ್ಕಶ ಧ್ವನಿಯಿಂದ ಚೀರುತ್ತಿದ್ದರು. ಮರಾಟರ ಸೈನ್ಯವು ಮೊದಲೇ ಚಿಕ್ಕದಿದ್ದು, ಅದರಲ್ಲಿ ಅಸಂಖ್ಯ ಜನರು ಮಡಿದದ್ದರಿಂದ ತುಳಾಜಿ ಮೊದಲಾದವರು ಎದೆಯೊಡೆದಿದ್ದರು. ಚಿಮಣಾಜಿಯು ಮಾತ್ರ ಸ್ವಲ್ಪವೂ ಧೈರ್ಯಗುಂದದೆ ಮುಂದಿನ ಮಾರ್ಗವನ್ನು ಆಕ್ರಮಿಸುವದರಲ್ಲಿಯೇ ತೊಡಗಿದ್ದನು. ಶತ್ರುಪಕ್ಷದ ಸಂಖ್ಯಾಬಾಹುಲ್ಯದಿಂದ ಮರಾಟರು ನಾಮಶೇಷರಾದರೋ ಎಂಬ ಹಾಗೆ ತೋರುತ್ತಿತ್ತು.

ಅಪ್ಪಾಜಿಯು ಸುತ್ತಲೂ ಲಕ್ಷ್ಯವಿಟ್ಟು ಸಾಗಿದ್ದನು. ಎತ್ತೆಲ್ಲಿ ನೋಡಿದರೂ ಫಿರಂಗಿಗಳೇ ದೃಷ್ಟಿಗೆ ಬೀಳಲಾರಂಭಿಸಿದರು. ತಮ್ಮವರು ಗಗನಾಂಗಣದೊಳಗಿನ ಮುಚ್ಚಂಜೆಯ ನಕ್ಷತ್ರಗಳಂತೆ ಅಪರೂಪವಾಗಿ ಕಂಡುಬರುತ್ತಿದ್ದರು. ಇದರಿಂದ ತಮ್ಮ ಸೈನ್ಯವು ಎಷ್ಟು ಹ್ರಾಸವಾಗಿದೆಯೆಂಬದು ಚಕ್ಕನೆ ಆತನ ಹೃದಯದಲ್ಲಿ ವಿದ್ಯುತ್ತಿನ ಪ್ರಕಾಶದಂತೆ ಹೊಳೆಯಿತು. ತನ್ನ ಸೂಚನೆಯ ಮೇರೆಗೆ ಛಾವಣಿಯಿಂದ ಇನ್ನೂ ಸಹಾಯಕ ಸೈನ್ಯವು ಬಾರದ್ದರಿಂದ ಆತನು ಅತ್ಯಂತ ರೊಚ್ಚಿಗೆದ್ದನು. ಈ ವಿನ ತನ್ನ

ಸತ್ವಪರೀಕ್ಷಾಕಾಲವೇ ಪ್ರಾಪ್ತವಾಗಿದೆಯೆಂದು ಭಾವಿಸಿದನು ಆಗಿನ ಕಾಲದಲ್ಲಿ ಅಪ್ಪಾಜಿಯಲ್ಲದೆ ಬೇರೊಬ್ಬನು ಸೇನಾನಾಯಕನಾಗಿದ್ದರೆ ಕಾಳಗದ ಕಣದಿಂದ ಕಾಲ್ತೆಗೆಯುತ್ತಿದ್ದನು. ಇಲ್ಲವೆ ಶತ್ರುಗಳಿಗೆ ಶರಣಾಗತನಾಗುತ್ತಿದ್ದನು. ಆದರೆ ಅಪ್ಪಾಜಿಯಂಥ ಕಡುಗಲಿಯು ಇವೆರಡನ್ನೂ ಮಾಡುವ ಹಾಗಿದ್ದಿಲ್ಲ. ಅವನು ಮನಸ್ಸಿನಲ್ಲಿ ಶ್ರೀ ಪರಶುರಾಮನನ್ನು ಧ್ಯಾನಿಸಿದನು. ಆ ವೀರನ ಉತ್ಸಾಹವು ಕುಗ್ಗುವದರ ಬದಲು ಇಮ್ಮಡಿಸಿತು. ಅವನ ಬಾಹುಗಳು ಸ್ಫುರಣ ಹೊಂದತೊಡಗಿದವು. ಇಂಥ ಅಸಹಾಯ ಸ್ಥಿತಿಯಲ್ಲಿಯೂ ಶತ್ರುಸಂಹಾರ ಮಾಡಿ ವಿಜಯ ಸಂಪಾದಿಸುವೆನೆಂಬ ಆತ್ಮವಿಶ್ವಾಸವು ಅವನಲ್ಲಿ ದೃಢವಾಯಿತು. ಪ್ರತ್ಯಕ್ಷ ಪರಶುರಾಮನೇ ಅವನ ಹೃದಯದಲ್ಲಿ ವಾಸಿಸಿ ಯುದ್ಧಮಾಡುವನೋ ಎಂಬ ಹಾಗೆ ತೋರಿತು. ಆತನ ಉಗ್ರರೂಪ, ಯುದ್ಧಕೌಶಲ್ಯ, ಅಖಂಡ ಧೈರ್ಯ ಇವುಗಳನ್ನು ನೋಡಿ ಫಿರಂಗಿಗಳು ಅಂಜಿದರು. ಆತನ ಮುಂದೆ ನಿಲ್ಲಲಿಕ್ಕೆ ಅವರಿಗೆ ಶಕ್ತಿ ಸಾಲದಾಯಿತು. ತಮ್ಮ ಸೈನಿಕರು ಹಿಂಜರಿಯಹತ್ತಿದ್ದನ್ನು ನೋಡಿ ಪೆರೆರಾ ಸರದಾರನಿಗೆ ಅತ್ಯಂತ ತ್ವೇಷವುಂಟಾಯಿತು. ಆತನು ಅಪ್ಪಾಜಿಯನ್ನು ತುಂಡರಿಸಿಬಿಡುವೆನೆಂದು ಅವನ ಮೇಲೇರಿ ಬಂದನು. ಕೆರಳಿದ ಸಿಂಹನಂತಿರುವ ಅಪ್ಪಾಜಿಗೆ ಪೆರೆರಾ ಸರದಾರನು ತನ್ನ ಮೇಲೇರಿ ಬಂದದ್ದನ್ನು ನೋಡಿ ಅತ್ಯಂತ ಆವೇಶವುಂಟಾಯಿತು. ಆತನೂ ಖಡ್ಗವನ್ನು ಹೊರಳಿಸುತ್ತ ಪೆರೆರಾ ಸರದಾರನ ಮೇಲೆ ಧುಮುಕಿದನು. ಇಬ್ಬರಿಗೂ ಕೈಗೆ ಕೈಹತ್ತಿ ದ್ವಂದ್ವಯುದ್ಧಕ್ಕಾರಂಭವಾಯಿತು. ಆ ಫಿರಂಗೀ ಬಹಾದ್ದೂರನು ಎಷ್ಟೇ ಶೂರನಾಗಿದ್ದರೂ ಅಪ್ಪಾಜಿಯ ರಣಕೌಶಲ್ಯಕ್ಕೆ ತಡೆಯಲಿಲ್ಲ. ಉಭಯತರೂ ಕೆಲಹೊತ್ತು ಕಾದಾಡುವಷ್ಟರಲ್ಲಿ ಅಪ್ಪಾಜಿಯ ಕಡತದಿಂದ ಪೆರೆರಾಸರದಾರನು ಇಹಲೋಕದ ಯಾತ್ರೆಯನ್ನು ಮುಗಿಸಿದನು. ಫಿರಂಗಿಗಳ ಸೈನ್ಯದಲ್ಲಿ ಒಂದೇ ಸವನೆ ಕೋಲಾಹಲವೆದ್ದಿತು. ಕಿಲ್ಲೇದಾರನಾದ ಮೇನೇಸೀಝನು ಹೆಬ್ಬಾಗಿಲಬಳಿಯಲ್ಲಿಯೇ ಇದ್ದನು. ಪೆರೆರಾಸರದಾರನು ಬೀಳುವದಕ್ಕೂ ಹೋಳಕರನ ಸೈನ್ಯವು ಕಿಲ್ಲೆಯ ಬಳಿಗೆ ಬರುವದಕ್ಕೂ ಮೇಳುಬಿದ್ದಿತು. ತಮ್ಮ ಕಡೆಯ ದೊಡ್ಡ ಸರದಾರನಾದ ಪೆರೇರಾನು ಮಡಿದಿದ್ದು ಶತ್ರುಗಳಸಹಾಯಕ್ಕೆ ಹೊಸಸೈನ್ಯವು ಬಂತೆಂಬದು ತಿಳಿದಕೂಡಲೆ ಮೇನೇಸೀಝನು ಪೌಹಾರಿ ಹೋದನು. ಅವನು ಮುತ್ತಿ

ಗಾಣದೆ ನಿಂತಿರಲು ಜೇಮೆಲ್ಲೋನು ಓಡಿಬಂದು ಅವನನ್ನು ಎಚ್ಚರಿಸಿದನು. ಕೂಡಲೆ ಗಾಬರಿಗೊಂಡ ಆ ಕಿಲ್ಲೇದಾರನು ಅವಶಿಷ್ಟ ತನ್ನ ಸೈನ್ಯಕ್ಕೆ ಕಿಲ್ಲೆಯೊಳಗೆ ಸೇರಲು ಅಪ್ಪಣೆಕೊಟ್ಟು ಒಮ್ಮೆಲೆ ಕಿಲ್ಲೆಯ ಹೆಬ್ಬಾಗಿಲವನ್ನು ಹಾಕಿಸಿಬಿಟ್ಟನು. ಶತ್ರುಗಳು ಪಲಾಯನ ಹೇಳಿಸುವರೆಂಬದು ತಿಳಿದ ಕೂಡಲೆ ಮರಾಟರು ಧಾವಿಸಿ ಕೋಟೆಯ ಹೊರಗೆ ಉಳಿದ ಫಿರಂಗೀದಂಡಾಳುಗಳನ್ನು ಹಿರಿಹಿಡಿದರು.

ಕೋಟೆಯ ಹೆಬ್ಬಾಗಿಲವನ್ನು ಬಂದು ಮಾಡಿಸಿದ ಮೇನೇಸೀಝನು ನೆಟ್ಟಗೆ ತೋಫಖಾನೆಗೆ ಬಂದು ತೋಫನ್ನು ಪ್ರಾರಂಭಮಾಡಿದನು. ಫಿರಂಗಿಗಳ ತೋಫಿನ ಮುಖವು ತಮ್ಮ ಕಡೆಗೇ ಆಗಿ ಅದು ಬೆಂಕಿಯ ಮಳೆಗರೆಯಲಾರಂಭಿಸಲು ಅಪ್ಪಾಜಿಯು ಒಳ್ಳೇ ಧೂರ್ತತನದಿಂದ ಇಂದಿನ ಈ ಯುದ್ಧವನ್ನು ಇಷ್ಟಕ್ಕೇ ನಿಲ್ಲಿಸಬೇಕೆಂದು ತನ್ನ ಸೈನಿಕರಿಗೆ ಅಪ್ಪಣೆ ಮಾಡಿ ವಿಜಯದ ಉಬ್ಬಿನಿಂದ ಛಾವಣಿಯ ಕಡೆಗೆ ಸಾಗಿದನು. ಆ ದಿನ ಮರಾಟರ ಛಾವಣಿಯಲ್ಲಿಯೂ, ಫಿರಂಗಿಗಳ ದಂಡಿನಲ್ಲಿಯೂ ಚಿಮಣಾಜಿಯ ಕಲಿತನದ ಸುದ್ದಿಯೇ ಸುದ್ದಿಯು! ಆ ಬ್ರಾಹ್ಮಣ ವೀರನ ಕಲಿತನವನ್ನು ಪ್ರತ್ಯಕ್ಷ ಕಂಡು ಮೇನೇಸೀಝನು ಆಳವಾದ ಚಿಂತೆಯಲ್ಲಿ ಮುಳುಗಿದನು.

---

## (೨೧) ವಿಷಯಸುಖದ ಹುಚ್ಚು.



ಹಾವಿನ ಬಾಯಲ್ಲಿ ಸಿಕ್ಕ ಕಪ್ಪೆಯು ಅರಕ್ಷಣದಲ್ಲಿ ಕಪ್ಪೆಯ ಜನ್ಮವನ್ನು ನೀಗುವ ಸಂದರ್ಭದಲ್ಲಿಯೂ ಅದು ಅಳವಿನೊಳಗೆ ಬಂದ ನೊಣವನ್ನು ಜಪ್ಪಿಸಿ ಒಡಿದು ತಿಂದು ಸುಖಿಯಾಗ ಬೇಕೆಂದು ಹವಣಿಸುತ್ತಿರುವದು. ಈ ಮೂರ್ಖ ಪ್ರಾಣಿಯ ಅಜ್ಞಾನಕ್ಕೆ ಮಾನವರಾದ ನಾವು ನಗುತ್ತಿರುವೆವು. ಆದರೆ ತಿಳಿವಳಿಕೆಯಿದ್ದ ಮಾನವರೆನಿಸುವ ನಮ್ಮ ಮೂರ್ಖತನಕ್ಕೆ ಏನೆನ್ನಬೇಕೋ ತಿಳಿಯದಾಗಿದೆ. ವಿಷಯಸುಖದ ಹಂಬಲವು ಮಾನವೇತರ ಪ್ರಾಣಿಗಳಿಗೆ ಎಷ್ಟು ಇರುವದೋ ಅದರ ನೂರಾರು ಪಟ್ಟು ಹಂಬಲವು ನಮಗಿರುತ್ತದೆ. ಈ ಹಂಬಲದಿಂದ ನಮ್ಮ ಭವಿತವ್ಯತೆಯ ಕಲ್ಪನೆಯನ್ನೇ ನಾವು ಮರೆತು ಬಿಡುವೆವು. ಕಾಲಸರ್ಪವು ನಮ್ಮಗೋಸ್ಕರವಾಗಿ ಜಪ್ಪಿಸಿ ಕುಳಿತಿರುತ್ತದೆಂಬದರ ಅರಿವು ನಮಗೆ

ಇರುವದಿಲ್ಲ. ಯಾವಾಗ ನಾವು ಕಾಲಸರ್ಪದ ಭಕ್ಷ್ಯಸ್ಥಾನದಲ್ಲಿ ಬೀಳುವೆವೋ ಎಂಬದರ ನಿಯಮವಿಲ್ಲದಿದ್ದರೂ ಸಾವಿರಾರು ವರುಷ ಬಾಳುವವರಂತೆ ನಮ್ಮ ಮನೋಭಾವನೆಯಿರುತ್ತದೆ. ಈ ನಮ್ಮ ಅಜ್ಞಾನವು ಮೇಲಿನ ಕಪ್ಪೆಯ ಅಜ್ಞಾನಕ್ಕಿಂತಲೂ ಅಧಿಕವಾದದ್ದೆಂದು ಯಾರು ತಾನೇ ಒಪ್ಪಿಕೊಳ್ಳಲಿಕ್ಕಿಲ್ಲ! ಹೀಗಿದ್ದು ನಾವು ಕಪ್ಪೆಗೆ ನಗುವ ಕಾರಣವೇನು? ನಮ್ಮ ಅಗಾಧವಾದ ಅಜ್ಞಾನವೇ ಕಾರಣವಲ್ಲವೆ?

ಈ ಮೇಲಿನ ವಿವರಣೆಯಂತೆ ಮನುಷ್ಯರಾದ ನಾವು ಅಜ್ಞಾನಾಂಧಕಾರದಲ್ಲಿ ಮುಳುಗಿ ವಿಷಯ ಸುಖಾಪೇಕ್ಷಿಗಳಾದ್ದರಿಂದಲೇ ನಮ್ಮಿಂದ ಅನನ್ವಿತ ಕೃತ್ಯಗಳಾಗುತ್ತವೆ. ಯಾವದನ್ನು ನಾವು ಸುಖವೆಂದು ತಿಳಿಯುವೆವೋ ಅದು ಮೂರ್ತಿಮಂತ ದುಃಖವಾಗಿರುತ್ತದೆ. ಮೃಗವು ಮೃಗಜಲಕ್ಕೆ ಮೋಹಿಸಿದಂತೆ ನಾವು ವಿಷಯದಲ್ಲಿ ಸುಖವಿರುವದೆಂದು ಮೋಹಿಸುವೆವು. ಈ ಭ್ರಾಂತಿಯಿಂದ ಕೊನೆಗೆ ನಾವೇ ಮೋಸ ಹೋಗಿ ಅಪಾರವಾದ ದುಃಖವನ್ನನುಭವಿಸುವೆವು. ಜಗತ್ತಿನ ಅನುಭವವು ಹೀಗಿದ್ದರೂ ಪ್ರತಿಯೊಬ್ಬ ವ್ಯಕ್ತಿಗೆ ಹೀಗೆ ಅನುಭವವು ಬರುತ್ತಿದ್ದರೂ ನಮ್ಮ ಮನಸ್ಸು ಮಾತ್ರ ಆ ಭ್ರಾಂತಿಯನ್ನು ಬಿಡುವದಿಲ್ಲ. ಇದೇ ಪರಮ ಸೋಜಿಗವು. ಜಗತ್ತಿನಲ್ಲಿ ಆತ್ಯಾಶ್ಚರ್ಯದ ಸಂಗತಿಯೆಂದರೆ ಇದೇ; ಇರಲಿ.

ಗುಲಾಂಕಾದರನೆಂಬ ಸೆರೆಮನೆ ಕಾವಲುಗಾರನು ಚಂದ್ರಾಸುಂದರಿಯ ವಿಷಯವಾಗಿ ಪಾಪಬುದ್ಧಿಯನ್ನು ತಾಳಿದ್ದನೆಂಬದು ನಮ್ಮ ವಾಚಕರ ಸ್ಮರಣೆಯಲ್ಲಿರಬಹುದು. ಅದರಂತೆ ಆತನು ಸೆರೆಮನೆಯಲ್ಲಿ ನಡಿಸಿದ ಕಾರಸ್ಥಾನವೂ ನೆನಪಿನಲ್ಲಿರಬಹುದು. ಆದರೆ ಆ ಕಾರಸ್ಥಾನಗಳೆಲ್ಲ ನಿಷ್ಫಲವಾಗಿ ಅದರಿಂದ ಗುಲಾಂಕಾದರನೇ ಪೆಟ್ಟು ತಿಂದು ಚಂದ್ರಾತರುಣಿಯು ಅಂತರಿಸಲು, ಆ ಕಾಮುಕ ಸ್ವಭಾವದ ಕಾವಲುಗಾರನಿಗೆ ಸ್ವಲ್ಪವೂ ಪಶ್ಚಾತ್ತಾಪವಾಗಲಿಲ್ಲ. ಪರವನಿತೆಯರ ಮೇಲೆ ಪಾಪವಾಸನೆ ತಾಳುವದು ಇಹ-ಪರಗಳಿಗೂ ಅಪಾಯವೆಂಬದು ಅವನ ಲಕ್ಷದಲ್ಲಿ ಬರಲಿಲ್ಲ. ಅವನ ಪಾಪೀ ಮನಸ್ಸು ಆ ಸುಂದರಿಯ ಪ್ರಾಪ್ತಿಯ ಸಲುವಾಗಿ ಹೆಚ್ಚು ಆತುರತೆಯನ್ನು ತಾಳಿತು.

ಯುದ್ಧದ ಪ್ರಸಕ್ತಿಯು ಒತ್ತಿ ಬಂದದ್ದರಿಂದ ವಸಯಿ ಕಿಲ್ಲೆಯೊಳಗಿನ ಅಧಿಕಾರಿಗಳ ಬಿಗುವು ಕಡಿಮೆಯಾಗಲು ಗುಲಾಂಕಾದರನು ಬಂಧ

ಮುಕ್ತನಾಗಿ ಚಂದ್ರಾತ್ರತರುಣಿಯು ಎಲ್ಲಿರುವಳೆಂಬದನ್ನು ಶೋಧಿಸಲುಪ ಕ್ರಮಿಸಿದನು. ಅರಾಜಕತೆಯುಂಟಾದಾಗ ಇಂಥ ಪಾಪೀ ಜನರಿಗೆ ಪಾಪ ಕೃತ್ಯಗಳನ್ನು ಸಾಧಿಸಿಕೊಳ್ಳುವದಕ್ಕೆ ಬಹುಮಟ್ಟಿಗೆ ಆಸ್ಪದವಿರುತ್ತದೆ. ಕಿಲ್ಲೆಯೊಳಗಿನ ಸರ್ವರ ಲಕ್ಷವೂ ಶತ್ರು ಸಂಹಾರದ ಕಡೆಗೂ, ಕೋಟೆಯ ರಕ್ಷಣೆಯ ಕಡೆಗೂ ಇದ್ದರೆ ನರಾಧಮನು ಗುಲಾಂಕಾದರನ ಲಕ್ಷವು ಚಂದ್ರಾ ತರುಣಿಯನ್ನು ಶೋಧಿಸಿ ಆಕೆಯನ್ನು ವಶಪಡಿಸಿಕೊಳ್ಳುವದರ ಕಡೆಗಿತ್ತು. ಹಾಯ್! ಹಾಯ್! ವಿಷಯಲಂಪಟರಿಗೆ ವಿಷಯಸುಖದ ಹೊರತು ಬೇರೆ ಮಾತೇ ಗೊತ್ತಿರುವದಿಲ್ಲ. ಇಂಥ ನರಪಶುಗಳಿಗೆ ದೂರಿನಿಂದಲೇ ನಮ ಸ್ಕಾರವಿರಲಿ.

ಗುಲಾಂಕಾದರನಿಗೆ ಈಗ ಸೆರೆಮನೆಯ ಕಾವಲುಗಾರನ ಕೆಲಸವು ಇದ್ದಿಲ್ಲ. ಸೆರೆಯಾಳುಗಳೆಲ್ಲರೂ ಯುದ್ಧಸೌರಣೆಗೆ ತೊಡಗಿದ್ದರಿಂದ ಜೇಲ ಖಾನೆಯಲ್ಲಿ ಕಣ್ಣುಕಪ್ಪಡಿಗಳು ಆಡಲಾರಂಭಿಸಿದ್ದವು. ಕಿಲ್ಲೇದಾರನು ಗುಲಾಂಕಾದರನನ್ನು ಸಮುದ್ರದ ಮೇಲಿದ್ದ ಫಿರಂಗೀ ಅಧಿಕಾರಿಗಳಿಗೆ ಆಹಾರದ ಪದಾರ್ಥಗಳನ್ನು ಒದಗಿಸಿ ಕೊಡುವ ಕೆಲಸಕ್ಕೆ ನೇಮಿಸಿದ್ದನು. ಆದರೆ ಆ ವಿಷಯಲಂಪಟೀ ಪುರುಷನು ಆ ಕೆಲಸಕ್ಕೆ ತೊಡಗದೆ, ಅದನ್ನು ಬೇರೊಬ್ಬರ ಕೊರಳಿಗೆ ಕಟ್ಟಿ ತಾನು ಉಪಾಯದಿಂದ ಪಾರಾದನು. ಅವ ನಿಗೆ ಈಗ ಯಾವ ಮಹತ್ವದ ಕೆಲಸದ ಭಾರವೂ ಇದ್ದಿಲ್ಲ. ಆದರೆ ಚಂದ್ರಾ ತರುಣಿಯ ಶೋಧದ ಕೆಲಸವೇ ಆವನಿಗೆ ಅತ್ಯಂತ ಮಹತ್ವದ್ದಾಗಿತ್ತೆಂದರೆ ವಿಶೇಷವಾಗಿ ಒಪ್ಪುವದು. ಕೋಟೆಯ ಅಧಿಕಾರೀ ವರ್ಗವೆಲ್ಲವೂ ಹೌಹಾರಿ ಕುಳಿತಾಗ ಗುಲಾಂಕಾದರನಂಥ ನೀಚ ಪುರುಷನ ಅಧಮತನವನ್ನು ಬೈಲಿ ಗೆಳೆಯುವವರಾರು? ಆದ್ದರಿಂದ ಆತನು ಸ್ವೇಚ್ಛೆಯಾಗಿ ಕಿಲ್ಲೆಯೊಳಗೆ ತಿರುಗುತ್ತಿದ್ದನು.

ಗುಲಾಂಕಾದರನು ದೊಡ್ಡ ಅಧಿಕಾರಿಯಲ್ಲ; ಶ್ರೀಮಂತನೂ ಅಲ್ಲ ಅಷ್ಟದರಿದ್ರನು. ಆತನ ದೇಹದಾರ್ಢ್ಯವು ತಕ್ಕಮಟ್ಟಿಗಿತ್ತು. ಮಧ್ಯಮ ವಯಸ್ಸು, ಇಂಥವನು ಸುಂದರಯುವತಿಯರ ಪ್ರೇಮಕ್ಕೆ ಪಾತ್ರನಾಗುವ ನೆಂಬದು ನೀಲಿಕೆಟ್ಟಸುದ್ದಿಯಂತೆ ಮಿಥ್ಯವೆಂದೇ ಹೇಳಬಹುದು. ಆದರೆ ಮನುಷ್ಯನು ಕುರೂಪಿಯಿರಲಿ, ಸುರೂಪಿಯಿರಲಿ, ದರಿದ್ರನಿರಲಿ, ಧನವಂತ ನಿರಲಿ, ಅಧಿಕಾರವಿರಲಿ, ಇರದೆ ಇರಲಿ, ಅವನ ಮನಸ್ಸು ಒಮ್ಮೆ ಪಾಪರತ

ವಾಯಿತೆಂದರೆ ಅದರಿಂದ ಪರಾವೃತ್ತವಾಗುವದು ಮುಂದೆ ಆತನಿಗೆ ಅಶಕ್ಯವೇ ಆಗುವದು. ಆ ಪಾಪರೂಪೀ ಜಿಡ್ಡನ್ನು ತೊಳೆಯಲು ಎಂಥ ಕ್ಷಾರಪದಾರ್ಥವಾದರೂ ಕೈಯೂರುವದು. ಪ್ರಸ್ತುತದಲ್ಲಿ ಗುಲಾಂಕಾದರನ ಸ್ಥಿತಿಯೂ ಹೀಗೆಯೇ ಆಗಿತ್ತು. ಅವನು ಚಂದ್ರಾತರುಣಿಯ ರೂಪಕ್ಕೆ ಮನಸೋತಿದ್ದನು. ಆದರೆ ಆಕೆಯ ಅಭಿಲಾಷೆಯನ್ನು ಬಿಡುವದು ಆತನಿಗೆ ಎಷ್ಟು ಮಾತ್ರಕ್ಕೂ ಶಕ್ಯವಿಲ್ಲದಾಯಿತು. ಅವನಿಗೆ ಸರ್ವದಾ ಆ ಸುಂದರಿಯ ಧ್ಯಾನವೇ ಹತ್ತಿ ಹೋಗಿತ್ತು. ಇದರಿಂದ ಅವನಿಗೆ ಒಮ್ಮೊಮ್ಮೆ ಹಸಿವು ನೀರಡಿಕೆಗಳ ಪರಿವೆಯು ಸಹ ಆಗುತ್ತಿರಲಿಲ್ಲ. ಇದಕ್ಕೇ ವಿವೇಕಿಗಳು ವಿಷಯಸುಖದ ಹುಚ್ಚೆಂದು ಕರೆಯುವರು.

ಈ ಹುಚ್ಚು ಅತಿರೇಕವಾದ್ದರಿಂದ ಆ ನರಾಧಮನಿಗೆ ಎಲ್ಲಿ ಹೋದರೂ ಸಮಾಧಾನವಾಗದಾಯಿತು. ಸರ್ವದಾ ತಳಮಳದಿಂದ ಅವನ ದೇಹವು ಬೆಂದು ಹೋಯಿತು. ದುರ್ನಿವಾರವಾದ ವಿಷಯಲಂಪಟಬುದ್ಧಿಯುಳ್ಳವರಿಗೆ ಕೊನೆಗೆ ತಳಮಳವೇ ಗತಿಯಾಗುವದೆಂಬದನ್ನು ಅವನು ಜಗತ್ತಿನ ನಿದರ್ಶನಕ್ಕೆ ತಂದುಕೊಡಲಾರಂಭಿಸಿದನು. ಈ ತಳಮಳದಿಂದ ಅವನು ಒಮ್ಮೊಮ್ಮೆ ತನ್ನ ಮನಸ್ಸಿನಲ್ಲಿಯೇ--"ನಾನು ಎಂಥ ಮೂರ್ಖನು? ಆ ಸುಂದರಿಯು ನನಗೆ ಹ್ಯಾಗೆ ಪ್ರಾಪ್ತವಾಗಬೇಕು? ಆಕೆಯ ಹಂಬಲವನ್ನು ಹಿಡಿಯುವದು ವ್ಯರ್ಥವೇ ಸರಿ!" ಎಂದು ಭಾವಿಸುತ್ತಿದ್ದನು. ಮತ್ತೊಮ್ಮೆ ಪುರುಷಪ್ರಯತ್ನಕ್ಕೆ ಯಾವದು ತಾನೇ ಅಶಕ್ಯವು? ಎಂದು ತಿಳಿದು ಆ ಪಾಪೀ ಕೆಲಸಕ್ಕೆ ಉತ್ಸುಕನಾಗುತ್ತಿದ್ದನು. ಹೀಗೆ ಆತನು ಒಮ್ಮೆ ನಿರಾಶೆ, ಮತ್ತೊಮ್ಮೆ ಆಶೆಗಳೆಂಬ ದ್ವಂದ್ವಗಳಲ್ಲಿ ಸಿಕ್ಕು ಬಿಚ್ಚಿಯಾಗುತ್ತ ಆ ಕಿಲ್ಲೆಯಲ್ಲಿ ತಿರುಗುತ್ತಿರಲು ಮದ್ದಿನಖಜಾನೆಯ ಕಾವಲುಗಾರಳಾಗಿದ್ದ ಚಂದ್ರಾತರುಣಿಯು ಒಮ್ಮೆ ಅವನ ದೃಷ್ಟಿಗೆ ಬಿದ್ದಳು. ಆ ಕಾಮಾಂಧನು ಸೋಜಿಗಗೊಂಡನು. ತಾನು ಎಚ್ಚರಿಕೆಯಲ್ಲಿರುವೆನೋ ಸ್ವಪ್ನದಲ್ಲಿರುವೆನೋ ಎಂದು ಯೋಚಿಸಿದನು. ಉತ್ತರಕ್ಷಣದಲ್ಲಿ ಅವನ ಮತಿಯು ಅಸ್ಥಿರವಾಗಿ ಇವಳು ಚಂದ್ರಾತರುಣಿಯಾಗಿರಬಹುದೇ? ಛೀ, ಆಗಿರಲಿಕ್ಕಿಲ್ಲ! ಅವಳು ಇಷ್ಟು ಕೃಶಾಂಗಿನಿಯೇ? ಅವಳ ಸುಂದರ ಮುಖವೆಲ್ಲಿ? ಕಂದಿಹೋದ ಇವಳ ಮುಖವೆಲ್ಲಿ? ನನಗೆ ಏನೋ ಭಾಸವಾಗಿರಬಹುದು, ಎಂದು ತಿಳಿದನು. ಆದರೆ ಈ ತಿಳುವಳಿಕೆಯಾದರೂ ಬಹಳ ಹೊತ್ತಿನ ವರೆಗೆ ಇರಲಿಲ್ಲ.

ಮತ್ತೊಂದು ಕ್ಷಣದಲ್ಲಿ ಅದೂ ಮಾಯವಾಯಿತು. ಈ ಪುರುಷವೇಷಧಾರಿಣಿಯು ನಿಶ್ಚಯವಾಗಿ ಚಂದ್ರಾತರುಣಿಯೇ-ನನ್ನ ಪ್ರಾಣಪ್ರಿಯಳೇ ಅಹದು ಎಂದು ನಿಶ್ಚಯಿಸಿದನು. ಪ್ರಿಯವಾಚಕರೇ, ಗುಲಾಂಕಾದರನ ಈ ಹುಚ್ಚುತನಕ್ಕೆ ನಿಮಗೆ ನಗೆ ಬರಬಹುದಲ್ಲವೇ? ಚಂದ್ರಾತರುಣಿ ಯಾರೋ, ಈ ಗುಲಾಂಕಾದರನಾರೋ? ಏನೂ ಸಂಬಂಧವಿಲ್ಲದೆ ಕೇವಲ ತನ್ನೊಬ್ಬನ ಮನಸ್ಸಿನ ಶಳತದಿಂದ ಅವನು ಆ ಸುಂದರಿಗೆ ತನ್ನ ಪ್ರಾಣಪ್ರಿಯಳೆಂದು ಭಾವಿಸುವದು ಹುಚ್ಚು ತಲೆಗೇರಿದ ಲಕ್ಷಣವಲ್ಲದೆ ಬೇರಿನ್ನೇನು? ಇರಲಿ.

ಹೀಗೆ ನಿಶ್ಚಯಿಸಿದ ಗುಲಾಂಕಾದರನು ಮನಸ್ಸಿನಲ್ಲಿಯೇ ಕೇವಲ ಸ್ವರ್ಗೀಯ ಸೌಖ್ಯವನ್ನನುಭವಿಸಲಾರಂಭಿಸಿದನು. ಯಾವ ಸುಂದರಿಯನ್ನು ಇಡೀ ಆಯುಷ್ಯದಲ್ಲಿ ಎಂದೂ ನೋಡಲಾರೆನೆಂದು ಅವನು ಭಾವಿಸಿದ್ದನೋ ಆ ಸುಂದರಿಯು ಅತ್ಯಲ್ಪ ಕಾಲದಲ್ಲಿಯೇ ದರ್ಶನಕೊಟ್ಟದ್ದನ್ನು ತಿಳಿದು ಅವನ ಮನಸ್ಸು ಯಾವದೋ ಒಂದು ಮಹತ್ಕಾರ್ಯವನ್ನು ಮಾಡಿದಂತೆ ಪ್ರಸನ್ನತೆಯನ್ನು ಹೊಂದಿತು. ಅವನು ಆ ಸ್ಥಳದಲ್ಲಿಯೇ ಬಹಳ ಹೊತ್ತಿನ ವರೆಗೆ ನಿಂತು ಕುಣಿದಾಡಿದನು. ಆಗ ಅವನಿಗೆ ತಾನು ಯಾರೆಂಬದರ ಅರಿವು ಇದ್ದಿಲ್ಲ. ಕೆಲಹೊತ್ತಿನ ಮೇಲೆ ಎಚ್ಚತ್ತನು. ಕಣ್ಣು ತೆರೆದು ನೋಡಲು ಸುಂದರಿಯು ಅವನ ದೃಷ್ಟಿಗೆ ಬೀಳಲಿಲ್ಲ. ಉತ್ತರಕ್ಷಣದಲ್ಲಿಯೇ ಅವನ ಮನಸ್ಸು ಕುಗ್ಗಿತು. ಅವನು ಮತ್ತಿಷ್ಟು ಸಮೀಪಕ್ಕೆ ಬಂದನು. ಆದರೂ ಅವಳು ಕಾಣಿಸಲಿಲ್ಲ. ಬಳಿಕ ಅವನು ಆ ಮದ್ದಿನ ಖಜಾನೆಯ ತೀರ ಹತ್ತಿರಕ್ಕೆ ಬಂದನು. ಸುಂದರಿಯು ಪಹರೆ ಮಾಡುತ್ತ ನಿಂತುಕೊಂಡಿದ್ದಳು. ಅವಳು ಗುಲಾಂಕಾದರನನ್ನು ಕಂಡಕೂಡಲೆ ಒಳ್ಳೇ ಗಂಭೀರಧ್ವನಿಯಿಂದ "ನೀನು ಯಾರು? ಇಲ್ಲಿ ನಿನ್ನ ಕೆಲಸವೇನು?" ಎಂದು ಗದ್ದರಿಸಿದಳು. ಆಕೆಯ ಧ್ವನಿಯು ಗಂಭೀರವಾಗಿದ್ದರೂ ಅದರಲ್ಲಿ ಕಂಡು ಬಂದ ಮಾರ್ದವವನ್ನು ತಿಳಿದು ಗುಲಾಂಕಾದರನಿಗೆ ತುಂಬಾ ಆನಂದವಾಯಿತು. ಇದೇ ಸಮಯದಲ್ಲಿಯೇ ಆಕೆಯ ಪ್ರೇಮಯಾಚನೆ ಮಾಡಬೇಕೆಂದು ಅವನ ಮನಸ್ಸಿನಲ್ಲಿ ಬಂದಿತು. ಆದರೆ ತನ್ನಂಥ ತಿರುಕನಿಗೆ ಆ ಖಂಭೀರ ಸ್ತ್ರೀಯು ಪ್ರೇಮಭಿಕ್ಷೆಯನ್ನು ಹಾಕಲಾರಳೆಂಬದು ಅವನ ಲಕ್ಷದಲ್ಲಿ ಬರಲು ಅವನು ಆ ಹವ್ಯಾಸವನ್ನು ಬಿಟ್ಟುಬಿಟ್ಟನು. ಬಳಿಕ ಅವನು

ಇಲ್ಲಿಯೇ ಕೆಲಹೊತ್ತು ನಿಂತರೆ ವಿಪರೀತಪರಿಣಾಮವಾದೀತೆಂದು ಭಾವಿಸಿ ಮೆಲ್ಲನೆ ಅಲ್ಲಿಂದ ಕಾಲ್ತೆಗೆದನು ಆದರೆ ಅವನ ಕಾಲುಗಳು ಆ ಸ್ಥಳದಿಂದ ಕಿತ್ತಲಾರದಾದವು. ಮನಸ್ಸೆಲ್ಲ ಆ ಸುಂದರಿಯ ಬಳಿಯಲ್ಲಿಯೇ ಸುಳಿದಾಡಹತ್ತಿದ್ದರಿಂದ ಜಡಶರೀರವು ಹ್ಯಾಗೆ ಚಲಿಸುವದು? ಅವನ ಈ ಸ್ಥಿತಿಯನ್ನು ನೋಡಿ ಚಂದ್ರಾಸುಂದರಿಯು ಗಹಗಹಿಸಿ ನಕ್ಕಳು. ಆಕೆಗೆ ಈತನಾರೆಂಬದು ಮೊದಮೊದಲು ತಿಳಿಯದೆ ಹೋದರೂ ಅವನ ಆ ಲಕ್ಷಣಗಳನ್ನೆಲ್ಲ ತಿಳಿದು ಇವನು ಕಾಮುಕನಾದ ಗುಲಾಂಕಾದರನೇ ಇರಬೇಕೆಂದು ತರ್ಕಿಸಿದಳು. ಪರಸ್ತ್ರೀಲಂಪಟರಾದ ನೀಚಪುರುಷರ ಸ್ಥಿತಿಯು ಎಷ್ಟು ದೈನ್ಯಯುಕ್ತವಾಗುವದೆಂಬದನ್ನು ತಿಳಿದು ಅವಳಿಗೆ ಆ ಕಾಲದಲ್ಲಿ ನಗೆ ಬಂದಿತು. ಅವಳು ಗುಲಾಂಕಾದರನ ನೀಚತನವನ್ನು ಸ್ಮರಿಸಿ ಅವನಿಗೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಸಬೇಕೆಂದು ಎಣಿಕೆ ಹಾಕುತ್ತಿರುವಷ್ಟರಲ್ಲಿ ಅವನು ಆ ಮದ್ದಿನಖಜಾನೆಯಿಂದ ಹೊರಟು ಮಾರ್ಗವ ಕ್ರಮಿಸಲಾರಂಭಿಸಿದನು. ಚಂದ್ರಾಸುಂದರಿಯು, ಚಾಂಡಾಲನು ಹೋದರೆ ಹೋಗಲೊಲ್ಲನೇಕೆ ಎಂದು ಔದಾಸೀನ್ಯವನ್ನು ತಾಳಿ ತನ್ನ ಪಹರೆಯ ಕೆಲಸವನ್ನು ನಡಿಸಿದಳು.

ಆ ದಿನ ಗುಲಾಂಕಾದರನಿಗೆ ಒಂದು ಬಗೆಯಿಂದ ಸಮಾಧಾನವಾಗಿದ್ದರೂ ಪುನಃ ಪುನಃ ಅವನಿಗೆ ಆ ಮದ್ದಿನ ಖಜಾನೆಯ ಬಳಿಗೇ ಹೋಗುವಂತೆ ಮನಸ್ಸಾಗಲಾರಂಭಿಸಿತು ಮನಸ್ಸಿನ ಈ ಕಳಕಳದಿಂದ ಅವನ ಸಮಾಧಾನವು ಹೇಳಹೆಸರಿಲ್ಲದೆ ಹೋಗಿ ಅದರ ಸ್ಥಳವನ್ನು ವಿಲಕ್ಷಣ ತಳಮಳವು ಆವರಿಸಿತು. ಆ ಸುಂದರಿಯ ದರ್ಶನವಾದಾಗ ಅವನು ಯಾವ ಸ್ವರ್ಗೀಯ ಸೌಖ್ಯವನ್ನು ಅನುಭವಿಸಿದ್ದನೋ ಈಗ ಅವನಿಗೆ ಆ ಸ್ವರ್ಗೀಯ ಸೌಖ್ಯದ ಮುಮ್ಮಡಿಯಷ್ಟು ದುಃಖವುತ್ಪನ್ನವಾಯಿತು. ಆ ದುಃಖಭಾರದಿಂದ ಅವನು ತೀರ ಹೈರಾಣಾದನು ಆ ದಿನ ಅವನು ಆ ಸುಂದರಿಯ ವಿಯೋಗ ದುಃಖವನ್ನು ಸಹಿಸಬೇಕಾದರೆ ಅವನದು ಅವನಿಗೆ ಆಗಿಹೋಯಿತು. ಮರುದಿನ ಮದ್ದಿನ ಖಜಾನೆಗೆ ಹೊರಟು ನಿಂತನು. ಮನಸ್ಸು ಪ್ರಸನ್ನವಾಯಿತು. ಅವನ ಮನಸ್ಸೆಲ್ಲ ಮೊದಲು ಆ ಸುಂದರಿಯ ಬಳಿಯಲ್ಲಿಯೇ ಹೋಗಿಬಿಟ್ಟಿತು. ದೇಹವು ಹಿಂದಿನಿಂದ ಸಾವಕಾಶವಾಗಿ ಆ ಮನಸ್ಸನ್ನು ಅನುಸರಿಸಿ ನಡೆಯಿತು. ಇದರಿಂದ ಮುಂದೇನು ಅನರ್ಥವಾದೀತೆಂಬದರ

ಕಲ್ಪನೆಯು ಅವನಿಗೆ ಬರಲಿಲ್ಲ.

ಗುಲಾಂಕಾದರನ ಮನಸ್ಸೆಲ್ಲ ಚಂದ್ರಾಸುಂದರಿಯಲ್ಲಿ ತಲ್ಲೀನವಾಗಿ ಹೋಗಿತ್ತು. ಬಹಿರ್ವ್ಯಾಪಾರದ ಜ್ಞಾನವು ಅವನಿಗೆ ಎಷ್ಟು ಮಾತ್ರಕ್ಕೂ ಇರಲಿಲ್ಲ. ಅವನು ಹ್ಯಾಗೆ ಹ್ಯಾಗೋ ದಾರಿಯನ್ನು ಕ್ರಮಿಸಿ ಹಲವು ಬಗೆಯ ಆಘಾತವನ್ನು ಹೊಂದಿ ಕಲ್ಲು ಮುಳ್ಳುಗಳನ್ನು ತುಳಿದು ಒಮ್ಮೆ ಮದ್ದಿನ ಖಜಾನೆಯನ್ನು ಮುಟ್ಟಿದನು. ಸುಂದರಿಯ ತದೇಕಧ್ಯಾನದಿಂದ ಅವನ ವಿವೇಕ ಶಕ್ತಿಯು ನಷ್ಟವಾಗಿ ಹೋಗಿತ್ತು. ಅವನ ಮನಸ್ಸು ಪುರುಷನಾರು ಸ್ತ್ರೀಯಾರು ಎಂಬದನ್ನು ವಿವೇಚಿಸುವಷ್ಟು ಸ್ಥಿರತೆಯಲ್ಲಿರಲಿಲ್ಲ. ಆ ದಿನ ಚಂದ್ರಾ ಸುಂದರಿಯ ಸರತಿಯಿರದೆ ಆಕೆಯ ಅಣ್ಣನಾದ ನಿಳೋಜಿಯ ಸರತಿಯಿದ್ದಿತು. ಅವನು ಖಜಾನೆಯ ಪಹರೆಯನ್ನು ಮಾಡುತ್ತ ನಿಂತುಕೊಂಡಿದ್ದನು. ಗುಲಾಂಕಾದರನ ಕಣ್ಣಿಗೆ ನಿಳೋಜಿಯು ಚಂದ್ರಾಸುಂದರಿಯಂತೆಯೇ ಭಾಸವಾದನು. ಚಂದ್ರಾತರುಣಿಯ ಹಾಗು ನಿಳೋಜಿಯ ಹೋಲಿಕೆಯಲ್ಲಿ ಬಹುಮಟ್ಟಿಗೆ ಸಾಮ್ಯವಿತ್ತು. ಮೇಲಾಗಿ ಚಂದ್ರಾಸುಂದರಿಯು ಪುರುಷವೇಷ ಧರಿಸಿದ್ದರಿಂದ ಆ ಕಾಮಾಂಧ ಗುಲಾಂಕಾದರನ ಬುದ್ಧಿ ಭ್ರಂಶವಾಗಲಿಕ್ಕೆ ಮತ್ತಿಷ್ಟು ಕಾರಣವಾಯಿತು. ಪಹರೆಮಾಡುವವನು ಪುರುಷವೇಷದ ಆ ಸುಂದರಿಯೇ ಇರಬಹುದೆಂದು ಭಾವಿಸಿದನು. ಹಿಂದಿನ ದಿನ ಆಕೆಯಲ್ಲಿ ಪ್ರೇಮಯಾಚನೆಯನ್ನು ಮಾಡಲು ಉಂಟಾಗಿದ್ದ ಆ ಧೈರ್ಯವು ಈ ದಿನ ಅವನಲ್ಲಿ ಉಳಿದಿರಲಿಲ್ಲ. ದುರ್ನಿವಾರವಾದ ಆತುರತೆಯಿಂದ ಅವನು ಸಮಸ್ತ ಲಜ್ಜೆಯನ್ನೂ ತೊರೆದಿದ್ದನು. ಗಟ್ಟಿ ಧೈರ್ಯವಮಾಡಿ ಆ ಸುಂದರಿಯ ಪ್ರೇಮಯಾಚನೆ ಮಾಡಿಯೇ ತೀರಬೇಕೆಂದು ನಿರ್ಧರಿಸಿದ್ದನು. ಅಂತೆಯೇ ಅವನು ವಿವೇಕ ಶೂನ್ಯನಾಗಿ ನಿಳೋಜಿಯ ಬಳಿಗೆ ಬಂದು—"ಸುಂದರೀ" ಎಂದು ಒದರಿದನು. ಆಗ ನಿಳೋಜಿಯು ಯಾವದೋ ಒಂದು ಯೋಚನೆಯಲ್ಲಿ ತೊಡಗಿದ್ದನು. ಆದ್ದರಿಂದ ಅವನು ಗುಲಾಂಕಾದರನು ಸಮೀಪಕ್ಕೆ ಬಂದದ್ದನ್ನು ಲಕ್ಷಿಸಿರಲಿಲ್ಲ. ಒಮ್ಮೆಲೆ "ಸುಂದರಿ" ಎಂಬ ಶಬ್ದವು ಕಿವಿಗೆ ಬಿದ್ದ ಕೂಡಲೆ ಕಣ್ಣು ತೆರೆದು ನೋಡಿದನು. ಅಧಮಾಧಮನಾದ ಗುಲಾಂಕಾದರನು ಬಂದಿರುವನೆಂಬದು ಅವನಿಗೆ ಗೊತ್ತಾಯಿತು. ಕೂಡಲೆ ಒಳ್ಳೇ ಕಸುವಿನಿಂದ ಆ ನರಾಧಮನ ಬೆನ್ನ ಮೇಲೆ ಗುದ್ದಿದನು. ನಡಮುರಿಯುವ

ಹಾಗೆ ಏಟು ಬೀಳಲು ಗುಲಾಂಕಾದರನು ಎಚ್ಚತ್ತನು. ಅವನ ತಲೆಗೇರಿದ ಹುಚ್ಚು ಕೆಲಮಟ್ಟಿಗೆ ಇಳಿಯಿತು. ಕಣ್ಣು ತೆರೆದು ನೋಡಿದನು. ಎದುರಿಗೆ ದೈತ್ಯನಂತೆ ನಿಳೋಜಿಯು ನಿಂತುಕೊಂಡಿದ್ದನು. ಕೋಮಲೆಯಾದ ಚಂದ್ರಾಸುಂದರಿಯ ಬದಲು ರಾಕ್ಷಸಸದೃಶನಾದ ನಿಳೋಜಿಯ ದರ್ಶನವಾದ ಕೂಡಲೆ ಗುಲಾಂಕಾದರನ ಕೈಕಾಲುಗಳು ಲಟಪಟಸತೊಡಗಿದವು. ಜಾತ್ಯಾಪುಕ್ಕನಾದ ಅವನಲ್ಲಿ ಧೈರ್ಯದ ಗಂಧಕೂಡಾ ಇರದ್ದರಿಂದ ಮುಂದೇನು ಅನರ್ಥ ಸಂಭವಿಸುವದೋ ಎಂದು ದೈನ್ಯದೃಷ್ಟಿಯಿಂದ ನಿಳೋಜಿಯನ್ನು ನೋಡತೊಡಗಿದನು. ತನ್ನ ತಂಗಿಯ ಪಾತಿವ್ರತ್ಯಕ್ಕೆ ಭಂಗ ತರಬೇಕೆಂದು ಪ್ರಯತ್ನಿಸಿದ ಈ ನರಾಧಮನು ಇನ್ನೂ ಆಕೆಯ ಹಂಬಲವನ್ನು ಬಿಟ್ಟಿಲ್ಲವೆಂದು ತಿಳಿದು ನಿಳೋಜಿಯು ಸಂತಪ್ತನಾದನು. ಇಂಥ ನರಾಧಮನನ್ನು ಭೂಮಿಯ ಮೇಲೆ ಜೀವದಿಂದಿರಗೊಡಬಾರದೆಂದು ಅವನು ಬಗೆದನು. ಆ ಮರಾಟವೀರನ ಸಿಟ್ಟು ಅನಿವಾರವಾಯಿತು. ಇನ್ನು ಅವನು ಗುಲಾಂಕಾದರನನ್ನು ಎತ್ತಿ ನೆಲಕ್ಕಪ್ಪಳಿಸಿ ಅವನ ಪ್ರಾಣವನ್ನು ಹಿಂಡತಕ್ಕವನು. ಅಷ್ಟರಲ್ಲಿ ಅವನಿಗೆ ಸುಬುದ್ಧಿ ಉತ್ಪನ್ನವಾಯಿತು. ಈಗಲೇ ಈ ನೀಚನನ್ನು ಕೊಂದರೆ ಫಿರಂಗೀ ಅಧಿಕಾರಿಗಳ ಸಂಶಯಕ್ಕೆ ಕಾರಣವಾಗಿ ತನ್ನ ಕಾರ್ಯ ಸಾಧನೆಗೆ ವಿಘ್ನವೊದಗೀತೆಂಬ ವಿಚಾರವು ಅವನಲ್ಲಿ ಬಂದಿತು. ಯಾವದೊಂದು ಕಾರ್ಯ ಸಾಧನೆ ಮಾಡತಕ್ಕವರು ಎಲ್ಲ ಸಂಗತಿಗಳನ್ನು ವಿಚಾರಮಾಡಬೇಕಾಗುತ್ತದೆ. ವಿಚಾರವಿಲ್ಲದೆ ಮಾಡಿದ ಕೆಲಸವು ಹಸಗೆಡುವದು ನಿಶ್ಚಯವು ಎಂಬ ಸಂಶಯವು ಅವನಿಗೆ ಬಾಧಿಸತೊಡಗಿತು. ಈ ವಿಚಾರದಿಂದ ಅವನ ಸಿಟ್ಟಿನ ಭರವು ಸ್ವಲ್ಪಮಟ್ಟಿಗೆ ಕುಗ್ಗಿತು. ಬಳಿಕ ಅವನು ಆ ಗುಲಾಂಕಾದರನನ್ನು ಹಿಡಿದು ಅವನ ಮುಸುಗೆ ಬಿಗಿದು ಬಳಿಯಲ್ಲಿರುವ ಬೇರೊಂದು ಕೋಣೆಯಲ್ಲಿ ಚಲ್ಲಿದನು. ಹೀಗೆ ನಿಳೋಜಿಯ ಸೆರೆಯಲ್ಲಿ ಸಿಕ್ಕಬಳಿಕ ಗುಲಾಂಕಾದರನ ವಿಷಯಸುಖದ ಹುಚ್ಚು ಕಡಿಮೆಯಾಗಿ ತನ್ನ ಗತಿಯು ಏನಾಗುವದೋ ಎಂಬ ವಿಚಾರವು ಅವನಿಗುಂಟಾಯಿತು. ಸುಣ್ಣವನ್ನು ತಿಂದ ಮಂಗವು ಹಿಂದಿನಿಂದ ಪಶ್ಚಾತ್ತಾಪ ಪಡುವಂತೆ ಗುಲಾಂಕಾದರನ ಸ್ಥಿತಿಯಾಯಿತು.

---

# (೨೨) ಕಿಲ್ಲೇದಾರನ ದೈನ್ಯ.

ಪ್ರಿಯವಾಚಕರೇ, ವಿಷಯಾಂಧನಾದ ಗುಲಾಂಕಾದರನನ್ನು ನಿಳೋಜಿಯ ಸೆರೆಯಲ್ಲಿ ಬಿಟ್ಟುಕೊಟ್ಟು ಕಿಲ್ಲೆಯಲ್ಲಿ ಏನು ನಡೆದಿದೆಯೆಂಬದನ್ನು ನೋಡೋಣ ನಡೆಯಿರಿ.

ಅಪ್ಪಾಜಿಯು ವಿಲಕ್ಷಣವಾದ ರಣಕೌಶಲ್ಯವನ್ನು ತೋರಿಸಿ ಫಿರಂಗಿಗಳಿಗೆ ಎಂದೂ ಮರೆಯುದಂಥ ಅಪಜಯವನ್ನುಂಟುಮಾಡಿ ಪಾಳಯಕ್ಕೆ ತಿರುಗಿ ಹೋಗಲು, ವಸಯಿಾ ಕಿಲ್ಲೆಯ ಅಧಿಕಾರಿಯಾದ ಮೇನೇಸೀಝುನು ಅಪಾರ ಚಿಂತೆಗೆ ಈಳಗಾದನು. ಮರಾಟರು ಬಲಿಷ್ಠರೂ, ವಿಶೇಷ ಸಂಖ್ಯಾಕರೂ ಇದ್ದದರಿಂದ ತಮಗೆ ಜಯ ಸಿಗಲಾರದೆಂಬದು ಅವನಿಗೆ ಮೊದಲಿನಿಂದಲೂ ಅಂಜಿಕೆ ಇದ್ದೇ ಇತ್ತು. ಕೊನೆಗೆ ಅದೇ ಅಂಜಿಕೆಯು ಸತ್ಯವಾಗುವ ಸಮಯವು ಪ್ರಾಪ್ತವಾದ್ದರಿಂದ ಅವನಿಗೆ ಸಾವಿರಾರು ಚೇಳುಗಳು ಕಡಿದಷ್ಟು ವ್ಯಥೆಯಾಗಲಾರಂಭಿಸಿತು. ಯಾವ ಕಡೆಯಿಂದಲೂ ತನಗೆ ಸಹಾಯವು ಸಿಗುವ ಆಶೆಯಿರದ್ದರಿಂದ ಮುಂದೇನು ಮಾಡಬೇಕೆಂಬದೇ ಅವನ ಈ ದಿನದ ಆಲೋಚನೆಯಾಗಿತ್ತು. ಪೆರಿಂಾ ಸರದಾರನು ಬದುಕಿರುವವರೆಗೆ ಅಂದರೆ ಅಪ್ಪಾಜಿಯ ರಣಕೌಶಲ್ಯವನ್ನು ಪ್ರತ್ಯಕ್ಷ ಕಾಣದಿರುವವರೆಗೆ ಆತನಿಗೆ ಒಂದು ಬಗೆಯ ಧೈರ್ಯವಿತ್ತು. ಆದರೆ ಆ ಧೈರ್ಯವು ಈ ದಿನ ಹೇಳಹೆಸರಿಲ್ಲದೆ ಹೊರಟು ಹೋದದ್ದರಿಂದ ಆತನ ದೈನ್ಯವು ಪರಮಾವಧಿಯಾಯಿತು. ಪೌರುಷವು ಅಳಿದು ಹೋಯಿತು. ಇದರಿಂದ ಅವನು ಮೂಢನಂತೆ ಕುಳಿತು ದೈನ್ಯದಿಂದ ಕಿಲ್ಲೆಯ ಕಡೆಗೆ ನೋಡಲಾರಂಭಿಸಿದನು. ಈ ಸ್ಥಿತಿಯಲ್ಲಿ ಕೆಲಹೊತ್ತು ಕ್ರಮಿಸಿದ ಬಳಿಕ ಮೇನೇಸೀಝುನ ಪ್ರಿಯಮಡದಿಯು ಅಲ್ಲಿಗೆ ಬಂದಳು. ಆಕೆಗೆ ಗಂಡನ ಚಿಂತೆಯ ಗೂಢವು ತಿಳಿಯಿತು. ನಾಳೆಗೆ ಕೋಟೆಯು ಕೈಬಿಡುವದೆಂದೂ ತಾವೆಲ್ಲರೂ ಶತ್ರುಗಳ ಸೆರೆಯಾಳಾಗಬೇಕಾಗುವದೆಂದೂ ಗಂಡನು ಚಿಂತಿಸುವನೆಂಬದು ಆಕೆಗೆ ಹೊಳೆದು ಹೋಯಿತು. ಆಗ ಆಕೆಯು ಗಂಡನ ಸಮ್ಮುಖದಲ್ಲಿ ಬಂದು ಬಳಿಯಲ್ಲಿರುವ ಕುರ್ಚಿಯ ಮೇಲೆ ಕುಳಿತು ಗಂಡನನ್ನು ಕುರಿತು ನುಡಿದಳೇನಂದರೆ—“ನಾನು ನಿಮಗೆ ಮೊದಲೇ ಹೇಳಲಿಲ್ಲವೇ? ಮರಾಟರ ಸೇನಾ

ಪತಿಯಾದ ಚಿಮಣಾಜಿಯು ಪರಮಧಾರ್ಮಿಕನೂ ಶೂರನೂ ಪರನಾರೀ ಸಹೋದರನೂ ಇರುವನೆಂದು! ಇಂಥವನೊಡನೆ ಕಾದಾಡುವದು ನಿಮ್ಮ ಶಕ್ತಿಗೆ ಮೀರಿದ ಕೆಲಸವಾಗಿರುವದು. ಧಾರ್ಮಿಕ ತೇಜಸ್ಸುಳ್ಳವರನ್ನು ಪರಾಜಯಗೊಳಿಸುವದು ಕಠಿಣವೆನಿಸುವದು. ಒಂದು ವೇಳೆ ನಿಮ್ಮ ಸೈನ್ಯ ವಾದರೂ ಅಧಿಕವಾಗಿದ್ದರೆ ಯುದ್ಧಕ್ಕೆ ಸಿದ್ಧರಾಗಬಹುದಾಗಿತ್ತು. ಸೈನ್ಯವೂ ಇಲ್ಲ. ಪರರಿಂದ ಸಹಾಯ ಬಂದೀತೆಂಬ ಆಶೆಯೂ ಇಲ್ಲ. ಇಂಥ ಸ್ಥಿತಿ ಯಲ್ಲಿ ನೀವು ಅಂಥ ಅಸಾಮಾನ್ಯ ವೀರನೊಡನೆ ಕಾದಾಡುವದೆಂದರೆ ಇದ ರಲ್ಲಿ ಏನೂ ಹುರುಳಿಲ್ಲೆಂದು ನನಗೆ ಈ ಮೊದಲೇ ಹೊಳೆದು ಹೋಗಿತ್ತು. ಅದರಂತೆ ನಿಮಗೆ ಹೇಳಿದರೂ ಅಭಿಮಾನಗ್ರಸ್ತರಾದ ನೀವು ನನ್ನ ಮಾತನ್ನು ಲೆಕ್ಕಿಸಲಿಲ್ಲ. ಆದರ ಅನುಭವವನ್ನು ಈಗ ನೀವೇ ಹೊಂದಿರುತ್ತೀರಿ. ಈಗಲಾದರೂ ನೀವು ನಿಮ್ಮ ಚಂಡಿತನಬಿಟ್ಟರೆ ಎಲ್ಲವೂ ಕ್ಷೇಮವಾಗುವದು.''

ಈ ಮೇರೆಗೆ ಆ ಫಿರಂಗೀರಮಣಿಯು ನುಡಿಯಲು, ಮೇನೇಸೀಝನು ಅಂಥ ದೈನ್ಯಾವಸ್ಥೆಯಲ್ಲಿದ್ದರೂ, ಸಂತಾಪಗೊಂಡನು. ಶತ್ರುವಿನ ವರ್ಣ ನೆಯ ಶ್ರವಣವು ಅವನಿಗೆ ಆಸಹ್ಯವಾಯಿತು. ಅದರಲ್ಲಿಯೂ ತನ್ನ ಪ್ರಿಯ ಪತ್ನಿಯ ಮುಖದಿಂದ ಶ್ರವಣವು! ಸಂತಾಪಕ್ಕೆ ಹೆಚ್ಚು ಕಳೆಯೇರಿತು. ಗಂಡನು ಅತ್ಯಂತ ಸಿಟ್ಟಿಗೆದ್ದನೆಂಬದು ಆ ಫಿರಂಗೀ ತರುಣಿಗೆ ತಿಳಿಯಿತು. ಆದರೂ ಅವಳು ಸ್ವಲ್ಪ ಸಹ ಅಂಜಲಿಲ್ಲ. ಪಾಶ್ಚಾತ್ಯ ಸಂಸ್ಕೃತಿಯ ಸ್ತ್ರೀ- ಯರು ಗಂಡಸರ ತಲೆಮೆಟ್ಟಿ ಹಾರುವಷ್ಟು ಧೈರ್ಯಶಾಲಿಗಳಿರುವರು. ತನ್ನ ಪತಿಯು ಏನೇನು ಮಾತಾಡುವನೆಂಬದನ್ನು ಕೇಳುವದಕ್ಕಾಗಿ ಅವಳು ಸುಮ್ಮನೆ ಕುಳಿತುಕೊಂಡಳು. ಸಂತಾಪದ ಭರದಲ್ಲಿದ್ದ ಮೇನೇಸೀಝನು ಒಮ್ಮೆಲೆ—ಸಾಕುಮಾಡು, ನಿನ್ನ ವರ್ಣನವನ್ನು! ಶತ್ರುಗಳ ಹೆಚ್ಚಳವು ನನಗೆ ಸಹನವಾಗದೆಂಬದು ನಿನಗೆ ಗೊತ್ತಿಲ್ಲವೇ? ಹೀಗಿದ್ದೂ ನೀನು ಅವ ರನ್ನು ಹೊಗಳುವ ಕಾರಣವೇನು? ಇತಃಪರ ನೀನು ಶತ್ರುವನ್ನು ವರ್ಣಿಸಿ ದರೆ ಈಗಲೇ ನಿನ್ನ ಶಿರಚ್ಛೇದ ಮಾಡಿಬಿಡುವೆನು, ಎಂದು ಗದ್ದರಿಸಿದನು. ಈ ಮಾತನ್ನು ಆ ತರುಣಿಯು ಶಾಂತ ಮನಸ್ಸಿನಿಂದ ಕೇಳಿಕೊಂಡಳು. ಬಳಿಕ ಶಾಂತ ಸ್ವರದಿಂದ—ನೀವು ಅವಶ್ಯವಾಗಿ ನನ್ನ ಶಿರಚ್ಛೇದ ಮಾಡಬಹುದು. ಯಾವ ಪುರುಷನು ಪರನಾರೀ ಸೋದರನಾಗಿ ನಿಮ್ಮ ಧರ್ಮಪತ್ನಿಯ ಮಾನಭಂಗಮಾಡದೆ ಬಹು ಗೌರವದಿಂದ ನಿಮ್ಮ ಬಳಿಗೆ ಕಳಿಸಿಕೊಟ್ಟ

ರುವನೋ ಅಂಥ ಧಾರ್ಮಿಕ ಪುರುಷನ ವಿಷಯವಾಗಿ ನಿಮ್ಮಲ್ಲಿ ಸ್ವಲ್ಪವೂ ಕೃತಜ್ಞತೆ ಇರಬಾರದೆಂದರೆ ನಿಮಗೆ ಯಾವ ಉಪಮೆಯನ್ನು ಕೊಡಬೇಕೆಂಬದೇ ನನಗೆ ತಿಳಿಯದಾಗಿದೆ. ಈ ಉಪಕಾರಕ್ಕಾಗಿ ನೀವು ಆತನಿಗೆ ಕಿಲ್ಲೆಯನ್ನೊಪ್ಪಿಸಿರೆಂದು ನಾನು ಹೇಳುವದಿಲ್ಲ. ಬಲಿಷ್ಠ ಶತ್ರುವಿನೊಡನೆ ಹೋರಾಡಬೇಕಾದರೆ ವಿಚಾರಮಾಡಿ ಹೋರಾಡಬೇಕಾಗುತ್ತದೆ. ಅಪ್ಪಾಜಿಯ ವರ್ಣನೆಯಿಂದ ನಿಮಗೆ ಸಿಟ್ಟು ಬರುವ ಕಾರಣವೇನು? ನಿಮ್ಮಲ್ಲಿ ಪೌರುಷವಿದ್ದರೆ ಯುದ್ಧದಲ್ಲಿ ಆತನ ಶಾಸನ ಮಾಡಬೇಕಲ್ಲದೆ ಹೆಂಗಸಾದ ನನ್ನ ಮೇಲೆ ಹೀಗೆ ಹರಿಹಾಯುವದು ನ್ಯಾಯವೇ? ವಿಚಾರ ಮಾಡಿ ನೋಡಿರಿ; ನಾನು ಹೇಳುವದನ್ನು ಬಹುವಿಧವಾಗಿ ಯೋಚಿಸಿ ನೋಡಿರಿ; ಬಳಿಕ ನಿಮಗೆ ಸರಿದೋರಿದ್ದನ್ನು ನೀವು ಮಾಡಿರಿ. ಕೇವಲ ನಾನು ಹೇಳಿದಂತೆಯೇ ನೀವು ನಡೆಯಬೇಕೆಂದು ನನ್ನ ಆಗ್ರಹವಿಲ್ಲ. ನಿಮ್ಮ ಹಿತಚಿಂತನೆಯೇ ನನ್ನ ಹಿತಚಿಂತನೆಯಾದ್ದರಿಂದ ಕೆಲವು ಮಾತುಗಳನ್ನು ನಿಮಗೆ ಸೂಚಿಸಬೇಕೆಂದು ಬಂದಿರುತ್ತೇನೆ. ಆದರೆ ನೀವು ನನ್ನ ಸೂಚನೆಯನ್ನೇ ಕೇಳದೆ ಒಮ್ಮೆಲೆ ಶಿರಚ್ಛೇದ ಮಾಡುವೆನೆಂದು ಸಂತಾಪಗೊಂಡರೆ ನನ್ನ ಯತ್ನವಿಲ್ಲ.'' ಎಂದಳು.

ಹೀಗೆ ಹೆಂಡತಿಯು ಮಾತಾಡಿ ಸುಮ್ಮನಾಗಲು, ಮೇನೇಸೀಝನು ವಿಚಾರಕ್ಕೊಳಗಾದನು. ಹೆಂಡತಿಯು ಅನ್ನುವದರಲ್ಲಿ ಅರ್ಥವಿದೆಯೆಂಬದು ಅವನಿಗೆ ಸ್ವಲ್ಪ ಸ್ವಲ್ಪ ಮನವರಿಕೆಯಾಗಲಾರಂಭಿಸಿತು. ಮೊದಲಿನ ಸಂತಾಪವು ಕಡಿಮೆಯಾಯಿತು. ಆಗ ಅವನು ಶಾಂತಮನಸ್ಸಿನಿಂದ ಹೆಂಡತಿಯನ್ನು ಕುರಿತು ನುಡಿದನೇನಂದರೆ—ಪ್ರಿಯೇ, ನಿನ್ನ ಅವಮಾನವಾಗುವಂಥ ಮಾತನಾಡಿದ್ದಕ್ಕೆ ನನಗೆ ಬಹಳ ಪಶ್ಚಾತ್ತಾಪವಾಗಿದೆ. ಸಂತಾಪದ ಭರದಲ್ಲಿ ಹಾಗೆ ಮಾತಾಡಿದೆನು. ಈ ಬಗ್ಗೆ ನನ್ನನ್ನು ಕ್ಷಮಿಸು. ಆದರೆ ಪ್ರಸ್ತುತದ ಪ್ರಸಂಗದಲ್ಲಿ ನನ್ನ ಬುದ್ಧಿಯು ಭ್ರಂಶವಾಗಿ ಹೋಗಿದೆ. ಯಾವದು ಕ್ಷೇಮವು, ಯಾವದು ಅಕ್ಷೇಮವು? ಎಂಬದೇ ನನಗೆ ತಿಳಿಯದಾಗಿದೆ. . ಈ ಹೊತ್ತಿನಲ್ಲಿ ಹ್ಯಾಗೆ ಆಚರಿಸಿದರೆ ನಮ್ಮ ಗೌರವಕ್ಕೆ ಸರಿಯಾದೀತೆಂಬದೇ ನನಗೆ ತಿಳಿಯದಾಗಿದೆ. ಈ ಪ್ರಸಂಗದಲ್ಲಿ ನನಗೆ ಸರಿಯಾದ ಆಲೋಚನೆ ಹೇಳತಕ್ಕವರಾರೂ ಇಲ್ಲ. ನನ್ನ ಸರಿಸಮಾನನಾದ ಸೇಠಿದಾ ಸರದಾರನು ನುಡಿದನು. ಧರ್ಮಾಧಿಕಾರಿಯು ಸೆರೆಯಾಳಾದನು.

ಉಳಿದವರಾರಿಗೂ ರಾಜಕರಣವು ತಿಳಿಯುವಂತಿಲ್ಲ. ಹೀಗಾಗಿ ನಾನು ಬಹಳ ಪೇಚಾಟದಲ್ಲಿರುವೆನು. ನೀನು ಸ್ತ್ರೀಯಾಗಿದ್ದರೂ ನಿನ್ನಿಂದ ಈ ಕಾಲಕ್ಕೆ ರಾಜಕರಣಕ್ಕೆ ಉಪಯುಕ್ತವಾದ ಆಲೋಚನೆಗಳು ನನಗೆ ತಿಳಿದು ಬಂದರೆ ಪ್ರಸ್ತುತ ಸಂಕಟದಿಂದ ಮುಕ್ತನಾಗುವೆನು. ನೀನು ಹೇಳತಕ್ಕದ್ದನ್ನು ಮುಕ್ತಕಂಠದಿಂದ ಹೇಳು.

ಈ ಮೇರೆಗೆ ಮಾತನಾಡುವಾಗ ಕಿಲ್ಲೇದಾರನ ಗಾಂಭೀರ್ಯವು ಇಳಿದು ಹೋಗಿತ್ತು. ಅವನ ದನಿಯು ಕುಗ್ಗಿತ್ತು. ಧೈರ್ಯವೆಲ್ಲ ಅಳಿದು ಹೋಗಿತ್ತು. ಯಾವನೊಬ್ಬ ಮನುಷ್ಯನು ಮಹಾ ವಿಪತ್ತಿಗೆ ಗುರಿಯಾದಾಗ ಅವನ ಸ್ಥಿತಿಯು ಹ್ಯಾಗೆ ಶೋಚನೀಯುವಾಗುವದೋ ಹಾಗೆಯೇ ಮೋನೇಸೀರ್ಝುನ ಸ್ಥಿತಿಯಾಗಿತ್ತು. ಗಂಡನ ಈ ಚಿಂತಾಜನಕ ಸ್ಥಿತಿಯನ್ನು ನೋಡಿ ಆ ಫಿರಂಗೀತರುಣಿಗೆ ಬಹಳ ಕೆಡಕೆನಿಸಿತು. ಆಗ ಆಕೆಯು ಪತಿಯನ್ನು ಕುರಿತು ಇಂತು ನುಡಿದಳು.

“ಯಾರಾದರೂ ಸಮಯ ನೋಡಿ ವರ್ತಿಸಬೇಕಾಗುತ್ತದೆ. ಸಮಯಾಸಮಯಗಳನ್ನು ತಿಳಿಯುವದರಲ್ಲಿಯೇ ಮನುಷ್ಯನ ಜಾಣತನವಿರುತ್ತದೆ. ಮೇಲಾದ ಯೋದ್ಧಾಪುರುಷರೂ, ಮುತ್ಸದ್ದಿಗಳು ಸಮಯವನ್ನು ಚನ್ನಾಗಿ ತಿಳಿದು ಆಚರಿಸುವರು. ಸಮಯದ ಪರೀಕ್ಷೆಯಿಲ್ಲದವರು ರಾಜಕರಣದಲ್ಲಿ ಯಶಸ್ಸನ್ನು ಪಡೆಯಲಾರರು. ಯುದ್ಧ ಮುಂತಾದ ಪ್ರಸಕ್ತಿಗಳುಂಟಾದಾಗಂತೂ ರಾಜಕರಣೀ ಪುರುಷರಲ್ಲಿ ಬಹಳ ಧೋರಣವು ಇರಬೇಕಾಗುತ್ತದೆ. ಶತ್ರುವಿನ ಬಲವನ್ನು ಪರೀಕ್ಷಿಸಿ ಅದಕ್ಕೆ ತಕ್ಕಹಾಗೆ ತಮ್ಮ ಬಲವನ್ನು ಹೆಚ್ಚಿಸಿಕೊಳ್ಳಬೇಕಾಗುತ್ತದೆ. ಪರಕೀಯರಾರಾದರೂ ಬಂದರೆ ಅವರ ಮೇಲೆ ವಿಶ್ವಾಸವಿಡದೆ ಅವರನ್ನು ಹೊರಗೆ ಹಾಕಿಸಬೇಕು. ಇವು ಮುತ್ಸದ್ದಿಗಿರಿಯ ಲಕ್ಷಣಗಳು. ಇವುಗಳಲ್ಲಾವುದನ್ನೂ ನೀವು ಮಾಡಿರುವದಿಲ್ಲ. ಕಿಲ್ಲೆಯೊಳಗೆ ಬಂದ ಪರಕೀಯರೆಲ್ಲರಿಗೂ ಆಶ್ರಯಕೊಟ್ಟು ಬಿಟ್ಟಿರುತ್ತೀರಿ. ಅವರು ಶತ್ರುಪಕ್ಷದ ಗುಪ್ತಹೇರರಾಗಿರುವರೋ ಅಥವಾ ಮತ್ತಾರಿರುವರೋ ಎಂಬದು ಕೂಡಾ ನಿಮಗೆ ಗೊತ್ತಿರುವದಿಲ್ಲ. ಇಷ್ಟೇ ಅಲ್ಲ; ನಿಮ್ಮಿಂದ ಇನ್ನೂ ಒಂದು ದೊಡ್ಡ ತಪ್ಪಾಗಿರುತ್ತದೆ. ಧರ್ಮಾಧಿಕಾರಿಯಿಂದ ಕಷ್ಟಕ್ಕೊಳಗಾದ ಹಿಂದುಗಳನ್ನು ಸೆರೆಮನೆಯಿಂದ ಬಿಡಿಸಿ ಕೆಲಸಕ್ಕೆ ಹಚ್ಚಿರುತ್ತೀರಿ. ಕೆಲವರಿಗಂತೂ ಆಯಕಟ್ಟಿನ ಸ್ಥಳದಲ್ಲಿ ಕೆಲಸ

ಮಾಡಹಚ್ಚಿರುವಿರಿ. ನಿಮ್ಮಿಂದ ಸಂಕಟಕ್ಕೊಳಗಾದಜನರು ನಿಮ್ಮ ಹಿತ ಚಿಂತನೆಯನ್ನು ಮಾಡಬಹುದೆ? ಸೈನಿಕರಲ್ಲಿ ಬಹುಜನರು ಸೆರೆಯಾಳುಗಳೇ ಆಗಿರುವರು. ನೀವು ಸೆರೆಯಾಳುಗಳಿಗೆ ಶತ್ರುಗಳು, ಶತ್ರುಗಳ ಹಿತವನ್ನು ಅವರೇಕೆ ಸಾಧಿಸುವರು; ಮನುಷ್ಯಮಾತ್ರರೆಲ್ಲರಿಗೆ ಅದೇಕೆ ಪ್ರಾಣಿಮಾತ್ರ ವೆಲ್ಲಕ್ಕೂ ಸೇಡುತೀರಿಸಿಕೊಳ್ಳುವ ಹವ್ಯಾಸವು ಇದ್ದೇ ಇರುತ್ತದೆ. ನೀವು ಯೋಗ್ಯಾಯೋಗ್ಯ ವಿಚಾರಮಾಡದೆ ಸಿಕ್ಕಜನರಿಗೆ ಮಹತ್ವದ ಕೆಲಸವನ್ನು ಕೊಟ್ಟಿರುವದರಿಂದ ನಿಮ್ಮ ಸತ್ವನಾಶವಾಗಹತ್ತಿದೆ. ಇದನ್ನು ನೀವು ಚನ್ನಾಗಿ ವಿಚಾರಮಾಡಿ ನೋಡಿರಿ. ಕಿಲ್ಲೆಯೊಳಗಿನ ಪರಿಸ್ಥಿತಿಯಿಂದ ನಾನು ಈ ಸಂಗತಿಗಳನ್ನು ಕಂಡು ಹಿಡಿದಿರುತ್ತೇನೆ.

ಇವೆಲ್ಲ ನಿಮ್ಮ ದಡ್ಡತನದ ಮೂಲಕವಾಗಿ ನಿಮ್ಮ ಬಲವು ವಿಶೇಷ ವಾಗಿ ಕುಗ್ಗಿಹೋಗಿದೆ. ಇನ್ನು ನೀವು ಏನು ಮಾಡಿದರೂ ಮರಾಟರನ್ನು ಜಯಿಸಲಾರರಿ. ಮರಾಟರು ಸಾಮಾನ್ಯರಿರುವದಿಲ್ಲ. ಅವರ ಪಾಳಯ ವನ್ನು ನೋಡಿದರೆ ನಿಮಗೆ ಹುಚ್ಚು ಹಿಡಿಯಬಹುದು. ಅವರಲ್ಲಿ ಅಪಾರ ಸೈನ್ಯವಿದೆ. ಸೇನಾಪತಿಯಲ್ಲಿ ಬಹುಧೋರಣವಿದೆ. ನೀವು ನಮ್ಮನ್ನು ಗೋವೆಗೆ ಕಳಿಸುವ ಪ್ರಯತ್ನನಡಿಸಿದ ಸುದ್ದಿಯು ಶತ್ರುಗಳಿಗೆ ಗೊತ್ತಾ ದ್ದರಿಂದಲೇ ಅವರು ನಮ್ಮನ್ನು ನಡುದಾರಿಯಲ್ಲಿ ತರುಬಿ ಸೆರೆಹಿಡಿದೊಯ್ದರು. ಹೀಗಾಗ ಬೇಕಾದರೆ ಶತ್ರುಗಳ ಗುಪ್ತಹೇರರು ನಮ್ಮಲ್ಲಿರುವರೆಂಬದು ಸ್ಪಷ್ಟವಾಗಿ ಕಂಡುಬರುತ್ತದೆ. ಶತ್ರುಗಳ ಎಲ್ಲ ಕೃತಿಗಳನ್ನು ನೋಡಿದರೆ ಅವರು ಮೇಲಾದ ರಾಜಕರಣಿಗಳಿರುವರೆಂಬದು ವ್ಯಕ್ತವಾಗುತ್ತದೆ. ನೀವು ರಾಜಕರಣಿಗಳಿದ್ದರೂ ಪ್ರಸ್ತುತಸಮಯದಲ್ಲಿ ನಿಮ್ಮಿಂದ ಇಂತಿಷ್ಟು ತಪ್ಪು ಗಳಾಗಿವೆ. ಆದ್ದರಿಂದ ನೀವು ನಿಮ್ಮ ರಕ್ಷಣೆಯಾಗಬೇಕೆಂದು ಇಚ್ಛಿಸುತ್ತಿ ದ್ದರೆ ಶತ್ರುಗಳೊಡನೆ ಒಡಂಬಡಿಕೆಯ ಸಂಧಾನವನ್ನು ನಡಿಸಲೇ ಬೇಕು. ಒಡಂಬಡಿಕೆಯಾದರೆ ನಿಮ್ಮ ರಕ್ಷಣೆಯಾಗುವದಲ್ಲದೆ ನಿಮ್ಮ ಗೌರವವೂ ಉಳಿಯುವದು. ನಾನು ನಿಮಗೆ ಹೇಳತಕ್ಕ ಮುಖ್ಯಮಾತು ಇದೇ ಆಗಿರುವದು.

ಈ ಮೇರೆಗೆ ಹೆಂಡತಿಯು ಆಲೋಚನೆಯನ್ನು ಹೇಳಲು ಕಿಲ್ಲೇದಾ ರನ ಧೈರ್ಯವು ಹೆಚ್ಚಾಯಿತು. ತಾನಾಗಿಯೇ ಶತ್ರುಗಳ ಕಡೆಗೆ ಒಪ್ಪಂದ ಸಂಧಾನಕ್ಕೆ ಹೋಗುವದಕ್ಕೆ ಅವನಿಗೆ ಜೀವದಸುತ್ತು ಬಂದಂತಾಯಿತು.

ಒಪ್ಪಂದದ ಸಂಧಾನ ನಡಿಸದಿದ್ದರೆ ಗತ್ಯಂತರವಿಲ್ಲ ಎಂದು ಅವನು ಬಹು ವಿಧವಾಗಿ ಯೋಚಿಸಿ ಒಪ್ಪಂದದ ಸಂಧಾನಕ್ಕೆ ಯಾರನ್ನು ಕಳುಹಿಸಬೇಕು ಎಂದು ನುಡಿದನು. ಗಂಡನ ಸ್ವಾಭಿಮಾನವನ್ನು ತಿಳಿದು ಒಂದು ಬಗೆ ಯಿಂದ ಆ ಸ್ತ್ರೀಗೆ ಸಮಾಧಾನವಾದರೂ ವೃಥಾಭಿಮಾನದಿಂದ ಗಂಡನು ಸರ್ವ ನಾಶಮಾಡಿಕೊಳ್ಳುವನೆಂದು ಆಕೆಗೆನಿಸಿತು. ಆಗ ಆಕೆಯು ಹೆಚ್ಚು ಹೊತ್ತು ಇಲ್ಲಿ ಕೂಡ್ರುವದು ಉಚಿತವಲ್ಲವೆಂದು ಚಟ್ಟನೆದ್ದು ನಿಂತಳು. ಇಂಥ ಬಿಕ್ಕಟ್ಟಿನ ಸಮಯದಲ್ಲಿ ತನಗೆ ಆಪ್ತಾಲೋಚನೆ ಹೇಳುವವರು ಯಾರೂ ಇಲ್ಲವೆಂದು ದೈನ್ಯಗ್ರಸ್ತನಾದ ಆ ಕಿಲ್ಲೇದಾರನು ತನ್ನ ದುರಭಿ ಮಾನದಿಂದ ಹೆಂಡತಿಯು ಸಿಟ್ಟಿಗೆದ್ದು ಹೊರಟು ಹೋಗುವಳೆಂದು ತಿಳಿದು ಮತ್ತಿಷ್ಟು ದೈನ್ಯವ ತಾಳಿ ಕೇವಲ ಮೂರ್ತಿಮಂತ ದೈನ್ಯವೇ ಆದವನಂತೆ ಹೆಂಡತಿಯ ಮುಖವನ್ನು ನೋಡಿದನು. ಗಂಡನ ವಿಲಕ್ಷಣ ದೈನ್ಯವನ್ನು ನೋಡಿ ಆ ಸ್ತ್ರೀಗೆ ಬಹಳ ಅಸಮಾಧಾನವಾಯಿತು. ಅವಳು ಎದ್ದು ನಿಂತ ವಳು ಮತ್ತೆ ಕುಳಿತಳು. ಕಿಲ್ಲೇದಾರನು ಆಕೆಯನ್ನು ಹಾಗೇ ದೈನ್ಯದಿಂದ ನೋಡತೊಡಗಿದನು. ಕೆಲಹೊತ್ತಿನ ವರೆಗೆ ಆತನ ಬಾಯಿಂದ ಮಾತು ಗಳೇ ಹೊರಡಲಿಲ್ಲ.

---

## (೨೩) ಪ್ರತಿಜ್ಞಾ ಪೂರಣ.

ಈ ಮೇರೆಗೆ ಕಿಲ್ಲೇದಾರನು ದಿಙ್ಮೂಢನಾಗಿ ಕುಳಿತಿರಲು ಕಿಲ್ಲೆಯ ಮದ್ದಿನ ಖಜಾನೆಯಲ್ಲಿ ನಿಳೋಜಿಯು ನಡಿಸಿದ ಬೊಗದೆ ತೋಡುವ ಕೆಲ ಸವು ಮುಗಿಯುತ್ತ ಬಂದಿತು. ಈ ದಿನ ರಾತ್ರಿಯಲ್ಲಿ ನಿಶ್ಚಯವಾಗಿ ಬೊಗದೆ ಬೀಳುವದೆಂಬದು ಅವನಿಗೆ ನಂಬಿಗೆಯಾಯಿತು ಆದ್ದರಿಂದ ಮರಾಟರ ಗುಪ್ತಹೇರರಿಗೆಲ್ಲ ಈ ಆನಂದದ ಸುದ್ದಿಯನ್ನು ತಿಳಿಸಿದನು. ಇಲ್ಲಿಯವರೆಗೆ ಯಾರ ಮುಂದೂ ಅವನು ಈ ಸಂಗತಿಯ ಬಗ್ಗೆ ಚಕಾರ ಶಬ್ದವನ್ನುಚ್ಚರಿಸಿದ್ದಿಲ್ಲ. ಆತನ ಈ ಸಾಹಸಕ್ಕೆ ಬಾಳಾಜಿ-ಗಣು ಮೊದ ಲಾದವರಿಗೆ ತುಂಬಾ ಆಶ್ಚರ್ಯವಾಯಿತು. ಅವರು ನಿಳೋಜಿಯ ಈ ಘನತರವಾದ ಕೆಲಸವನ್ನು ಸಾಂಗಗೊಳಿಸಲಿಕ್ಕೆ ಆ ದಿನ ರಾತ್ರಿಯಲ್ಲಿ ಮದ್ದಿನ ಖಜಾನೆಗೆ ಬಂದರು.

ಗಣೋಬನು ಸ್ವಭಾವದಿಂದ ವಿನೋದಪ್ರಿಯನಿರುವಂತೆ ಉದಾರ ಮನಸ್ಸಿನವನೂ ಆಗಿದ್ದನು. ಅವನು ಮದ್ದಿನ ಖಜಾನೆಗೆ ಬಂದಾಗ ಕೈಕಾಲುಕಟ್ಟಿ ಚಲ್ಲಿದ ಗುಲಾಂಕಾದರನನ್ನು ನೋಡಿದನು. ಆಗ ಅವನು ಎಲ್ಲಸಂಗತಿಗಳನ್ನು ನಿಳೋಜಿಯಿಂದ ತಿಳಿದುಕೊಂಡು ತನ್ನ ಕೈಖಡ್ಗದಿಂದ ಆ ಗುಲಾಂಕಾದರನ ಗಡ್ಡವನ್ನು ಕತ್ತರಿಸಿ ಹೋಗು ಅಧಮಾ ಎಂದು ಅವ ನನ್ನು ಬಂಧಮುಕ್ತಮಾಡಿ ಬಿಟ್ಟು ಬಿಟ್ಟನು. ಗುಲಾಂಕಾದರನಿಗೆ ಮದ್ದಿನ ಖಜಾನೆಯಲ್ಲಿ ನಿಳೋಜಿಯು ನಡಿಸಿದ ಕಾರಸ್ಥಾನವೆಲ್ಲ ಗೊತ್ತಾದ್ದರಿಂದ ಈ ಸಂಗತಿಯನ್ನು ಕಿಲ್ಲೇದಾರನಿಗೆ ಯಾವಾಗ ಹೇಳುವೆನೋ ಎಂದು ಹಳ್ಳೀ ಆತುರಪಡುತ್ತಿದ್ದನು. ಗಣೋಬನು ಮೇಲೆ ಹೇಳಿದಂತೆ ವಿನೋದ ದಿಂದ ಅವನನ್ನು ಬಿಟ್ಟು ಬಿಡಲು ಗುಲಾಂಕಾದರನು ಕಿಲ್ಲೇದಾರನ ಬಳಿಗೆ ಧಾವಿಸಿದನು. ಅವನು ಕೆಲದಾರೀ ಓಡಿದಬಳಿಕ ಮತ್ತೆ ಅವನ ಮನಸ್ಸಿ ನಲ್ಲಿ ಚಾಂಚಲ್ಯವು ಉತ್ಪನ್ನವಾಯಿತು. ನಾನು ಕಿಲ್ಲೇದಾರನ ಬಳಿಗೆ ಹೋಗಿ ಈ ಸಂಗತಿಯನ್ನು ಹೇಳುವಷ್ಟರಲ್ಲಿ ಕಿಲ್ಲೆಗೆ ಬೊಗದೆಯನ್ನು ಕೆಡವಿ ಎಲ್ಲರೂ ಪಾರಾಗಿಹೋದರೆ ಚಂದ್ರಾತ್ರತರುಣಿಯು ತನಗೆ ಸಿಗಲಿಕ್ಕಿ ಲ್ಲೆಂಬ ಭ್ರಾಂತಿಯು ಬಂದಿತು. ಕೂಡಲೆ ಆ ಮರುಳನು ಹಿಂತಿರುಗಿ ಮದ್ದಿನಖಜಾನೆಯು ಬಳಿಗೆ ಬಂದನು. ಆ ಚಂದ್ರಾತ್ರತರುಣಿಯನ್ನು ಬಿಟ್ಟು ಅತ್ತಿತ್ತ ಸಹ ಹೋಗಲು ಅವನ ಮನಸ್ಸು ಒಪ್ಪದಾಯಿತು.

ಹೀಗೆ ಆ ಕಾಮುಕ ಗುಲಾಂಕಾದರನು ನರಪಿಶಾಚಿಯಂತೆ ಅಲ್ಲಿ ಸುತ್ತಾಡುತ್ತಿರಲು ಚಂದ್ರಾತ್ರತರುಣಿಯು ಯಾವದೋ ಒಂದು ಕೆಲಸಕ್ಕಾಗಿ ಮದ್ದಿನ ಖಜಾನೆಯಿಂದ ಹೊರಗೆ ಬಂದಳು. ಈ ದಿನ ಪಹರೆ ಮಾಡುವ ದನ್ನು ಬಿಟ್ಟುಬಿಟ್ಟು ಎಲ್ಲರೂ ಬೊಗದೆ ತೋಡುವ ಕೆಲಸವನ್ನೇ ನಡಿಸಿ ದ್ದರು. ಚಂದ್ರಾತ್ರತರುಣಿಯು ಹೊರಗೆ ಬಂದಾಗ ಬೆಳಗಿನ ಸಮಯವಾ ಗಿತ್ತು. ಆಕೆಯು ಆ ಮದ್ದಿನ ಮನೆಯಿಂದ ಕೆಲಅಂತರದ ವರೆಗೆ ಹೋ- ಗಲು ಅಲ್ಲಿ ಗುಲಾಂಕಾದರನಿದ್ದನು. ಆಕೆಯು ಒಮ್ಮೆಲೆ ಬೆಚ್ಚಿಬಿದ್ದು ನೀನು ಯಾರೆಂದು ಕೇಳಲು ಗುಲಾಂಕಾದರನು ದನಿಯು ಗುರುತು ಹಿಡಿದು ನಾ........ನಾನು ನಿನ್ನ ಪ್ರಾ....ಣ ಪ್ರಿಯನು ಎಂದು ನುಡಿದು ಆಕೆ ಯನ್ನು ಹಿಮ್ಮೆಲೆ ಆಲಿಂಗಿಸ ಹೋದನು. ಚಂದ್ರಾತ್ರತರುಣಿಯು ಏಕಾಂತ ದಲ್ಲಿ ಒಬ್ಬಳೇ ಸಿಕ್ಕದ್ದಕ್ಕೆ ಅವನಿಗೆ ತುಂಬಾ ಆನಂದವಾಯಿತು. ಇಂಗು

ತಾನೇ ಧನ್ಯನೆಂದು ತಿಳಿದುಕೊಂಡನು. ಹೀಗೆ ಯಾವನೋ ಒಬ್ಬ ನೀ-ಚನು ತನ್ನ ಮೈಮೇಲೆ ಬರಲು ಚಂದ್ರಾತ್ರತರುಣಿಯು ತಿರಸ್ಕಾರದಿಂದ ಅವನನ್ನು ದೂಡಿ ಮದ್ದಿನ ಮನೆಯ ಕಡೆಗೆ ತಿರುಗಿದಳು. ಆದರೆ ಗುಲಾಂಕಾದರನು ಓಡಿಬಂದು ಆಕೆಯ ಎರಡೂ ಕೈಗಳನ್ನು ಗಟ್ಟಿಯಾಗಿ ಹಿಡಿದು ಆಕೆಯ ಪ್ರೇಮಯಾಚನೆಯನ್ನು ಮಾಡತೊಡಗಿದನು. ಈತನು ದುರಾತ್ಮನಾದ ಗುಲಾಂಕಾದರನೇ ಎಂಬದು ಆಕೆಗೆ ಗೊತ್ತಾಯಿತು. ಅವಳು ಕಸುವಿನಿಂದ ಕೈಕೊಸರಿಕೊಳ್ಳಲು ಪ್ರಯತ್ನ ನಡಿಸಿದಳು. ಆದರೆ ಅವಳು ಎಷ್ಟು ಮಾಡಿದರೂ ಸ್ತ್ರೀಯಳು. ಗುಲಾಂಕಾದರನಿಂದ ಕೈಕೊಸರಿಕೊಳ್ಳಲಿಕ್ಕಾಗಲಿಲ್ಲ. ಆಗ ಅವಳು ಕೆಟ್ಟ ದನಿಯಿಂದ ಚೀರಿದಳು.

ಇತ್ತ ಮದ್ದಿನ ಮನೆಯಲ್ಲಿ ಗೋಡೆಗೆ ಬೊಗದೆಯು ಬೀಳುವದಕ್ಕೂ ಚಂದ್ರಾತ್ರತರುಣಿಯ ಆರ್ತಧ್ವನಿಯು ಕೇಳಿಸುವದಕ್ಕೂ ಗಂಟುಬಿದ್ದಿತು. ನೀಳೋಜಿಗೆ ಬೊಗದೆ ಬಿತ್ತೆಂದು ಆನಂದವಾಗುವಷ್ಟರಲ್ಲಿ ತಂಗಿಯ ಆರ್ತಧ್ವನಿ ಕೇಳಿಸಲು ಎದೆಯಲ್ಲಿ ತಣ್ಣೀರು ಸುರವಿದಂತಾಯಿತು. ಕೂಡಲೆ ಅವನು ಮದ್ದಿನ ಮನೆಯಿಂದ ಹೊರಬಿದ್ದು ಶಬ್ದವೇಧದಿಂದ ತಂಗಿಯಿದ್ದಲ್ಲಿಗೆ ಬಂದನು. ಆಗ ಆ ನೀಚನಾದ ಗುಲಾಂಕಾದರನು ಚಂದ್ರಾತ್ರತರುಣಿಯನ್ನು ನೆಲಕ್ಕೆ ಕೆಡವಲು ಪ್ರಯತ್ನಪಡುತ್ತಿದ್ದನು. ಈ ದೃಶ್ಯವು ಕಣ್ಣಿಗೆ ಬಿದ್ದ ಕೂಡಲೆ ನೀಳೋಜಿಯ ಸಂತಾಪಾಗ್ನಿಯು ಹೆಚ್ಚಿತು. ಅವನು ಕೈಯೊಳಗೆ ಹಿಡಿದಿದ್ದ ಬೊಗದೆ ತೋಡುವ ಆಯುಧದಿಂದ ಗುಲಾಂಕಾದರನ ತಲೆಗೆ ಹೊಡೆದನು. ಪೆಟ್ಟು ನೆತ್ತಿಯ ಸುಳಿಗೆ ಬಿದ್ದದ್ದರಿಂದ ಗುಲಾಂಕಾದರನ ಪ್ರಾಣವು ಹೊರಟು ಹೋಗಿ ಅವನ ಜಡದೇಹವು ನೆಲದ ಮೇಲೆ ದೊಪ್ಪನೆ ಬಿದ್ದುಬಿಟ್ಟಿತು. ಬಳಿಕ ನೀಳೋಜಿಯು ಆ ದುರಾತ್ಮನನ್ನು ಬೈಯುತ್ತ ತಂಗಿಯನ್ನು ಸಮಾಧಾನಗೊಳಿಸಿ ಅವಳೊಡನೆ ಮದ್ದಿನಮನೆಯ ಕಡೆಗೆ ಹೊರಳಿದನು. ಅಷ್ಟರಲ್ಲಿ ಕಿಲ್ಲೆಯ ಹೊರಭಾಗದಲ್ಲಿ "ಹರಹರ ಮಹಾದೇವ" ಎಂಬ ರಣಗರ್ಜನೆಯು ಕೇಳಿಸತೊಡಗಿತು. ಆಗ ಅರುಣೋದಯಸಮಯ; ಪಕ್ಷಿಗಳು ಕಿಲಕಿಲಾಟವನ್ನು ನಡಿಸಿದ್ದವು. ಮರಾಟರು ಕಿಲ್ಲೆಗೆ ಮುತ್ತಿಗೆ ಹಾಕಿದ್ದರಿಂದ ತಾವು ಬೇಗನೆ ಬೊಗದೆಯಿಂದ ಪಾರಾಗಿ ಅವರನ್ನು ಕೂಡಿಕೊಳ್ಳಬೇಕೆಂದು ಹುರುಪಿನಿಂದ ಮದ್ದಿನ ಮನೆಯನ್ನು ಸೇರಿದನು. ಅಷ್ಟರಲ್ಲಿ ಗಣು ಸದಾಶಿವ ಮೊದಲಾದವರು ಬೊಗದೆ

ಯನ್ನು ಪ್ರಶಸ್ಥವಾಗಿ ಮಾಡಿದ್ದರು ಆಗ ನಿಳೋಜಿಯು ಮನಸ್ಸಿನಲ್ಲಿ ಮದ್ದಿಗೆ ಕೊಳ್ಳಿಯನ್ನು ಕೊಟ್ಟು ಓಡಿಹೋಗಬೇಕೆಂಬ ವಿಚಾರ ಬಂದಿತು. ಈ ಮಾತನ್ನು ಎಲ್ಲರೂ ಒಪ್ಪಿಕೊಂಡರು. ಬಳಿಕ ಆ ನಿಳೋಜಿಯು ಒಬ್ಬೊಬ್ಬರನ್ನೇ ಬೊಗದೆಯಿಂದ ದಾಟಿಸಿದನು

ಹೇಗೆ ಬೊಗದೆಯಿಂದ ಪಾರಾದ ಅವರು ಬಹು ಆಳವಾದ ನೀರುಳ್ಳ ಕಂದಕದಲ್ಲಿಯೇ ಹಾರಬೇಕಾಯಿತು. ಆ ಮರಾಟಾ ವೀರರು ಯಾತಕ್ಕೂ ಅಂಜದವರಾದ್ದರಿಂದ ಅವರು ಆ ಕಂದಕವನ್ನು ಈಸಿ ಪಾರಾಗಿ ಆಚೆಯ ದಂಡೆಯನ್ನು ಮುಟ್ಟಿದರು. ಮತ್ತು ಕಂದಕದ ಹೊರಭಾಗದಲ್ಲಿರುವ ಬಹು ಎತ್ತರವಾದ ಗೋಡೆಯನ್ನು ಏರಿ ಕೆಳಕ್ಕೆ ಧುಮುಕಿದರು. ಚಂದ್ರಾ ತರುಣಿಯು ಕಂದಕವನ್ನು ಈಸಿ ಪಾರಾದಳು ಮಾತ್ರ; ಗೋಡೆಯನ್ನು ಏರಲಿಕ್ಕೆ ಬರಲಿಲ್ಲ. ಆದ್ದರಿಂದ ನಿಳೋಜಿಯು ಮೊದಲೇ ಸಂಪಾದಿಸಿಟ್ಟಿದ್ದ ಹಗ್ಗದ ಸಹಾಯದಿಂದ ಆಕೆಯು ಗೋಡೆಯನ್ನೇರಿ ಪಾರಾದಳು. ಬಳಿಕ ನಿಳೋಜಿಯು ಮದ್ದಿನ ಮನೆಗೆ ಕೊಳ್ಳಿಯನ್ನು ಕೊಟ್ಟು ಕಂದಕದಲ್ಲಿ ಧುಮುಕಿ ಈಸಿ ಪಾರಾಗಿ ಗೋಡೆಯನ್ನೇರಿ ಸಂಗಡಿಗರನ್ನು ಕೂಡಿಕೊಂಡನು. ಹೆಬ್ಬಾಗಿಲ ಬಳಿಯಲ್ಲಿ ಮರಾಟರು ಮುತ್ತಿಗೆಯನ್ನಿಕ್ಕಿದ್ದು, ಆನೆಗಳ ಸಹಾಯದಿಂದ ಹೆಬ್ಬಾಗಿಲ ಮುರಿಯುವ ಸಾಹಸ ನಡಿಸಿದ್ದರು. ಅಷ್ಟರಲ್ಲಿ ಮದ್ದಿನ ಖಜಾನೆಗೆ ತುಂಬ ಬೆಂಕಿಹತ್ತಿ ಪ್ರಚಂಡವಾಗಿ ಸ್ಫೋಟವಾಯಿತು. ಆಕಾಶವು ಕಡಿದುಕೊಂಡು ಬಿತ್ತೋ ಎಂಬುವ ಹಾಗೆ ಪ್ರಚಂಡ ಸಪ್ಪಳವಾಯಿತು. ಕಿಲ್ಲೆಯೊಳಗಿನ ಜನರು ತತ್ತರಿಸಿದರು. ಮರಾಟರು ಕೊತ್ತಳಗಳನ್ನು ಕೆಡವಿದರೆಂದು ತಿಳಿದರು. ಮೇನೇಸೀಝು ನಂತೂ ಈ ಪ್ರಚಂಡ ಧ್ವನಿಯು ಎಲ್ಲಿಯದೆಂಬದನ್ನು ತಿಳಿಯದೆ ದಿಙ್ಮೂಢನಾದನು. ಈ ಪ್ರಚಂಡ ಧ್ವನಿಯಿಂದ ಮರಾಟರೂ ಗಾಬರಿಯಾಗಿದ್ದರು. ಅಷ್ಟರಲ್ಲಿ ಸದಾಶಿವ ಗಣು ಮೊದಲಾದವರು ಅವರನ್ನು ಕೂಡಿಕೊಂಡು ನಡೆದ ಸಂಗತಿಯನ್ನು ಹೇಳಿದರು. ಅದರಿಂದ ಮರಾಟರಿಗೆ ತುಂಬಾ ಹುರುಪು ಬಂದಿತು.

ಬಳಿಕ ಕೆಲಹೊತ್ತಿನ ಮೇಲೆ ಕಿಲ್ಲೇದಾರನಿಗೆ ಮದ್ದಿನ ಖಜಾನೆಯು ಉಧ್ವಸ್ತವಾದದ್ದು ತಿಳಿಯಿತು. ಆಗ ಅವನು ತುಂಬಾ ಕೈಕಾಲುಗೆಟ್ಟು ವಿಶ್ವಾಸುಕರಾದ ಇಬ್ಬರು ಸರದಾರರನ್ನು ಕರೆದು ಶರಣುಬಂದಿದ್ದೇವೆ

ಯುದ್ಧವನ್ನು ನಿಲ್ಲಿಸಬೇಕೆಂದು ಚಿಮಣಾಜಿಅಪ್ಪಾನಿಗೆ ಹೇಳಿಕಳಿಸಿದನು. ಆ ಸರದಾರರು ದಿಡ್ಡಿಯಬಾಗಿಲನಿಂದ ಹೊರಬಿದ್ದು ಅಪ್ಪಾಜಿಯನ್ನು ಕಂಡು ತಮ್ಮ ಒಡೆಯನ ಬಿನ್ನಹವನ್ನು ತಿಳಿಸಿದರು. ಅಪ್ಪಾಜಿಯು ಕುದುರೆ ಯನ್ನೇರಿ ಸೈನ್ಯದಲ್ಲಿ ತಿರುಗಾಡುತ್ತಿದ್ದನು. ಆಗ ಆತನು ಶತ್ರುಗಳು ಒಪ್ಪಂದಸಂಧಾನಕ್ಕೆ ಬಂದಿರುವರೆಂದು ತಿಳಿದು ''ಮೊದಲು ಹೇಳಿದ ಮೇರೆಗೆ ವಸಯಿ ಪ್ರಾಂತವನ್ನು ಬಿಟ್ಟು ಹೋಗಲಿಕ್ಕೇ ಬೇಕು. ಈ ಮುಖ್ಯಕರಾರನ್ನು ನೀವು ಪಾಲಿಸದಿದ್ದರೆ ಯುದ್ಧವನ್ನು ನಿಲ್ಲಿಸಲಾಗುವ ದಿಲ್ಲ. ನಿಮ್ಮೆಲ್ಲರ ಶಿರಸ್ಸುಗಳನ್ನು ಹರಿಗಡಿದು ಕಿಲ್ಲೆಯನ್ನು ಪ್ರವೇಶಿಸು ವೆವು'' ಎಂದು ಖಂಡಿತವಾಗಿ ಹೇಳಿದನು. ಕಿಲ್ಲೇದಾರನು ಆ ಕರಾರನ್ನು ಒಪ್ಪಿಕೊಂಡು ಯುದ್ಧವನ್ನು ನಿಲ್ಲಿಸಬೇಕೆಂದು ಮತ್ತೆ ಬೇಡಿಕೊಂಡನು. ಮತ್ತು ಕಿಲ್ಲೆಯಬಾಗಿಲವನ್ನು ತೆರೆಯಿಸಿ ಈ ಹೊತ್ತಿನಿಂದ ಕಿಲ್ಲೆಯಮೇಲೆ ಸ್ವಾಮಿತ್ವವು ನಿಮ್ಮದೇ ಇರುವದೆಂದು ಕಿಲ್ಲೆಯನ್ನೊಪ್ಪಿಸಿದನು.

ಶತ್ರುಗಳು ಶರಣುಬಂದದ್ದರಿಂದ ಉದಾರ ಹೃದಯನಾದ ಅಪ್ಪಾ ಜಿಯು ಯುದ್ಧವನ್ನು ನಿಲ್ಲಿಸಿದನು. ಮರಾಟರ ವಿಜಯಪತಾಕೆಯು ವಸಯಿ ಕಿಲ್ಲೆಯಮೇಲೆ ನರ್ತಿಸಲಾರಂಭಿಸಿತು. ಯುದ್ಧವನ್ನು ನಿಲ್ಲಿಸಿದ್ದ ರಿಂದ ಶತ್ರುಗಳಲ್ಲಿ ಯಾರಿಗೂ ತೊಂದರೆ ಕೊಡಲಾಗದೆಂದು ಅಪ್ಪಾಜಿಯು ತನ್ನ ಸೈನಿಕರಿಗೆ ಕಟ್ಟಪ್ಪಣೆ ಮಾಡಿದನು. ಈ ಮೇರೆಗೆ ಅಪ್ಪಾಜಿಯು ಕಿಲ್ಲೆಯನ್ನು ಕೈವಶಮಾಡಿಕೊಂಡು, ಆರುತಿಂಗಳಲ್ಲಿ ವಸಯಿ ಕಿಲ್ಲೆಯನ್ನು ಕೈವಶಮಾಡಿಕೊಳ್ಳುತ್ತೇನೆಂದು ಬಾಜೀರಾವ ಪೇಶ್ವೆಯಮುಂದೆ ಮಾಡಿದ ಪ್ರತಿಜ್ಞೆಯನ್ನು ಪೂರ್ಣಮಾಡಿದನು. ಆದಿನ ವೈಶಾಖಶುದ್ಧ ಪೌರ್ಣಿಮೆ ಯಿತ್ತು. ಮರಾಟರು ಜಯಭೇರಿಯನ್ನು ಹೊಡೆಯುತ್ತ ದುರ್ಗವನ್ನು ಪ್ರವೇಶಿಸಿದರು. ಮರಾಟರ ದಂಡಿನಲ್ಲಿ ಎಲ್ಲಕಡೆಗೂ ಆನಂದವೇ ಆನಂದ ವಾಯಿತು.

---

## (೨೪) ಉಪಸಂಹಾರ.

ಫಿರಂಗೀ ಕಿಲ್ಲೇದಾರನಾದ ಮೇನೇ ಸೀಝುನು ಅವಶಿಷ್ಟ ಫಿರಂಗೀ ಸೈನ್ಯವನ್ನೂ, ಹುಡುಗರನ್ನೂ, ಹೆಂಗಸರನ್ನೂ ಕಟ್ಟಿಕೊಂಡು ವಸಯಿ

ಕಿಲ್ಲೆಯನ್ನು ತ್ಯಜಿಸಿ ಮುಂಬಯಿ ಕಡೆಗೆ ಹೋದನು. ಫಿರಂಗಿಗಳ ಬಳಿ ಯಲ್ಲಿದ್ದ ಹಿಂದೂಸೈನ್ಯವು ಮರಾಟರನ್ನು ಕೂಡಿಕೊಂಡಿತು. ಕಿಲ್ಲೆಯಿಂದ ಬಹುದೂರ ತಳವೂರಿದ್ದ ಮರಾಟರ ಸೈನ್ಯವೆಲ್ಲ ದುರ್ಗಕ್ಕೆ ಬಂದಿತು. ಅಪ್ಪಾಜಿಯು ದುರ್ಗದ ಭದ್ರತೆಯನ್ನು ನೋಡಿ ಇಂಥ ದುರ್ಗವು ನಮ್ಮ ಕೈಸೇರಿದ್ದೆಂದರೆ ಕೇವಲ ಈಶ್ವರೀ ತಂತ್ರವಲ್ಲದೆ ಮನುಷ್ಯರ ಸಾಮರ್ಥ್ಯವು ಇಲ್ಲಿ ನಡೆಯುವ ಹಾಗಿಲ್ಲವೆಂದು ಉದ್ಗಾರ ತೆಗೆದನು. ಮಲ್ಹಾರರಾವ ಹೋಳಕರ ಮೊದಲಾದ ವೃದ್ಧ ಸರದಾರರಿಗೂ ಕಿಲ್ಲೆಯ ಭದ್ರತೆಯನ್ನು ನೋಡಿ ತುಂಬಾ ಸೋಜಿಗೆವಾಯಿತು.

ಬಳಿಕ ಅಪ್ಪಾಜಿಯು ಫಿರಂಗಿಗಳು ಸೆರೆಯಿರಿಸಿದ ಹಿಂದೂರಮಣಿಯರನ್ನು ಕರೆಯಿಸಿ ಅವರು ಯಾವ ಯಾವ ಸ್ಥಳದವರೆಂಬದನ್ನು ಕೇಳಿಕೊಂಡು ಅವರನ್ನು ಯೋಗ್ಯ ಬಂದೋಬಸ್ತಿನೊಡನೆ ಅವರವರ ಊರಿಗೆ ಮುಟ್ಟಿಸಿದನು. ಆ ಎಲ್ಲ ಹೆಣ್ಣು ಮಕ್ಕಳನ್ನು ಸಹೋದರಿಯರಂತೆ ಭಾವಿಸಿ ಅವರಿಗೆ ಉಚಿತ ಉಡುಗರೆಗಳನ್ನು ಕೂಡಾ ಕೊಟ್ಟನು. ಅಪ್ಪಾಜಿಯ ಈ ದೊಡ್ಡ ಮನಸ್ಸನ್ನು ನೋಡಿ ಆ ಹೆಂಗಳೆಯರು ಆ ಪುಣ್ಯವಂತನ ರಾಜ್ಯವು ಚಿರಕಾಲವಿರಲೆಂದು ಹರಿಸಿದರು. ಫಿರಂಗಿಗಳು ತಮ್ಮ ಧರ್ಮಪ್ರಸಾರಕ್ಕಾಗಿ ಏನೇನು ಅತ್ಯಾಚಾರ ನಡಿಸಿದ್ದರೆಂಬದು ಚಿಮಣಾಜಿಅಪ್ಪಾಜಿಗೆ ತಿಳಿದು ಫಿರಂಗಿಗಳ ಧರ್ಮಛಲಕ್ಕೆ ತುಂಬಾ ಸಂತಾಪವಾಯಿತು. ಆಗ ಚಿಮಣಾಜಿಯ ಅಪ್ಪಣೆಯಂತೆ ಸೆರೆಯಲ್ಲಿದ್ದ ಫಿರಂಗೀಧರ್ಮಾಧಿಕಾರಿಯು ಸಭೆಗೆ ತರಲ್ಪಟ್ಟನು.

ಪುಕ್ಕನಾದ ಆ ಫಿರಂಗೀಧರ್ಮಾಧಿಕಾರಿಯು ಬಹು ದೈನ್ಯದಿಂದ ಅಪ್ಪಾಜಿಯನ್ನು ನೋಡಲಾರಂಭಿಸಿದನು. ನಿಳೋಜಿಯೂ ಫಿರಂಗಿಗಳ ಸೆರೆಯಲ್ಲಿದ್ದ ಬೇರೆ ಜನರೂ ಆ ಧರ್ಮಾಧಿಕಾರಿಯ ದುರ್ವರ್ತನವನ್ನು ಬಣ್ಣಿಸಲಾರಂಭಿಸಿದರು. ಫಿರಂಗೀ ಧರ್ಮವನ್ನು ಸ್ವೀಕರಿಸದ ಹಿಂದುಗಳನ್ನು ಆ ಮೂರ್ಖನು ಕಾದಕಬ್ಬಿಣ ಹಂಚಿನಮೇಲೆ ಅಂಗಾತ ಮಲಗಿಸುತ್ತಿದ್ದನಂತೆ! ಇದೊಂದೇ ಸಂಗತಿಯಿಂದ ಅಪ್ಪಾಜಿಯ ಮೈಕೂದಲು ನೆಟ್ಟಗಾದವು. ಈತನು ಪ್ರತ್ಯಕ್ಷ ರಾಕ್ಷಸನೇ ಅಹುದು ಎಂಬ ಉದ್ಗಾರಗಳು ಆತನ ಮುಖದಿಂದ ಹೊರಟಿತು. ಅಪ್ಪಾಜಿಯು ತಪ್ತನಾದನು. ಆತನು ಈಗಲೇ ಈ ಧರ್ಮಾಧಿಕಾರಿಯನ್ನು ತುಂಡರಿಸಿ ಚಲ್ಲುವನೋ ಎಂಬ ಹಾಗೆ ತೋರಿ

ದನು. ಆತನ ವಿಶಾಲವಾದ ಕಣ್ಣುಗಳು ಕಿಡಿಯನ್ನು ಕಾರುವಂತೆ ತೋರಿದವು. ಮುಖವು ನೋಡ ಕೂಡದಷ್ಟು ಉಗ್ರವಾಯಿತು. ಧರ್ಮಾಧಿಕಾರಿಯು ಅಂಜಿದನು. ಇಂದು ತನ್ನ ಅಂತವಾಗದೆ ಬಿಡದು ಎಂಬ ನಿಶ್ಚಯಮಾಡಿದನು. ಇನ್ನೊಂದು ಕ್ಷಣವೋ ಇನ್ನೊಂದು ಗಳಿಗೆಯೋ ಎಂದು ಚಿಂತಾಕ್ರಾಂತನಾದನು. ಮರಣಭಯದಿಂದ ಅವನ ಮುಖವು ಕಪ್ಪಿಟ್ಟಿತು. ಆಗ ಗಣೋಬನು ಮುಂದರಿದು ಈ ನೀಚನು ಈಗ ಹ್ಯಾಗೆ ಗಾಬರಿಯಾಗಿದ್ದಾನೆ ನೋಡಿರಿ; ತಾನು ಜನರಿಗೆ ವಿಚಿತ್ರ ಹಿಂಸೆ ಕೊಡುವಾಗ ಕುಲು ಕುಲು ನಗುತ್ತಿದ್ದನಲ್ಲವೇ? ತನಗೆ ಈಗ ಈ ಸ್ಥಿತಿಯು ಬಂದೊದಗಿದ್ದರಿಂದ ಮಂಗನಂತೆ ಹಲ್ಲುಕಿರಿಯುತ್ತಿರುವನು. ಈ ನೀಚನನ್ನು ಆನೆಯ ಕಾಲಿಗೆ ಕಟ್ಟಿ ಕೊಲ್ಲಿಸಬೇಕು ಎಂದು ನುಡಿದು ಅವನ ಗಡ್ಡವನ್ನು ಹಿಡಿದು ಅವಮಾನಗೊಳಿಸ ಹವಣಿಸಿದನು. ಆದರೆ ಅಪ್ಪಾಜಿಯು ಸಿಟ್ಟುಮಾಡಿ ಅವನ ಹವಣಿಕೆಯನ್ನು ನಡೆಯುಗೊಡಲಿಲ್ಲ.

ಬಳಿಕ ಅಪ್ಪಾಜಿಯು ಆ ನೀಚನಿಗೆ ಮೂರು ಛಟಕಿಗಳನ್ನು ಹೊಡೆದು ಬಿಟ್ಟುಬಿಡಲಿಕ್ಕೆ ಅಜ್ಞೆಮಾಡಿದನು. ಇಂಥ ನೀಚನಿಗೆ ಇಷ್ಟು ಅಲ್ಪ ಶಿಕ್ಷೆಯನ್ನು ವಿಧಿಸಿದ್ದಕ್ಕಾಗಿ ಸಭಿಕರಿಗೆ ಅಸಮಾಧಾನವಾಯಿತು. ಆಗ ಅಪ್ಪಾಜಿಯು ನುಡಿದನೇನಂದರೆ—ಎಲ್ಲಿಯವರೆಗೆ ಶ್ರೀಮಂತ ಸರಕಾರಕ್ಕೆ ಸುದ್ದಿ ಮುಟ್ಟಿದ್ದಿಲ್ಲವೋ ಅಲ್ಲಿಯವರೆಗೆ ಈ ನೀಚರ ಪುಂಡಾಟಿಕೆ ನಡೆಯಿತು. ಆದರೆ ಇನ್ನು ಮುಂದೆ ಇಂಥವರ ಆಟ ನಡೆಯದು. ಈತನ ಅಪರಾಧಕ್ಕೆ ಸರಿಯಾದ ಶಿಕ್ಷೆಮಾಡಲು ಪರಲೋಕದಲ್ಲಿ ಯಮದೇವರು ಸಿದ್ಧನಿರುವನು. ಇಲ್ಲಿ ಈ ನೀಚನಿಗೆ ಇಷ್ಟೇ ಶಿಕ್ಷೆ ಸಾಕು.

ಈ ಮೇರೆಗೆ ಅಪ್ಪಾಜಿಯು ನುಡಿಯಲು ಸಭಿಕರು ತಟಸ್ಥರಾದರು. ಶ್ರೀಮಂತರ ಅಪ್ಪಣೆಯಂತೆ ಒಬ್ಬ ಸೇವಕನು ಕೈಯಲ್ಲಿ ಬೆತ್ತವನ್ನು ತಕ್ಕೊಂಡು ಸರ್ವರ ಸಮಕ್ಷ ಆ ಫಿರಂಗೀ ಧರ್ಮಾಧಿಕಾರಿಗೆ ಮೂರು ಛಟಕಿಗಳನ್ನು ಹೊಡೆದು ಸಭೆಯಿಂದ ಅವನನ್ನು ದಬ್ಬಿಕೊಟ್ಟನು. ಪ್ರಾಣದಾನ ಮಾಡಿದ್ದಕ್ಕೆ ಆ ಜೀವಗಳ್ಳ ಧರ್ಮಾಧಿಕಾರಿಯು ಶ್ರೀಮಂತ ಸರಕಾರದ ಅಭಿನಂದನ ಮಾಡುತ್ತ ಬೀಳುತ್ತ ಏಳುತ್ತ ಓಡುತ್ತ ನಡೆದನು. ಅವನ ಆ ಚಟವಟಿಕೆಯನ್ನು ನೋಡಿ ಸಮಸ್ತ ಸಭಿಕರೂ ಹೊಟ್ಟೆತುಂಬಾ ನಕ್ಕರು. ಅನಂತರ ಸೆರೆಯಲ್ಲಿದ್ದ ಫಿರಂಗೀ ಸೈನಿಕರನ್ನು ತರಿಸಿದನು. ಸೈನಿ

ಕರು ಸತ್ಯವಾದಿಗಳು ಆಗಿದ್ದು ಜೀವಗಳ್ಳರಾಗದ್ದರಿಂದ ಅಪ್ಪಾಜಿಯು ಆವರ ಯೋಗ್ಯತೆಯನ್ನು ಕೂಡಲೆ ತಿಳಿದು ಹಿಂದುಗಳ ಮೇಲೆ ತಿರುಗಿ ಬೀಳದಂತೆ ಅವರಿಂದ ವಚನತಕ್ಕೊಂಡು ಅವರನ್ನು ಬಿಟ್ಟು ಬಿಟ್ಟನು.

ಫಿರಂಗಿಗಳಲ್ಲಿ ಯಾರೂ ಕಿಲ್ಲೆಯಲ್ಲಿ ಇಲ್ಲದಾಯಿತು. ಬಳಿಕ ಅಪ್ಪಾಜಿಯು ಫಿರಂಗಿಗಳು ಸೆರೆಯಿರಿಸಿದ ಹಿಂದುಗಳನ್ನು ಒಟ್ಟುಗೂಡಿಸಿ ಅವರವರ ಸಂಗತಿಗಳನ್ನು ಕೇಳಿದನು. ಅವರಲ್ಲಿ ಮದ್ರಾಸೀ ಬ್ರಾಹ್ಮಣ ನೊಬ್ಬನು ಇದ್ದನು. ಅವನು ತ್ರಿನಾಮಧಾರಿಯು ಗಣೋಬನು ಅವನ ಗುರುತುಹಿಡಿದು ಅವನಕೂಡ ಸಲಿಗೆಮಾಡಿ ಅವನ ಹುರುಡನ್ನೆಲ್ಲ ತಿಳಿದು ಕೊಂಡಿದ್ದನು. ಆ ಮದ್ರಾಸೀ ಬ್ರಾಹ್ಮಣನು ಒಬ್ಬ ಭಿಕ್ಷುಕನು; ಅವನು ಎಂಟುತಿಂಗಳ ಆಚೆಗೆ ಪುಣೆಗೆ ಭಿಕ್ಷಾಟಣಕ್ಕಾಗಿ ಬಂದಿದ್ದನು. ಅವನು ವಿದ್ಯಾವಂತನಿದ್ದದರಿಂದ ಶ್ರೀಮಂತರಿಂದ ಅವನಿಗೆ ಚನ್ನಾಗಿ ಆಶ್ರಯ ಸಿಕ್ಕಿತ್ತು. ಅವನು ಪುಣೆಯಲ್ಲಿ ಎರಡು ತಿಂಗಳವರೆಗೆ ವಸತಿಯನ್ನು ಮಾಡಿ ಎಲ್ಲರಿಗೂ ಪರಿಚಯುಸ್ಥನಾಗಿದ್ದನು. ಹೀಗಿರಲು ಅವನು ಅಲ್ಲಿಯ ಮಾರುತೀದೇವಸ್ಥಾನದ ಪೂಜಾರಿಯ ಸ್ನೇಹಬೆಳಿಸಿ ದೇವರ ಮುಂದಿನ ಬೆಳ್ಳಿಯ ತಾಂಬಾಣ ಗಿಂಡಿ ಮೊದಲಾದವುಗಳನ್ನು ಎತ್ತಿಹಾಕಿದನು. ಈತನು ವಿದ್ಯಾವಂತನಾದ್ದರಿಂದ ಪೂಜಾರಿಗೆ ಇವನ ವಿಷಯುವಾಗಿ ಸಂಶ ಯವುಂಟಾಗಲಿಲ್ಲ ಮರುದಿನ ಆ ಬ್ರಾಹ್ಮಣನು ಪುಣೆಯನ್ನು ತ್ಯಜಿಸಿ ದಕ್ಕಿಣಕಡೆಗೆ ಹೊರಟು ಪಿಂಪಳಗ್ರಾಮದಲ್ಲಿ ಒಂದು ದಿನ ವಸ್ತೀಮಾಡಿ ದಾಗ ಫಿರಂಗಿಗಳ ಸೆರೆಯಲ್ಲಿ ಸಿಕ್ಕಿದ್ದನು ಅಂದಿನಿಂದ ಅವನು ವಸಯಿ ಕಿಲ್ಲೆಯು ಮರಾಟರ ಹಸ್ತಗತವಾಗುವವರೆಗೆ ಫಿರಂಗಿಗಳ ಸೆರೆಯಲ್ಲಿಯೇ ಇದ್ದನು. ಗಣೋಬನು ಒಳ್ಳೇ ವಿನೋದಪ್ರಿಯನಾದ್ದರಿಂದ ಅವನು ಆ ಬ್ರಾಹ್ಮಣನ ಗುರುತುಹಿಡಿದು ಅವನೊಡನೆ ವಿನೋದಮಾಡಲಾರಂಭಿ ಸಿದನು. ಆ ಮದ್ರಾಸಿಯ ಭಾಷೆ, ವೇಷ, ನಡಿಗೆ ಮೊದಲಾದವುಗಳೂ ಅವನ ವಿನೋದಕ್ಕೆ ಕಾರಣವಾಗಿದ್ದವು. ಆ ಮದ್ರಾಸಿಯು ಪುಣೆಯಲ್ಲಿ ತಾನು ಕಳವು ಮಾಡಿತಂದ ಸಾಮಾನುಗಳನ್ನೂ ದಕ್ಷಿಣೆ-ಸಂಭಾವನೆ ಗಳಿಂದ ಬಂದ ದ್ರವ್ಯಾಂಶವನ್ನೂ ತನ್ನದೊಂದು ಹಸಿಬೆಯಲ್ಲಿ ತುಂಬಿ ಇದುವರೆಗೂ ಅದನ್ನು ಜತನಮಾಡಿದ್ದನು. ಗಣೋಬನು ಒಳ್ಳೇ ಯುಕ್ತಿಯಿಂದ ಆತನ ಹಸಿಬೆಯಲ್ಲಿ ಏನದೆ ಎಂಬದನ್ನು ನೋಡಲು ಅದ

ರಲ್ಲಿ ಪುಣೆಯ ಮಾರುತಿಯ ದೇವಾಲಯದಲ್ಲಿ ಕಳುವಾಗಿ ಹೋದ ಬೆಳ್ಳಿಯ ಒಡವೆಗಳಿದ್ದವು. ಈ ಸಂಗತಿಯನ್ನು ಆತನು ತುಳಾಜಿರಾಯನಿಗೆ ತಿಳಿಸಿದನು. ಅಪ್ಪಾಜಿಯವರ ಮುಂದೆ ಆ ಮದ್ರಾಸೀ ಬ್ರಾಹ್ಮಣನು ಯಾವಾಗ ಕರೆಯಿಸಲ್ಪಟ್ಟನೋ ಆಗ ತುಳಾಜಿಯು ಮದ್ರಾಸಿಗೆ ಆ ಹಸಿಬೆಯಲ್ಲಿಯ ಪದಾರ್ಥಗಳನ್ನು ತೆಗೆದು ತೋರಿಸಲು ಸೂಚಿಸಿದನು. ಆತನು ಹಸಿಬೆಯಲ್ಲಿಯ ಪದಾರ್ಥಗಳನ್ನು ತೋರಿಸಲು ಒಪ್ಪದಾದನು. ಆಗೆ ತುಳಾಜಿಯು ಅಪ್ಪಾಜಿಯವರ ಸಮ್ಮತಿಯಂತೆ ಗಣೋಬನಿಗೆ ಹಸಿಬಿಯನ್ನು ಶೋಧಿಸಲು ಆಜ್ಞೆಮಾಡಿದನು. ಗಣೋಬನು ಅದರೊಳಗಿನ ಒಂದೊಂದೇ ಪದಾರ್ಥಗಳನ್ನು ಬೈಲಿಗಿಟ್ಟನು. ಅದರಲ್ಲಿ ಹೊರಟ ಬೆಳ್ಳಿಯಪಾತ್ರೆಗಳನ್ನು ನೋಡಿ ಅಪ್ಪಾಜಿಗೆ ಆಶ್ಚರ್ಯವಾಯಿತು. ಆಗ ತುಳಾಜಿಯು ಆ ಪಾತ್ರೆಗಳು ಈ ಬ್ರಾಹ್ಮಣನ ಬಳಿಯಲ್ಲಿ ಹ್ಯಾಗೆ ಬಂದಿರುವವೆಂಬದನ್ನು ಹೇಳಿದನು. ಆ ಸಂಗತಿಯನ್ನು ಕೇಳಿ ಮದ್ರಾಸಿಯ ಮುಖವು ಕಪ್ಪಿಟ್ಟಿತು. ಅಪ್ಪಾಜಿಯು ಸಿಟ್ಟು ಬೆಂಕಿಯಾದನು. ಈ ನೀಚನಿಗೆ ಏನು ಶಿಕ್ಷೆಮಾಡಬೇಕೆಂದು ಅಂದನು

ಬಳಿಕ ಅಪ್ಪಾಜಿಯು ಆ ಪಾತ್ರೆಗಳನ್ನು ಪುಣೆಯ ಮಾರುತಿಯ ದೇವಸ್ಥಾನದ ಅರ್ಚಕರಿಗೆ ತಿರುಗಿ ಮುಟ್ಟಿಸುವದಕ್ಕಾಗಿ ತಕ್ಕೊಂಡು ನಾವು ಮಾಡಬೇಕಾದ ಶಿಕ್ಷೆಯನ್ನು ಈ ಮೊದಲೇ ಫಿರಂಗಿಗಳು ಈತನಿಗೆ ಮಾಡಿದ್ದರಿಂದ ಈತನನ್ನು ಈಗಲೇ ಕಿಲ್ಲೆಯಿಂದ ಹೊರಗೆ ತಳ್ಳಿಬಿಡಿರಿ. ಎಂದು ಆಜ್ಞಾಪಿಸಿದನು. ಸೇವಕರು ಅದರಂತೆ ಆ ಮದ್ರಾಸಿಯನ್ನು ಕಿಲ್ಲೆಯಹೊರಗೆ ಹಾಕಿದರು.

* * * * *

ಸೂರ್ಯಾಜಿಯ ಮಕ್ಕಳು ಸೂರ್ಯಾಜಿಯನ್ನು ಕೂಡಿಕೊಂಡರು. ನಿಳೋಜಿಯನ್ನೂ, ಚಂದ್ರಾ ತರುಣಿಯನ್ನೂ ನೋಡಿ ಆ ವೃದ್ಧ ತಂದೆಗೆ ತುಂಬಾ ಸಂತೋಷವಾಯಿತು. ನಿಳೋಜಿಯೂ-ಚಂದ್ರಾ ತರುಣಿಯೂ ಮುದ್ದಿನ ಖಜಾನೆಯಲ್ಲಿ ಮಾಡಿದ ಸಾಹಸವನ್ನು ಕೇಳಿ ಅಪ್ಪಾಜಿಗೆ ತುಂಬಾ ಸಂತೋಷವಾಯಿತು. ಆಗ ಅವನು ನಿಳೋಜಿಯನ್ನು ತನ್ನ ದಂಡಿನಲ್ಲಿ ಸೇರಿಸಿಕೊಂಡು ಚಂದ್ರಾತರುಣಿಯನ್ನು ತುಳಾಜಿಗೆ ಕೊಟ್ಟು ವಿವಾಹ ಮಾಡುವಂತೆ ಸೂರ್ಯಾಜಿಗೆ ಅಪ್ಪಣೆಮಾಡಿದನು. ಹೀನಂತರ ಈ ಅಪ್ಪಣೆ

ಯನ್ನು ಕೇಳಿ ಸೂರ್ಯಾಜಿಯು—ಸರಕಾರ! ಈ ತಮ್ಮ ಅಪ್ಪಣೆಯು ನನಗೆ ತುಂಬಾ ಸಂತೋಷವನ್ನುಂಟುಮಾಡಿತು. ತುಳಾಜಿರಾಯನಂಥ ದೊಡ್ಡ ಸರದಾರನ ಪದರಿನಲ್ಲಿ ನನ್ನ ಮಗಳು ಬೀಳುವದರಿಂದ ನಾನು ಧನ್ಯನಾದೆನು. ನನ್ನ ಮೇಲೆ ಸರಕಾರದ ಪರಮಾನುಗ್ರಹವಾಯಿತೆಂದು ಭಾವಿಸುತ್ತೇನೆ, ಎಂದು ನುಡಿದನು. ಚಂದ್ರಾ ತರುಣಿಗೂ ಈ ಸಂಗತಿ ಯಿಂದ ಬಹಳ ಆನಂದವಾಯಿತು. ತುಳಾಜಿರಾಯನು ಆ ವಸಯಿಾ ಕಿಲ್ಲೆಯಲ್ಲಿಯೇ ಶ್ರೀಮಂತರ ಅಪ್ಪಣೆಯಂತೆ ಚಂದ್ರಾ ತರುಣಿಯ ಪಾಣಿ ಗ್ರಹಣ ಮಾಡಿದನು. ಈ ಪಾಣಿಗ್ರಹಣ ಮಹೋತ್ಸವದಿಂದ ಮರಾಟಾ ಸೈನಿಕರ ಸಂಭ್ರಮವು ಹೆಚ್ಚಿತು.

ಬಳಿಕ ಅಪ್ಪಾಜಿಯು ಯುದ್ಧದಲ್ಲಿ ಪರಾಕ್ರಮ ತೋರಿಸಿದ ಸರದಾರ ರಿಗೂ, ದಂಡಾಳುಗಳಿಗೂ, ಪಾರಿತೋಷಕಗಳನ್ನು ಕೊಟ್ಟನು. ವಸಯಿಾ ಪ್ರಾಂತದಿಂದ ಫಿರಂಗಿಗಳು ಸಮೂಲವಾಗಿ ಹೋದದ್ದರಿಂದ ಆ ಪ್ರಾಂತದ ಜನರು ಅಪ್ಪಾಜಿಯನ್ನು ಬಹು ವಿಧವಾಗಿ ಕೊಂಡಾಡಿದರು.

* * * * *

ವಸಯಿಾ ಕಿಲ್ಲೆಯಲ್ಲಿ ಹಾಗು ಮುಂಚಿನ ಬೈಲಲ್ಲಿ ಮಡಿದವರ ಸಂ- ಸ್ಕಾರಗಳನ್ನು ಅಪ್ಪಾಜಿಯು ಸ್ವಂತವಾಗಿ ನಿಂತು ಮಾಡಿಸಿದನು. ಅನ್ಯ ಧರ್ಮದವರ ಅವಹೇಲನೆ ಮಾಡುವದು ಅಪ್ಪಾಜಿಗೆ ಸ್ವಲ್ಪವೂ ಸೇರುತ್ತಿ ದ್ದಿಲ್ಲ. ಅದರಂತೆ ಅವನ ಸೈನಿಕರೂ ಇದ್ದರು. ಅವರು ಯಾವ ಪುರುಷ ನಿಗಾಗಲಿ ಸ್ತ್ರೀಗಾಗಲಿ ಯಾವ ಬಗೆಯ ಅವಮಾನವನ್ನೂ ಮಾಡಲಿಲ್ಲ. ಫಿರಂಗಿಗಳ ಚರ್ಚೆಗಳಲ್ಲಿ ದೊಡ್ಡ ದೊಡ್ಡ ಗಂಟೆಗಳಿದ್ದವು. ಅಪ್ಪಾಜಿಯು ...ನ್ನೆಲ್ಲ ತರಿಸಿ ಮಹಾರಾಷ್ಟ್ರದಲ್ಲಿಯ ಪ್ರಸಿದ್ಧ ದೇವಸ್ಥಾನಗಳಿಗೆ ...ಂದರಂತೆ ಕಾಣಿಕೆಯಾಗಿ ಕಳುಹಿಸಿದನು.

...ಪ್ಪಾಜಿಯ ಈ ಅತುಲ ಪರಾಕ್ರಮದ ಸುದ್ದಿಯು ಬಾಜೀರಾವ ...ಪಿತು. ಆತನು ತಮ್ಮನ ಈ ಶೌರ್ಯವನ್ನು ಬಹಳವಾಗಿ ...ನು. ಅಪ್ಪಾಜಿಯು ವಸಯಿಾ ಪ್ರಾಂತದಲ್ಲಿ ಯೋಗ್ಯ ಬಂದೋ... ಸುಮುಹೂರ್ತದಲ್ಲಿ ರಾಜಧಾನಿಗೆ ಬಿಜಯ ಮಾಡಿದನು. ...ದಲು ಶ್ರೀ ಬ್ರಹ್ಮೇಂದ್ರ ಸ್ವಾಮಿಗಳವರ ದರುಶನಕ್ಕೆ ಹೋ- ...ಬ್ರಹ್ಮೇಂದ್ರ ಸ್ವಾಮಿಗಳು ಸಮರ್ಥ ರಾಮದಾಸರು ಶಿವಾಜಿ

ರಾಜನಿಗೆ ಗುರುವಾದಂತೆ ಬಾಜೀರಾಯನಿಗೂ, ಚಿಮಣಾಜಿಅಪ್ಪಾನಿಗೂ ಗುರುಗಳಾಗಿದ್ದರು. ಬಾಜೀರಾಯನಾಗಲಿ, ಚಿಮಣಾಜಿಅಪ್ಪಾನಾಗಲಿ ಬ್ರಹ್ಮೇಂದ್ರ ಸ್ವಾಮಿಗಳಲ್ಲಿ ಅತುಲನಿಷ್ಠೆಯನ್ನಿಟ್ಟಿದ್ದರು. ಯಾವದೊಂದು ಕಠಿಣ ಕಾರ್ಯದಲ್ಲಿ ಗುರುಗಳ ಅಪ್ಪಣೆ ಪಡೆಯದೆ ಅವರು ಮುಂದೆ ಕಾಲಿಡುತ್ತಿದ್ದಿಲ್ಲ ಪ್ರಸ್ತುತದ ಯುದ್ಧಕ್ಕೆ ತೆರಳುವ ಮೊದಲು ಚಿಮಣಾಜಿ ಅಪ್ಪಾಜಿಯು ಗುರುಗಳ ಆಶೀರ್ವಾದವನ್ನು ಪಡೆದಿದ್ದನು. ಈಗ ಪ್ರಿಯ ಶಿಷ್ಯನು ವಿಜಯ ಸಂಪಾದಿಸಿಕೊಂಡು ಸನ್ನಿಧಿಗೆ ಬರಲು, ಬ್ರಹ್ಮೇಂದ್ರ ಸ್ವಾಮಿಗಳವರಿಗೆ ತುಂಬಾ ಆನಂದವಾಯಿತು. ಅವರು ಅತ್ಯಂತ ಆನಂದದಿಂದ ಚಿಮಣಾಜಿಅಪ್ಪಾನಿಗೆ ಆಶೀರ್ವಾದ ಮಾಡಿ "ಅಪ್ಪಾಜೀ, ನೀನು **ಕಲಿಯುಗದ ಪರಶುರಾಮ** ನಂತೆ ಖಂಬೀರನಿರುತ್ತೀ" ಎಂದು ಉದ್ಗಾರಗಳನ್ನು ತೆಗೆದರು. ಗುರುಗಳು ಹೀಗೆ ತನ್ನನ್ನು ಗೌರವಿಸಿದ್ದಕ್ಕಾಗಿ ಅಪ್ಪಾಜಿಗೆ ಹೆಚ್ಚಾಗಿ ಹುರುಪು ಬಂದಿತು. ಅವನ ಇಂದಿನವರೆಗಿನ ಯುದ್ಧಗಳನ್ನು ನೋಡಿದರೆ ಬ್ರಹ್ಮೇಂದ್ರ ಸ್ವಾಮಿಗಳವರು ಯೋಗ್ಯ ಬಿರುದು ಕೊಟ್ಟರೆಂದು ಮಹಾರಾಷ್ಟ್ರದ ಎಲ್ಲ ಸರದಾರರಿಗೂ ಅನಿಸಿತು. ಧನ್ಯ! ಚಿಮಣಾಜಿಅಪ್ಪಾ! ನೀನು ನಿಜವಾಗಿಯೂ ಕಲಿಯುಗದ ಪರಶುರಾಮನು!!

† † † † † †

ಪಾಶ್ಚಿಮಾತ್ಯರನ್ನು ಪೌರ್ವಾತ್ಯರು ಯುದ್ಧದಲ್ಲಿ ಪರಾಭವಗೊಳಿಸಲು ಸಮರ್ಥರಿರುವರೆಂಬದನ್ನು ಜಪಾನವು ೧೯೦೪-೦೫ರಲ್ಲಿ ಸಿದ್ಧಪಡಿಸಿರದೆ ೧೭೩೯ ರಲ್ಲಿ ಅಂದರೆ ೧೬೫ ವರುಷಗಳ ಪೂರ್ವದಲ್ಲಿಯೇ ಹಿಂದುಸ್ತಾನದಲ್ಲಿಯ ಮರಾಟರು ಸಿದ್ಧಪಡಿಸಿರುವರೆಂಬ ಸಂಗತಿಯು ಪೌರ್ವಾ ಲ್ಲಿ ಅತ್ಯಂತ ಮಹತ್ವದ್ದಾಗಿರುತ್ತದೆ. ಈ ಮಹತ್ವ ಭಾರತೀಯರಲ್ಲಿ ಸರ್ವದಾ ಜಾಗರೂಕವಾಗಿರುವದು ಭ ದಯಕ್ಕೆ ಕಾರಣವಲ್ಲವೇ?

---

**ಸಂಪೂರ್ಣ**